|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೬

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1952

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೧)

# ಶ್ರೀ ಶಿವರಹಸ್ಯ

ಸಂಪುಟ ೧೬


ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1952

# ಮುನ್ನುಡಿ

ಈ ಭಾಗದಿಂದ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧವು ಸಮಾಪ್ತಿಗೊಳ್ಳುವುದು. ಶ್ರೀ ರುದ್ರಮಂತ್ರವಿಭಾಗ, ಅತಿರುದ್ರಾಂಗಹೋಮ, ಮಹಾ ರುದ್ರಹೋಮ, ಕೋಟಿರುದ್ರಹೋಮ ಮುಂತಾದ ಶಿವಪ್ರೀತಿಕರಗಳಾದ ಕರ್ಮ ಸ್ವರೂಪವೂ, ಶಿವಪಂಚಾಕ್ಷರೀಮಂತ್ರದ ಉತ್ಪತ್ತಿಕ್ರಮ, ಜಪವಿಧಾನ, ಚಂದ್ರ ಮೌಳೀಶ್ವರಸ್ತೋತ್ರ ಮುಂತಾದ ವಿಷಯಗಳೂ ಈ ಗ್ರಂಥದಲ್ಲಿ ಗೋಚರವಾಗುವುವು. ಶಿವಾರಾಧನೆಯು ಸರ್ವಮತೀಯರಿಗೂ ಉಂಟು. ಆದರೆ ಮಂತ್ರಾಧಿಕಾರವಿಲ್ಲದ ಅನಧಿಕಾರಿಯು ಮಾಡುವ ಶಿವಾರ್ಚನೆಯಿಂದ ವಿಧಿವತ್ತಾದ ಪೂಜಾಫಲವು ದೊರೆಯಲಾರದು. ಎಂಬುದೇ ಈ ಗ್ರಂಥಕಾರರ ಅಭಿಪ್ರಾಯ. ಅದನ್ನೇ

ಅಮಂತ್ರಕೋ ಮಾಂ ಪತಿತಃ ಪೂಜಯೇದ್ಯದಿ ಮೋಹತಃ ।
ನಾರಕೀ ಸ್ಯಾನ್ನಸಂದೇಹೋ ಮಮ ಪಂಚಾಕ್ಷರಂ ವಿನಾ ॥

ಎಂಬುದಾಗಿ ಮೂವತ್ತೇಳನೆಯ ಅಧ್ಯಾಯದಲ್ಲಿ ಹೇಳಿರುವರು. ಆದರೆ ನಿಜವಾದ ಮಂತ್ರಾಧಿಕಾರಿಯು ಯಾರೆಂಬುದನ್ನು ಚರ್ಚಿಸುತ್ತಾ ಬಂದು, ಕೊನೆಯಲ್ಲಿ ಯಾವ ನಿಗೆ ನಿಜವಾಗಿ ಶಿವಾರಾಧನೆಯಲ್ಲಿ ಮನಸ್ಸು ಪ್ರವರ್ತಿಸುವುದೋ, ಅವನೇ ಆ ಶಿವ ಮಂತ್ರಗಳಿಗೆ ಅಧಿಕಾರಿಯು; ಅವನ ಜಾತ್ಯಾದಿಗಳನ್ನು ವಿಮರ್ಶಿಸಬೇಕಾಗಿಲ್ಲ. ಅಂತಹವನಿಗೆ ಗುರೂಪದೇಶವೂ ಅಪ್ರಕೃತ, ಎಂಬುದನ್ನು

ಅನಾದಿಷ್ಟೋಪಿ ಗುರುಣಾ ಮಂತ್ರೋಯಂ ನ ಚ ನಿಷ್ಫಲಃ
ಅಂತ್ಯಜಸ್ಯಾಪಿ ಮೂಢಸ್ಯ ಮೂರ್ಖಸ್ಯ ಪತಿತಸ್ಯ ವಾ ।
ನಿರ್ಮರ್ಯಾದಸ್ಯ ನೀಚಸ್ಯ ಮಂತ್ರೋಯಂ ನ ಚ ನಿಷ್ಫಲಃ
ಸರ್ವಾವಸ್ಥಾಂ ಗತಸ್ಯಾಪಿ ಮಯಿ ಭಕ್ತಿಮತಃ ಪ್ರಿಯೇ ॥

ಈ ಶ್ಲೋಕಗಳಿಂದ ನಿರೂಪಿಸಿರುವರು. ಹಾಗೆಯೇ ಮುಂದುವರಿಯುತ್ತಾ, ಭಕ್ತನು ಭಕ್ತಿಯ ಪರಾಕಾಷ್ಠತೆಯಿಂದ ಕೂಡಿ ಶಿವಧ್ಯಾನ, ಶಿವಾರ್ಚನೆ, ಶಿವಮಂತ್ರಹೋಮ ಇವುಗಳನ್ನು ನಡೆಸುತ್ತ ಬಂದು, ಕೊನೆಗೆ ನಿರಾಕಾರ ಬ್ರಹ್ಮಸಾಕ್ಷಾತ್ಕಾರಕ್ಕೆ ಮನ ಸ್ಸಿಟ್ಟು 'ಶಿವೋಹಂ' ಎಂಬ ಭಾವನೆಯಿಂದ ಮುಕ್ತನಾಗಬೇಕು ಎಂಬ ನಿರ್ಧಾರಕ್ಕೆ ಬರುವರು. ಇತರ ಪುರಾಣಗಳಲ್ಲಿ ಹೇಳಿರುವಂತೆ, ಎಲ್ಲರೂ ಮೊದಲು ಸಾಕಾರ

ಬ್ರಹ್ಮೋಪಾಸನೆಮಾಡಿ, ಅದರಿಂದ ಚಿತ್ತಶುದ್ಧಿಯನ್ನು ಪಡೆದು ಕ್ರಮಕ್ರಮವಾಗಿ ನಿರಾಕಾರ ಬ್ರಹ್ಮತತ್ತ್ವವನ್ನು ಅನುಸಂಧಾನಮಾಡುತ್ತಾ ಮುಕ್ತನಾಗಬೇಕು ಎಂಬ ಸಿದ್ಧಾಂತವೇ ಇಲ್ಲಿಯೂ ಪ್ರತಿಪಾದಿತವಾಗಿರುವುದು. ಗ್ರಂಥಕಾರರು ಮಹಾಮಹಿಮ ರಾದುದರಿಂದಲೇ, ಕಾಲಾನುಗುಣವಾಗಿ ಬದಲಾಯಿಸುವ ಮಾನವರ ಚಿತ್ತಸ್ವರೂಪ ವನ್ನನುಸರಿಸಿ, ಅವರ ಮನಸ್ಸನ್ನು ಪರಿಪಕ್ವಗೊಳಿಸಲು ಪ್ರಯತ್ನಿಸಿ, ನಾನಾ ರೀತಿಯ ಕಥೆಗಳನ್ನು ಹೇಳುತ್ತಾ, ' ಜಗತ್ತಿನಲ್ಲಿ ಸರ್ವವೂ ಶಿವಮಯವಾದುದು. ಶಿವಾತಿರಿಕ್ತವಾದ ವಸ್ತುವೇ ಇಲ್ಲ. ಶಿವಸ್ವರೂಪವೇ ಸಚ್ಚಿದಾನಂದಾತ್ಮಕವಾದುದು. ಅದರಲ್ಲಿ ಲೀನವಾಗುವುದೇ ಶಾಶ್ವತವಾದ ಮೋಕ್ಷ " ಇತ್ಯಾದಿ ಪಾರಮಾರ್ಥಿಕತತ್ತ್ವ ಗಳನ್ನು ಭಾರತೀಯರಾದ ನಮಗೆ ವಿಶೇಷವಾಗಿ ಬೋಧಿಸಿರುವರು. ನಮ್ಮ ಜೀವನದ ನಡೆನುಡಿಗಳಲ್ಲಿ ನಾವು ಇದನ್ನನುಸರಿಸಬೇಕು. ಆಧುನಿಕಪ್ರಪಂಚದಲ್ಲಿ ಐಹಿಕಸುಖ ಕ್ಕಾಗಿ ಶ್ರಮಿಸುವವರ ಸಂಖ್ಯೆಯೇ ಅಧಿಕ. ಪಾಶ್ಚಾತ್ಯದೇಶದವರು ಐಹಿಕಸುಖಾನು ಭವದಲ್ಲಿ ನಮಗಿಂತ ಮುಂದೆ ಹೋಗಿದ್ದಾರೆ. ಈಗ ನಾವು ಇದನ್ನು ಬಿಟ್ಟು ಅವರನ್ನು ಅನುಕರಿಸಲು ಹೊರಟಿದ್ದೇವೆ. ನಮ್ಮ ಹಿಂದಿನವರು ಇದನ್ನು ತಿಳಿಯದಿದ್ದವರಲ್ಲ. ಆದರೆ ಈ ಸುಖದಲ್ಲಿ ನಿಜವಾದ ಆನಂದವಿಲ್ಲ. ದುಃಖಮಿಶ್ರವಾಗಿ ಸುಖಾಭಾಸವಾಗಿ ಕಾಣುವ ಈ ಕ್ಷಣಿಕಸುಖಕ್ಕೆ ಮರುಳಾಗುವವನೇ ನಿಜವಾದ ಅಜ್ಞಾನಿ ಎಂದು ಅವರು ಭಾವಿಸಿದ್ದರು. ಪಾಶ್ಚಾತ್ಯರಲ್ಲಿಯೂ ನಿಜವಾದ ತತ್ತ್ವವನ್ನು ಹುಡುಕುವವರು ಈ ಅಭಿಪ್ರಾಯವನ್ನೇ ಅನುಮೋದಿಸುವರು. ಒಟ್ಟಿನಲ್ಲಿ ಆಧ್ಯಾತ್ಮಿಕತತ್ತ್ವವು ನಮ್ಮ ದೇಶದ ಒಂದು ನಿಧಿ. ಇದು ಅಕ್ಷಯವಾದುದು ; ಯಾರು ಎಷ್ಟು ಇದನ್ನು ದೇಶಾಂತರಗಳಿಗೆ ಕೊಂಡೊಯ್ದರೂ ನಮ್ಮಲ್ಲಿ ಮಾತ್ರ ಇದು ಕಮ್ಮಿಯಾಗಲಾರದು. ಸರ್ವವಿಧವಾದ ಬಂಧನ ಮೋಕ್ಷಗಳಿಗೂ ಕಾರಣವಾದ ಮನಸ್ಸನ್ನು ಶುದ್ಧಿಗೊಳಿಸು ವುದೇ ಸಕಲ ದುಃಖವಿಮೋಚನೆಗೆ ಕಾರಣವೆಂಬುದನ್ನು ಸರ್ವರೂ ಅರಿಯಬೇಕು.

ಮೇಲೆ ಹೇಳಿದ ತಾತ್ತ್ವಿಕವಿಚಾರಗಳನ್ನು ನಮಗೆ ತಿಳಿಸುವ ಸಾಧನವೆಂದರೆ ಕೇವಲ ಪ್ರಾಚೀನಗ್ರಂಥಭಂಡಾರವೊಂದೇ. ಅದು ಕನ್ನಡಿಗರಿಗೆ ದುರ್ಲಭವಾಗಿತ್ತು. ಬೇರೆ ಭಾಷೆಯಿಂದ ಅಥವಾ ಆ ಭಾಷಾಭಿಜ್ಞರಿಂದ ನಮ್ಮವರ ಅಮೂಲ್ಯಾಭಿಪ್ರಾಯ ಗಳನ್ನು ಕನ್ನಡಿಗರು ಅರಿಯಬೇಕಾಗಿದ್ದಿತು. ಆ ಕೊರತೆಯನ್ನು ನಿವಾರಿಸಿ, ಕನ್ನಡ ಭಾಷೆಯನ್ನು ತಾತ್ತ್ವಿಕಗ್ರಂಥಪ್ರದರ್ಶನದಲ್ಲಿ ಇತರ ಭಾಷೆಗಳಿಗೆ ಸಮವನ್ನಾಗಿ ಮಾಡಿದ ಲೋಕೋತ್ತರವಾದ ಕೀರ್ತಿ, ಈ ಗ್ರಂಥಗಳ ಪ್ರಕಾಶಕ್ಕೆ ಮುಖ್ಯಕಾರಣ ರೆನಿಸಿದ ನಮ್ಮ ಪ್ರಭುವರ್ಯರಿಗೆ ಸಲ್ಲಬೇಕಾಗಿದೆ. ಹೀಗೆ ಕೀರ್ತಿಭಾಜನ

ರಾಗಿ, ಸಚ್ಚರಿತ್ರರೆನಿಸಿ, ಮಾದರಿಯ ಮಹಾರಾಜರಾಗಿ, ನಮ್ಮನ್ನಾಳುತ್ತಿರುವ ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ. ಎಸ್.ಐ. ಮಹಾಪ್ರಭುಗಳಿಗೂ ಅವರ ಕುಟುಂಬವರ್ಗಕ್ಕೂ ಸರ್ವೇಶ್ವರನು ಸಕಲ ಸನ್ಮಂಗಳಗಳನ್ನೊದಗಿಸಿ ಸಲಹುತ್ತಿರಲೆಂದು ಭಕ್ತಿಪೂರ್ವಕವಾಗಿ ನಾನು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಶ್ರೀಖರಸಂವತ್ಸರದ
ಫಾಲ್ಗುಣ ಕೃಷ್ಣ ಷಷ್ಠೀ
ಸೋಮವಾರ
13—3—1952

ಸಜ್ಜನವಿಧೇಯ,
ಹೊನ್ನೇನಹಳ್ಳಿ, ಗಂಗಾಧರಶಾಸ್ತ್ರೀ,
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯ ಧಶಮಾಂಶ ಪೂರ್ವಾರ್ಧದ
# ವಿಷಯಾನುಕ್ರಮಣಿಕೆ
## (ಅಧ್ಯಾಯ ೩೧ ರಿಂದ ೫೦ ರ ಪೂರ್ತಿ)

---

### ಮೂವತ್ತೊಂದನೆಯ ಅಧ್ಯಾಯ



### ಮೂವತ್ತೆರಡನೆಯ ಅಧ್ಯಾಯ



### ಮೂವತ್ತುಮೂರನೆಯ ಅಧ್ಯಾಯ



### ಮೂವತ್ತುನಾಲ್ಕನೆಯ ಅಧ್ಯಾಯ



### ಮೂವತ್ತೈದನೆಯ ಅಧ್ಯಾಯ



### ಮೂವತ್ತಾರನೆಯ ಅಧ್ಯಾಯ



### ಮೂವತ್ತೇಳನೆಯ ಅಧ್ಯಾಯ



### ಮೂವತ್ತೆಂಟನೆಯ ಅಧ್ಯಾಯ



### ಮೂವತ್ತೊಂಬತ್ತನೆಯ ಅಧ್ಯಾಯ

## ನಲವತ್ತನೆಯ ಅಧ್ಯಾಯ



## ನಲವತ್ತೊಂದನೆಯ ಅಧ್ಯಾಯ



## ನಲವತ್ತೆರಡನೆಯ ಅಧ್ಯಾಯ



## ನಲವತ್ತುಮೂರನೆಯ ಅಧ್ಯಾಯ



## ನಲವತ್ತುನಾಲ್ಕನೆಯ ಅಧ್ಯಾಯ



## ನಲವತ್ತೈದನೆಯ ಅಧ್ಯಾಯ



## ನಲವತ್ತಾರನೆಯ ಅಧ್ಯಾಯ



## ನಲವತ್ತೇಳನೆಯ ಅಧ್ಯಾಯ



## ನಲವತ್ತೆಂಟನೆಯ ಅಧ್ಯಾಯ



## ನಲವತ್ತೊಂಬತ್ತನೆಯ ಅಧ್ಯಾಯ



## ಐವತ್ತನೆಯ ಅಧ್ಯಾಯ





॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಏಕತ್ರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಹೋಮೇಽಪಿ ಶಂಚಮೇ ಸೂಕ್ತಮಾದಾವೇಕಾಹುತಿಂ ಚರೇತ್ ।
ನಮಸ್ತೇ ಪ್ರಥಮೋ ಮಂತ್ರೋ ದ್ವಿತೀಯೋ ಯಾತ ಇತ್ಯಥ ॥೧॥

ಯಾತೇ ರುದ್ರೇತಿ ವಿದ್ಯಾ ಸ್ಯಾದ್ಯಾಮಿಷುಂ ಗಿರಿಶಂ ತಥಾ ।
ಶಿವೇನ ವಚಸಾತ್ವೇತಿ ಹ್ಯಧ್ಯವೋಚದಥಾಪರಾ ॥೨॥

---

## ಮೂವತ್ತೊಂದನೆಯ ಅಧ್ಯಾಯ

ಶ್ರೀರುದ್ರ ಹೋಮಮಾಡುವಾಗಲೂ ಸಹ ಮೊದಲು 'ಶಂಚಮೇ' ಎಂಬ ಚಮಕಾಧ್ಯಾಯದ ಸೂಕ್ತವನ್ನು ಹೇಳಿ, ಸೂಕ್ತಾಂತದಲ್ಲಿ ಒಂದು ಆಹುತಿ ಕೊಟ್ಟು ಅನಂತರ ರುದ್ರಮಂತ್ರಗಳಿಂದ ಹೋಮಮಾಡಲಾರಂಭಿಸಬೇಕು. ಅದರಲ್ಲಿ 'ನಮಸ್ತೇ ರುದ್ರಮನ್ಯವ ಉತೋತ ಇಷವೇನಮಃ।ನಮಸ್ತೇ ಅಸ್ತುಧನ್ವನೇ ಬಾಹುಭ್ಯಾಮುತತೇ ನಮಃ ।' ಎಂಬ ಮಂತ್ರವು ಮೊದಲನೆಯದು. (ಪರಮೇಶ್ವರನೇ, ಶತ್ರುನಾಶಕರವಾದ ನಿನ್ನ ಕೋಪಕ್ಕೂ, ಮಹಾಮಹಿಮೆಯುಳ್ಳ ನಿನ್ನ ಬಾಣಗಳಿಗೂ, ಬಿಲ್ಲಿಗೂ, ಬಲಿಷ್ಠವಾದ ನಿನ್ನ ಬಾಹುಗಳಿಗೂ ನಮಸ್ಕಾರ.) 'ಯಾತ ಇಷುಶ್ಶಿವತಮಾ ಶಿವಂ ಬಭೂವತೇ ಧನುಃ । ಶಿವಾಶರವ್ಯಾಯಾತವತಯಾನೋರುದ್ರಮೃಡಯ ।' ಎಂಬುದು ಎರಡನೆಯದು. (ಶತ್ರುನಿಗ್ರಹದಿಂದ ಶಾಂತಮಯವಾಗಿರುವ ನಿನ್ನ ಬಿಲ್ಲು, ಬಾಣ, ಬತ್ತಳಿಕೆಗಳು ನಮ್ಮನ್ನು ಕಾಪಾಡಲಿ. ಪರಶಿವನೇ, ನಿನ್ನ ಅಂತಹ ಧನುರಾದಿಗಳಿಂದ ನಮಗೆ ಸುಖವನ್ನುಂಟುಮಾಡು.) 'ಯಾತೇ ರುದ್ರಶಿವಾತನೂರಘೋರಾಪಾಪ

ಅಸೌ ಯಸ್ತಾಮ್ರ ಇತ್ಯಸ್ಯ ತಥಾಸೌ ಯೋಽವಸರ್ಪತಿ ।
ನಮೋ ಅಸ್ತ್ವಿತಿ ಮಂತ್ರೋಽಯಂ ಪ್ರಮುಂಚೇತಿ ಪರೋಮನುಃ॥೩॥

---

ಕಾಶಿನೀ । ತಯಾನಸ್ತನುವಾಶಂತಮಯಾಗಿರಿಶಂತಾಭಿಚಾಕಶೀಹಿ ।' ಎಂಬುದು ಮೂರನೆಯದು. (ರುದ್ರದೇವನೇ, ನೀನು ಕೈಲಾಸದಲ್ಲಿ ನಿಂತು ಭೂಮಿಯಲ್ಲಿರುವ ಪ್ರಾಣಿಗಳಿಗೆ ಸೌಖ್ಯವನ್ನುಂಟುಮಾಡುವ ಮಹಾಮಹಿಮನು, ಯಾರಿಗೂ ಹಿಂಸಾ ಜನಕವಾಗದಿರುವ ನಿನ್ನ ಅಘೋರರೂಪವಾದ ಶಾಂತದೇಹವನ್ನು ನನಗೆ ಪ್ರತ್ಯಕ್ಷ ಗೊಳಿಸಿ ಅದರಿಂದ ನನಗೆ ಸೌಖ್ಯವುಂಟಾಗುವಂತೆ ಮಾಡು.) ' ಯಾಮಿಷುಂ ಗಿರಿಶಂತ ಹಸ್ತೇ ಬಿಭರ್ಷ್ಯಸ್ತವೇ ಶಿವಾಂಗಿರಿತ್ರ ತಾಂ ಕುರುಮಾಹಿಗ್ಂಸೀಃ ಪುರುಷಂ ಜಗತ್ .' ಎಂಬುದು ನಾಲ್ಕನೆಯದು. (ಕೈಲಾಸಾಧಿಪತಿಯೇ, ಕೈಲಾಸರಕ್ಷಕನೇ, ಶತ್ರುಧ್ವಂಸ ಮಾಡಲುದ್ದೇಶಪೂರ್ವಕವಾಗಿ ಧನುರ್ಬಾಣಗಳನ್ನು ನೀನು ಕೈಯ್ಯಲ್ಲಿ ಧರಿಸಿರುವೆ ಯಲ್ಲವೆ! ಅಂತಹ ಉಗ್ರವಾದ ಬಾಣವು, ಮನುಷ್ಯರೂಪವಾದ ಮತ್ತು ಗವಾದಿ ರೂಪವಾದ ಸಮಸ್ತ ಜಂಗಮಪ್ರಾಣಿಗಳನ್ನೂ ಶಾಂತರೂಪದಿಂದಿದ್ದು ಕಾಪಾಡುತ್ತಿರಲಿ.) ' ಶಿವೇನ ವಚಸಾ ತ್ವಾ ಗಿರಿಶಾಚ್ಛಾವದಾಮಸಿ।ಯಥಾನಸ್ಸರ್ವಮಿಜ್ಜಗದಯಕ್ಷ್ಮಗ್ಂ ಸುಮನಾ ಅಸತ್ ।' ಎಂಬುದು ಮುಂದಿನದು. (ಗಿರೀಶನೇ, ನಾವು ನಿನ್ನನ್ನು ಸ್ತುತಿರೂಪವಾದ ವಚನಗಳಿಂದ ನಿನ್ನ ಸನ್ನಿಧಿಯನ್ನು ಪಡೆಯಲು ಪ್ರಾರ್ಥಿಸು ತ್ತೇವೆ. ಈ ಜಗತ್ತಿನಲ್ಲಿರುವ ಮನುಷ್ಯಪಶ್ವಾದಿರೂಪವಾದ ಸಕಲ ಪ್ರಾಣಿಗಳನ್ನೂ ಆರೋಗದೃಢಕಾಯರನ್ನಾಗಿ ಮಾಡಿ ಸಂರಕ್ಷಿಸು.)' ಅಧ್ಯವೋಚದಧಿವಕ್ತಾ ಪ್ರಥಮೋ ದೈವ್ಯೋಭಿಷಕ್ । ಅಹೀಗ್ಂಶ್ಚ ಸರ್ವಾನ್ ಜಂಭಯನ್ ಸರ್ವಾಶ್ಚಯಾತುಧಾನ್ಯಃ ।' ಎಂಬುದು ಇನ್ನೂ ಮುಂದಿನದು. (ಸಕಲ ದೇವತೆಗಳನ್ನೂ ನೀನು ರಕ್ಷಿಸುವವ ನಾದುದರಿಂದ ನಾನು ನಿನ್ನನ್ನು ದೇವಶ್ರೇಷ್ಠನೆಂದು ಹೊಗಳುವೆನು. ಪ್ರಾಣಿಗಳ ರೋಗಾದಿಗಳನ್ನು ಕೇವಲ ಧ್ಯಾನಮಾತ್ರದಿಂದಲೇ ನಿವಾರಣೆ ಮಾಡುವ ನೀನು ಭವರೋಗವೈದ್ಯನೆನಿಸಿರುವೆ. ಪ್ರಾಣಿಗಳಿಗೆ ಹಿಂಸೆಯನ್ನು ಕೊಡುವ ಸರ್ಪವ್ಯಾಘ್ರಾದಿ ದುಷ್ಟಪ್ರಾಣಿಗಳನ್ನು ನಾಶಗೊಳಿಸಿ ನಮ್ಮನ್ನುದ್ಧರಿಸು). ॥೧-೨॥

' ಅಸೌಯಸ್ತಾಮ್ರೋ ಅರುಣ ಉತಬಭ್ರುಸ್ಸುಮಂಗಲಃ । ಯೇಚೇಮಾಗ್ಂ ರುದ್ರಾ ಅಭಿತೋದಿಕ್ಷು।ಶ್ರಿತಾಃ ಸಹಸ್ರಶೋಽವೈಷಾಗ್ಂ ಹೇಡಈಮಹೇ ।' ಎಂಬುದು ಮುಂದಿನಮಂತ್ರವು.(ಪರಶಿವನು ಸೂರ್ಯಮಂಡಲದಲ್ಲಿ ಆದಿತ್ಯರೂಪನಾಗಿದ್ದು ಉದಯ ಕಾಲದಲ್ಲಿ ಅತ್ಯಂತ ಕೆಂಪುಬಣ್ಣವುಳ್ಳವನಾಗಿಯೂ, ಉದಯಾನಂತರ ಈಶದ್ರಕ್ತವರ್ಣ

ಅವತತ್ಯೇತಿ ಮಂತ್ರೋsನ್ಯೋ ವಿಜ್ಯಂಧನುರಥಾಪರಃ ।
ಯಾತೇ ಹೇತಿಸ್ತಥಾ ವಿದ್ಯಾ ನಮಸ್ತೇsಸ್ತ್ವ ತಥಾಪರಃ ॥೪॥

---

ವಿಶಿಷ್ಟನಾಗಿಯೂ, ಅಸ್ತಮಯಕಾಲದಲ್ಲಿ ಪಿಂಗಳವರ್ಣದವನಾಗಿಯೂ, ಹಾಗೆಯೇ ಕಾಲಾನುಗತವಾಗಿ ಬೇರೆಬೇರೆ ವರ್ಣಗಳಿಂದ ತೋರಿಬರುತ್ತಾ, ಜಗತ್ತಿನ ಅಂಧಕಾರ ವನ್ನು ನಿವೃತ್ತಿಗೊಳಿಸಿ ಮಂಗಳಸ್ವರೂಪನೆನಿಸಿಕೊಂಡಿರುವನು. ಮತ್ತು ಸೂರ್ಯಕಿರಣ ರೂಪದಿಂದ ಎಲ್ಲೆಡೆಯಲ್ಲಿಯೂ ಪ್ರವೇಶಿಸುವ ರುದ್ರರೂಪವಾದ ಪರಶಿವನ ಅಂಶಗಳು ಎಲ್ಲ ದಿಕ್ಕುಗಳಲ್ಲಿಯೂ ಸಹಸ್ರಾರು ಸಂಖ್ಯೆಯಿಂದ ಕ್ರೋಧವಿಶಿಷ್ಟಗಳಾಗಿರುವುವು. ಅಂತಹ ರುದ್ರಕೋಪಾದಿಗಳನ್ನು ನಾವು ಈಗ ಭಕ್ತಿಪೂರ್ವಕವಾದ ನಮಸ್ಕಾರಾದಿಗ ಳಿಂದ ನಿವಾರಣೆಮಾಡುತ್ತೇವೆ.) 'ಅಸೌಯೋsವಸರ್ಪತಿ ನೀಲಗ್ರೀವೋ ವಿಲೋಹಿತಃ। ಉತೈನಂ ಗೋಪಾ ಅದೃಶನ್ನದೃಶನ್ನುದಹಾರ್ಯಃ । ಉತೈನಂ ವಿಶ್ವಾಭೂತಾನಿ ಸದೃಷ್ಟೋ ಮೃಡಯಾತಿನಃ ।' (ಕಾಲಕೂಟವಿಷಧಾರಣೆಯಿಂದ ನೀಲಗ್ರೀವನೆನಿಸಿದ ಮಹೇಶ್ವರನು ರಕ್ತವರ್ಣದಿಂದ ಶೋಭಿಸುತ್ತಾ ಸೂರ್ಯಮಂಡಲಮಧ್ಯವರ್ತಿಯಾಗಿ ವಿರಾಜಿಸುತ್ತಿರುವುದರಿಂದಲೇ, ವೇದಶಾಸ್ತ್ರಸಂಸ್ಕಾರರಹಿತರಾದ ಗೋಪಾಲಕರು ಕೂಡ, ಅಂತಹ ಮಹಾದೇವನನ್ನು ಸೂರ್ಯರೂಪದಿಂದ ನೋಡಿ ತಮ್ಮ ಪಾಪವನ್ನು ಪರಿಹರಿಸಿಕೊಳ್ಳುವರು. ಹೀಗೆ ಸರ್ವರಿಗೂ ಸುಲಭವಾಗಿ ದರ್ಶನಕೊಡುವ ಮಹೇಶ್ವರನನ್ನು ನೀರು ಹೊರುವಂತಹ ಹೆಂಗಸರೂ, ಗೋವು, ಎಮ್ಮೆ ಮುಂತಾದ ತಿರ್ಯಗ್ಜಂತುಗಳೂ ಕೂಡ ನೋಡಿ ಆನಂದಪಡುವರು. ಕೈಲಾಸದಲ್ಲಿ ವಿರಾಜಿಸುವ ಶಂಕರನಾದರೋ ಕೇವಲ ಯೋಗಿಗಳಿಗೆ ಮಾತ್ರ ಗೋಚರಿಸುವನೇ ಹೊರತು ಇತರರಿಗೆ ಸುಲಭನೆನಿಸಲಾರನು. ಅದರಿಂದಲೇ ಹೀಗೆ ಸುಲಭಗೋಚರನೆನಿಸಿದ ಮಹಾದೇವನು ನಮ್ಮೆಲ್ಲರಿಗೂ ಸುಖವನ್ನುಂಟುಮಾಡಲಿ.) 'ನಮೋ ಅಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಮೀಢುಷೇ । ಅಥೋಯೇ ಅಸ್ಯಸತ್ವಾನೋsಹಂತೇ ಭ್ಯೋsಕರಂ ನಮಃ ।' (ನೀಲಗ್ರೀವನೆನಿಸಿದ ಶಂಕರನಿಗೂ, ಇಂದ್ರರೂಪದಿಂದ ಸಹಸ್ರಾಕ್ಷನೆನಿಸಿರುವ ಮಹೇಶ್ವರನಿಗೂ, ಮೇಘರೂಪದಿಂದ ವೃಷ್ಟಿಪ್ರದನಾಗಿರುವ ಮಹಾದೇವನಿಗೂ, ನಮಸ್ಕರಿಸುವೆನು. ಹಾಗೆಯೇ, ಪ್ರಪಂಚದಲ್ಲಿ ಮಹೇಶ್ವರನ ಭೃತ್ಯರೂಪದಲ್ಲಿರುವ ಸಮಸ್ತ ಪ್ರಾಣಿಗಳಿಗೂ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುತ್ತೇನೆ.) 'ಪ್ರಮುಂಚಧನ್ವನಸ್ತ್ವಮುಭಯೋ ರಾರ್ತ್ನಿಯೋರ್ಜ್ಯಾಂ ಯಾಶ್ಚತೇ ಹಸ್ತಇಷವಃ ಪರಾತಾಭಗವೋವಪ ।' (ಮಹದೈಶ್ವರ್ಯಸಂಪನ್ನನಾದ ಶಂಕರನೇ, ನೀನು ಶತ್ರುಸಂಹಾರಕ್ಕಾಗಿ ನಿನ್ನ ಧನುಸ್ಸಿನ ಎರಡು ತುದಿಗಳಿಗೂ

ಪರಿತೇ ಧನ್ವನ ಇತಿ ನಮೋ ಹಿರಣ್ಯಬಾಹವೇ ।
ನಮೋ ವೃಕ್ಷೇಭ್ಯ ಇತ್ಯನ್ಯೋ ನಮಃ ಸಸ್ಪಿಂಜರಾಯ ಚ ॥೫॥

---

ಬಲವಾಗಿ ಕಟ್ಟಿರುವ ಮೌರ್ವಿಯನ್ನು ಸಡಿಲಗೊಳಿಸು. ಅಂತಹ ಧನುಸ್ಸಿಗೆ ಜೋಡಿಸಬೇಕೆಂದಿರುವ ನಿನ್ನ ಹಸ್ತಗತವಾದ ಬಾಣವನ್ನೂ ದೂರಹಾಕು. ಪ್ರಸನ್ನ ರೂಪದಿಂದ ನೀನು ನನಗ ದರ್ಶನಕೊಡು.) 'ಅವತತ್ಯ ಧನುಸ್ತ್ವಗ್ಂ ಸಹಸ್ರಾಕ್ಷ ಶತೇಷುಧೇ । ನಿಶೀರ್ಯಶಲ್ಯಾನಾಂ ಮುಖಾ ಶಿವೋ ನಃ ಸುಮನಾಭವ ।' (ಸಹಸ್ರ ನೇತ್ರಮಯನಾಗಿ ಇಂದ್ರರೂಪದಿಂದ ತೋರಿಬರುವ ಮಹೇಶ್ವರನೇ, ಅನೇಕ ಬತ್ತಳಿಕೆಗಳನ್ನು ಹೊಂದಿರುವ ಧನುರ್ಧಾರಿಯೇ, ನೀನು ನಿನ್ನ ಯುದ್ಧಸನ್ನದ್ಧವಾದ ಧನುಸ್ಸನ್ನು ಉಪಸಂಹರಿಸಿ, ಚೂಪಾದ ಮೊನೆಗಳುಳ್ಳ ಬಾಣಗಳನ್ನು ಕೆಳಮುಖವಾಗಿ ಮಾಡಿ ಬತ್ತಳಿಕೆಯೊಳಗೆ ಅಡಗಿಸು. ಸೌಮ್ಯಮೂರ್ತಿಯೆನಿಸಿ, ಅನುಗ್ರಹಪ್ರದವಾದ ಆಕಾರದಿಂದ ನಮ್ಮನ್ನು ನೋಡಿ ರಕ್ಷಿಸು.) 'ವಿಜ್ಯಂಧನುಃ ಕಪರ್ದಿನೋ ವಿಶಲ್ಯೋ ಬಾಣವಾಗ್ಂ ಉತ । ಅನೇಶನ್ನಸ್ಯೇಶವ ಆಭುರಸ್ಯನಿಷಂಗಥಿಃ ।' (ಜಟಾಜೂಟ ದಿಂದ ಶೋಭಿಸುತ್ತಿರುವ ಪರಮೇಶ್ವರನ ಧನುಸ್ಸು ಮೌರ್ವೀರಹಿತವಾಗಲಿ. ಸಮಸ್ತ ಬಾಣಗಳನ್ನು ಒಳಗೊಂಡ ಬತ್ತಳಿಕೆಯು ಶಲ್ಯರಹಿತಗಳಾಗಲಿ. ರುದ್ರದೇವನ ಬಾಣಗಳು ಬತ್ತಳಿಕೆಯಲ್ಲಿ ಅಡಗಿದ್ದು ಹೊರಗೆ ಬರುವ ಸಾಮರ್ಥ್ಯವನ್ನು ತ್ಯಜಿಸಲಿ. ರುದ್ರನ ಕತ್ತಿಗೆ ಆಧಾರವಾಗಿರುವ ಕೋಶವು ಕೇವಲ ಕತ್ತಿಯನ್ನು ಮುಚ್ಚುವ ಸಾಮರ್ಥ್ಯದಿಂದಿರಲಿ. ಹೊರಗೆಡುವಂತಹ ಶಕ್ತಿಯನ್ನು ಅದು ಎಂದೂ ಹೊಂದ ದಿರಲಿ.) 'ಯಾತೇ ಹೇತಿರ್ಮೀಢುಷ್ಟಮಹಸ್ತೇ ಬಭೂವತೇ ಧನುಃ ತಯಾಸ್ಮಾ ನ್ವಿಶ್ವತಸ್ತ್ವಮಯಕ್ಷ್ಮಯಾ ಪರಿಬ್ಭುಜ ।' (ಭಕ್ತರಿಗೆ ಅತಿಶಯವಾದ ಇಷ್ಟಾರ್ಥ ಗಳನ್ನು ಸಲ್ಲಿಸುವವನೇ, ನಿನ್ನ ಖಡ್ಗಾದಿರೂಪಗಳಾದ ಸಕಲ ಆಯುಧಗಳೂ, ಧನೂರೂಪದಿಂದಿರುವ ನಿನ್ನ ಬಿಲ್ಲೂ, ಯಾರಿಗೂ ಉಪದ್ರವವನ್ನುಂಟುಮಾಡದೆ, ನಮ್ಮನ್ನೂ ಪ್ರಪಂಚದಲ್ಲಿರುವ ಇತರ ಸಾಧುಪ್ರಾಣಿಗಳನ್ನೂ ಸದಾ ಸಂರಕ್ಷಿಸುತ್ತಿರಲಿ.) 'ನಮಸ್ತೇ ಅಸ್ತ್ವಾಯುಧಾಯಾನಾತತಾಯಧೃಷ್ಣವೇ । ಉಭಾಭ್ಯಾಮುತತೇ ನಮೋ ಬಾಹುಭ್ಯಾಂ ತವ ಧನ್ವನೇ ।' (ಧನುಸ್ಸಿನಲ್ಲಿ ಸೇರದೆ ಸ್ವತಂತ್ರರೂಪದ ಲ್ಲಿರುವ ನಿನ್ನ ಬಾಣಕ್ಕೂ, ಸ್ವತಂತ್ರವಾಗಿ ಶತ್ರುಸಂಹಾರ ಮಾಡಬಲ್ಲ ನಿನ್ನ ಇತರ ಆಯುಧಗಳಿಗೂ, ಮಹಾಬಲಿಷ್ಠಗಳೆನಿಸಿರುವ ಎರಡು ಬಾಹುಗಳಿಗೂ ಧನುಸ್ಸಿಗೂ ಅನಂತವಂದನೆಗಳು.) 'ಪರಿತೇ ಧನ್ವನೋ ಹೇತಿರಸ್ಮಾನ್ ವೃಣಕ್ತು ವಿಶ್ವತಃ ಅಥೋಯ ಇಷುಧಿಸ್ತವಾರೇ ಅಸ್ಮನ್ನಿಧೇಹಿತಂ ।' (ಪರಮೇಶ್ವರನೇ, ನಿನ್ನ

ಸಾ ನಮೋ ಬಭ್ಲುಶಾಯೇತಿ ನಮೋ ಹರಿಕೇಶಾಯ ಇತ್ಯಥ ।
ನಮೋ ಭವಸ್ಯ ಹೇತ್ಯೈ ಸಾ ನಮೋರುದ್ರಾಯ ಮಂತ್ರಕಃ ॥೬॥

---

ಬಾಣಗಳೂ, ಶಲ್ಯರೂಪದಲ್ಲಿರುವ ಇತರ ಆಯುಧಗಳೂ, ಸರ್ವ ಬಾಣಗಳಿಗೂ ಆಶ್ರಯವಿತ್ತಿರುವ ಬತ್ತಳಿಕೆಯೂ ನಮ್ಮನ್ನು ಸದಾ ಸಲಹುತ್ತಿರಲಿ. ನಮ್ಮ ವೈರಿಗಳು ನಮ್ಮನ್ನು ನೋಡಿ ದೂರದಲ್ಲಿಯೇ ನಿಲ್ಲಲಿ. ಭಯಪ್ರದಗಳಾದ ನಿನ್ನ ಧನುರ್ಬಾಣಾದಿಗಳು ನಮ್ಮನ್ನು ಹಿಂಸಿಸದೆ ಪ್ರಸನ್ನಗಳಾಗಿರಲಿ.) 'ನಮೋ ಹಿರಣ್ಯಬಾಹವೇ ಸೇನಾನ್ಯೇದಿಶಾಂಚಪತಯೇ ನಮಃ । ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ಪಶೂನಾಂಪತಯೇ ನಮಃ । ' (ಹಿರಣ್ಯಮಯವಾದ ಆಭರಣಗಳಿಂದ ರಂಜಿಸುವ ತೋಳುಗಳುಳ್ಳ ಮಹಾದೇವನೇ, ನಿನಗೆ ನಮಸ್ಕಾರ. ಯುದ್ಧದಲ್ಲಿ ವೀರಸೇನಾಪತಿ ಯೆನಿಸಿಕೊಂಡು, ಸಮಸ್ತ ದಿಕ್ಕುಗಳನ್ನೂ ಪಾಲಿಸುವ ನಿನಗೆ ವಂದನೆ. ಹಸುರು ಎಲೆಗಳಿಂದ ಕೂಡಿರುವ ವೃಕ್ಷರೂಪಿಯಾದ, ಅಜ್ಞಾನಿಗಳೆನಿಸಿದ ಪಶುವರ್ಗಕ್ಕೆ ಒಡೆಯನಾದ ಪರಶಿವನಿಗೆ ವಂದನೆ.) 'ನಮಸ್ಸಸ್ಪಿಂಜರಾಯತ್ವಿಷೀಮತೇ ಪಥೀನಾಂ ಪತಯೇ ನಮಃ । ' (ಎಳೆ ಗರುಕೆಯಂತೆ, ಹಳದಿ ಕೆಂಪುಮಿಶ್ರವಾದ ವರ್ಣದಿಂದ ರಂಜಿಸುವ ಮಹೇಶ್ವರನೇ, ನಿನಗೆ ಪ್ರಣಾಮವು. ದೀಪ್ತಿಮತ್ತಾಗಿ ಪ್ರಕಾಶಿಸುವ ಈಶ್ವರಮೂರ್ತಿಗೂ ವಂದನೆ. ಸಮಸ್ತ ಮಾರ್ಗಗಳಲ್ಲಿಯೂ ರಕ್ಷಕನಾಗಿ ಕಾಣುವ ಶಂಕರನೇ, ನಿನಗೆ ವಂದನೆ. ॥೩-೪-೫॥

'ನಮೋ ಬಭ್ಲುಶಾಯ ವಿವ್ಯಾಧಿನೇಽನ್ನಾನಾಂ ಪತಯೇ ನಮಃ । ' (ವೃಷಭಾರೂಢನಾಗಿಯೂ, ಶತ್ರುನಾಶಕನಾಗಿಯೂ ಇರುವ ರುದ್ರನಿಗೆ ನಮಸ್ಕಾರ. ಜಗತ್ತಿನಲ್ಲಿರುವ ಪ್ರಾಣಿಗಳೆಲ್ಲಕ್ಕೂ ಜೀವನಾಧಾರಭೂತವಾಗಿರುವ ಶಂಕರನಿಗೆ ವಂದನೆ.) 'ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮಃ । ' (ನೊರೆಗೂದಲಿಲ್ಲದೆ ಸದಾ ಕಪ್ಪುಗೂದಲುಳ್ಳವನೂ, ಮಂಗಳಪ್ರದನಾಗಿ ಯಜ್ಞೋಪವೀತವನ್ನು ಧರಿಸಿರುವವನೂ, ಪರಿಪೂರ್ಣಗುಣಭರಿತರಾದ ಸತ್ಪುರುಷರಿಗೆ ಅಧಿಪತಿಯೂ ಆದ ಶಂಕರನಿಗೆ ವಂದನೆ.) 'ನಮೋ ಭವಸ್ಯಹೇತ್ಯೈ ಜಗತಾಂ ಪತಯೇ ನಮಃ । ' (ಸಂಸಾರವೆಂಬ ಮಹಾಶತ್ರುವನ್ನು ನಾಶಗೊಳಿಸುವ ದಿವ್ಯಾಯುಧದಂತಿರುವ ಮತ್ತು ಸಮಸ್ತ ಜಗತ್ತಿಗೂ ಪಾಲಕನೆನಿಸಿರುವ ಮಹಾದೇವನೇ, ನಿನಗೆ ನಮಸ್ಕಾರ) 'ನಮೋ ರುದ್ರಾಯಾತತಾವಿನೇ ಕ್ಷೇತ್ರಾಣಾಂ ಪತಯೇ ನಮಃ । ' (ಸರ್ವತ್ರವ್ಯಾಪಿಸಿರುವ ಧನುಸ್ಸಿನಿಂದ ಸರ್ವರನ್ನೂ ರಕ್ಷಿಸುವ ರುದ್ರನಿಗೂ,

ನಮಃ ಸೂತಾಯ ವಿದ್ಯಾನ್ಯಾ ನಮೋ ರೋಹಿತಾಯೇತ್ಯಥ ।
ಸಾ ನಮೋ ಮಂತ್ರಿಣೇ ವಿದ್ಯಾ ನಮೋ ಭುವಮಥಾಪರಾ ॥೭॥

ನಮ ಉಚ್ಚೈಸ್ತಥಾ ವಿದ್ಯಾ ನಮಃ ಕೃತ್ಸ್ನೇತ್ಯಥಾಪರಾ ।
ಸಾ ನಮಃ ಸಹಮಾನಾಯ ಕಕುಭಾಯ ಚ ತಂ ತತಃ ॥೮॥

---

ಸಮಸ್ತ ಭೂಭಾಗವನ್ನೂ ಪಾಲಿಸುವ ದೇವನಿಗೂ ಪ್ರಣಾಮವು) 'ನಮಃ ಸೂತಾಯಾಹಂತ್ಯಾಯ ವನಾನಾಂ ಪತಯೇ ನಮಃ ।' (ಸಾರಥಿರೂಪದಿಂದಲೂ, ಶತ್ರುವಿಗೆ ಅವಧ್ಯವಾದ ರೂಪದಿಂದಲೂ, ವನಪಾಲಕವೇಷದಿಂದಲೂ ಕಂಡುಬರುವ ರುದ್ರರೂಪನಿಗೆ ನಮಸ್ಕಾರ.) 'ನಮೋ ರೋಹಿತಾಯಸ್ಥಪತಯೇ ವೃಕ್ಷಾಣಾಂ ಪತಯೇ ನಮಃ ।' (ರಕ್ತವರ್ಣದಿಂದ ಶೋಭಿಸುತ್ತಾ ಸರ್ವಪ್ರಭುವೆನಿಸಿರುವ ಮತ್ತು ವೃಕ್ಷಪಾಲಕನಾಗಿರುವ ಮಹೇಶ್ವರನಿಗೆ ನಮಸ್ಕಾರ.) 'ನಮೋ ಮಂತ್ರಿಣೇ ವಾಣಿಜಾಯ ಕಕ್ಷ್ಯಾಣಾಂ ಪತಯೇ ನಮಃ ।' (ರಾಜಸಭೆಯಲ್ಲಿ ಮಂತ್ರಾಲೋಚನನಿಪುಣನಾಗಿಯೂ, ವೈಶ್ಯಜನಾಂಗಕ್ಕೆ ಸ್ವಾಮಿಯಾಗಿಯೂ, ಅರಣ್ಯದಲ್ಲಿರುವ ಗುಲ್ಮಾದಿಗಳಿಗೆ ರಕ್ಷಕನಾಗಿಯೂ ಇರುವ ರುದ್ರನಿಗೆ ವಂದನೆ.) 'ನಮೋ ಭುವಂತಯೇ ವಾರಿವಸ್ಕೃತಾಯೌಷಧೀನಾಂ ಪತಯೇ ನಮಃ ।' (ಭೂಮಿಯನ್ನು ವಿಸ್ತರಿಸುವವನೂ, ಸಕಲ ಧನವನ್ನೂ ಸೃಷ್ಟಿಮಾಡುವವನೂ, ಗ್ರಾಮ, ಅರಣ್ಯ ಇವುಗಳಲ್ಲಿ ಮೂಲಿಕೆಗಳ ರೂಪದಿಂದ ರಂಜಿಸುವವನೂ ಆದ ರುದ್ರನಿಗೆ ನಮಸ್ಕಾರ.) 'ನಮ ಉಚ್ಚೈರ್ಘೋಷಾಯಾಕ್ರಂದಯತೇ ಪತ್ತೀನಾಂ ಪತಯೇ ನಮಃ ।' (ಯುದ್ಧಕಾಲದಲ್ಲಿ ಗಟ್ಟಿಯಾಗಿ ಧ್ವನಿಮಾಡುವವನೂ, ವೈರಿಗಳು ಸದಾ ಅರಚಿಕೊಳ್ಳುವಂತೆ ಮಾಡುವವನೂ, ಯುದ್ಧದಲ್ಲಿ ಪಾದಚಾರಿಗಳಾಗಿ ಸಂಚರಿಸುವ ಸೈನಿಕರಿಗೆ ರಕ್ಷಕನಾಗಿರುವವನೂ ಆದ ರುದ್ರದೇವನಿಗೆ ವಂದನೆ.) 'ನಮಃ ಕೃತ್ಸ್ನವೀತಾಯ ಧಾವತೇ ಸತ್ವನಾಂ ಪತಯೇ ನಮಃ ।' (ಸಮಸ್ತ ಸೈನ್ಯದ ಮಧ್ಯವರ್ತಿಯಾಗಿ, ಹೆದರಿಕೆಯಿಂದ ಓಡಿಹೋಗುವ ಶತ್ರುಸೈನ್ಯವನ್ನು ಹಿಂಬಾಲಿಸಿ ಓಡುವವನೂ, ಶರಣಾಗತರಾದ ಸಾತ್ವಿಕರಿಗೆ ಪಾಲಕನಾಗಿರುವವನೂ ಆದ ರುದ್ರರೂಪಿಯಾದ ಶಂಕರನಿಗೆ ವಂದನೆ.) 'ನಮಃ ಸಹಮಾನಾಯ ನಿವ್ಯಾಧಿನ ಆವ್ಯಾಧಿನೀನಾಂ ಪತಯೇ ನಮಃ ।' (ಶತ್ರುಗಳನ್ನು ನಿಗ್ರಹಿಸುವವನೂ, ಹಿಂಸಿಸುವವನೂ, ಶೂರರೆನಿಸಿದ ವೀರಸೈನಿಕರಿಗೆ ಅಧಿಪತಿಯೆನಿಸಿದವನೂ ಆದ ರುದ್ರಮೂರ್ತಿಗೆ ನಮಸ್ಕಾರ.) 'ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮಃ ।'

ನಮೋ ನಿಷಂಗಿಣೇ ವಿದ್ಯಾ ನಮೋ ವಂಚಕ ಇತ್ಯಥ ।
ನಮೋ ನಿಚೇರವೇ ವಿದ್ಯಾ ನಮಃಸ್ಸೃಕಾವಿಭ್ಯ ಇತ್ಯಥ ॥೯॥

ನಮೋಽಸಿಮದ್ಭ್ಯ ಇತ್ಯನ್ಯಾ ನಮ ಉಷ್ಣೀಷಿಣೇ ತಥಾ ।
ನಮ ಇಷುಮದ್ಭ್ಯ ಇತ್ಯನ್ಯಾ ನಮ ಆತನ್ವನೇತ್ಯಥ ॥೧೦॥

---

(ದಿಕ್ಕುಗಳಿಗೆ ಸದೃಶನಾಗಿ ಸಕಲ ಕರ್ಮಕ್ಕೂ ಪ್ರಧಾನಭೂತನಾಗಿರುವ ಮತ್ತು ಸದಾ ಖಡ್ಗವನ್ನು ಹಸ್ತದಲ್ಲಿ ಹಿಡಿದಿರುವ, ಗುಪ್ತಚೋರಾದಿರೂಪದಲ್ಲಿರುವ ಪರಶಿವನಿಗೂ ವಂದನೆಗಳು.) 'ನಮೋ ನಿಷಂಗಿಣ ಇಷುಧಿಮತೇ ತಸ್ಕರಾಣಾಂ ಪತಯೇ ನಮಃ।' (ಧನುಸ್ಸಿಗೆ ಹೂಡಲು ಸಿದ್ಧವಾಗಿರುವ ಬಾಣರೂಪದಿಂದಲೂ, ಬಾಣಾಧಾರಗಳಾದ ಬತ್ತಳಿಕೆಯ ರೂಪದಿಂದಲೂ, ಪ್ರಸಿದ್ಧತಸ್ಕರರೂಪದಿಂದಲೂ ಕಂಡು ಬರುವ ರುದ್ರನಿಗೆ ನಮಸ್ಕಾರ.) 'ನಮೋ ವಂಚತೇ ಪರಿವಂಚತೇ ಸ್ತಾಯೂನಾಂ ಪತಯೇ ನಮಃ।' (ಯಜಮಾನನಿಗೆ ಆಪ್ತನಾಗಿದ್ದು ಅವನ ದ್ರವ್ಯವನ್ನು ಅಪಹರಿಸುವವನೂ, ಸರ್ವ ವ್ಯವಹಾರದಲ್ಲಿಯೂ ಯಜಮಾನನಿಗೆ ವಂಚನೆಮಾಡುವವನೂ, ಸ್ವಕೀಯನಂತಿದ್ದು ರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಪದಾರ್ಥಗಳನ್ನು ಅಪಹರಿಸುವವನೂ ಆದ ಮಹಾದೇವನಿಗೆ ನಮಸ್ಕಾರ.) 'ನಮೋ ನಿಚೇರವೇ ಪರಿಚರಾಯಾರಣ್ಯಾನಾಂ ಪತಯೇ ನಮಃ।' (ಯಜಮಾನನ ಗೃಹದಲ್ಲಿ ಹೊಂಚುಹಾಕಿ ಅಪಹರಿಸುವ ಕಳ್ಳನ ಸ್ವರೂಪದಲ್ಲಿರುವ, ಪಟ್ಟಣದ ಬೀದಿಗಳಲ್ಲಿಯೂ, ಅಂಗಡಿಗಳಲ್ಲಿಯೂ ಬಹಿರಂಗವಾಗಿ ಕಳ್ಳನ ರೂಪದಲ್ಲಿರುವ ಪರಮಾತ್ಮನಿಗೆ ವಂದನೆ. ಅರಣ್ಯಾಂತರ್ವರ್ತಿಯಾಗಿರುವ ದರೋಡೆಗಾರರಿಗೆಲ್ಲಾ ಯಜಮಾನನಾದ ರುದ್ರನಿಗೆ ನಮಸ್ಕಾರ.) 'ನಮಃ ಸೃಕಾವಿಭ್ಯೋ ಜಿಘಾಗ್ಂಸದ್ಭ್ಯೋ ಮುಷ್ಣತಾಂ ಪತಯೇ ನಮಃ।' (ವಜ್ರಾಯುಧಸಮಾನವಾದ ನಖಾದಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವ ಪ್ರಾಣಿಗಳ ರೂಪದಲ್ಲಿಯೂ, ಆ ಪ್ರಾಣಿಗಳನ್ನು ಕೊಲ್ಲುವ ಬೇಟೆಗಾರರಂತೆಯೂ, ಯಜಮಾನನ ಧಾನ್ಯಾದಿಗಳನ್ನು ಅಪಹರಿಸುವ ಕಳ್ಳರಂತೆಯೂ ತೋರಿಬರುವ ಮಹೇಶ್ವರನಿಗೆ ನಮಸ್ಕಾರ.) 'ನಮೋಽಸಿಮದ್ಭ್ಯೋ ನಕ್ತಂ ಚರದ್ಭ್ಯಃ ಪ್ರಕೃಂತಾನಾಂ ಪತಯೇ ನಮಃ।' (ಖಡ್ಗಧಾರಿಗಳಾದ ಕಳ್ಳರ ಹಾಗೆಯೂ, ರಾತ್ರಿಯಲ್ಲಿ ಹೊರಗಿದ್ದ ಪ್ರಾಣಿಗಳನ್ನು ಅಪಹರಿಸುವವರ ಹಾಗೆಯೂ, ಪ್ರಾಣಿಗಳನ್ನು ಕೊಂದು ದ್ರವ್ಯಗಳನ್ನು ಅಪಹರಿಸುವವರಂತೆಯೂ ಇರುವ ದೇವತಾ ಸ್ವರೂಪಿಗೆ ವಂದನೆ.) 'ನಮ ಉಷ್ಣೀಷಿಣೇ ಗಿರಿಚರಾಯ ಕುಲುಂಚಾನಾಂ ಪತಯೇ

ನಮ ಆಯಚ್ಛದಿತ್ಯನ್ಯೋ ನಮೋಽಸ್ಯದ್ಭ್ಯೋ ಪರೋ ಮನುಃ ।
ನಮ ಆಸೀನ ಇತ್ಯನ್ಯೋ ನಮಃ ಸ್ವಪದ್ಭ್ಯ ಇತ್ಯಥ ॥೧೧॥

ನಮಸ್ತಿಷ್ಠದ್ಭ್ಯ ಇತ್ಯನ್ಯೋ ನಮಃ ಸಭಾಭ್ಯ ಇತ್ಯಥ ।
ನಮ ಅಶ್ವೇಭ್ಯ ಇತ್ಯನ್ಯೋ ನಮ ಅವ್ಯಾಧಿನೀತ್ಯಥ ॥೧೨॥

---

ನಮಃ । ' (ತಲೆಯಲ್ಲಿ ರುಮಾಲನ್ನಿಟ್ಟು ಕಳ್ಳತನಮಾಡುವವನ ವೇಷದಲ್ಲಿಯೂ, ಕಾಷ್ಠಾದಿಗಳನ್ನು ತರಲು ಕಾಡಿಗೆ ಹೋದವರ ವಸ್ತ್ರಾದಿಗಳನ್ನು ಅಪಹರಿಸುವವನ ಸ್ವರೂಪದಲ್ಲಿಯೂ, ಗೃಹಕ್ಷೇತ್ರಾದಿಗಳನ್ನು ಅಪಹರಿಸುವವನ ಆಕಾರದಲ್ಲಿಯೂ ಕಂಡುಬರುವ ಸ್ವಾಮಿಗೆ ನಮಸ್ಕಾರ.) ' ನಮ ಇಷುಮದ್ಭ್ಯೋ ಧನ್ವಾವಿಭ್ಯಶ್ಚವೋ ನಮಃ । ' (ಶತ್ರುಗಳನ್ನು ಹೆದರಿಸಲು ಬಾಣಗಳನ್ನು ಧರಿಸಿ, ಅದಕ್ಕೆ ತಕ್ಕ ಬಿಲ್ಲುಗಳನ್ನು ಹಿಡಿದಿರುವವರ ಸ್ವರೂಪದಲ್ಲಿರುವ ಮಹಾದೇವನಿಗೆ ವಂದನೆ.) ' ನಮ ಆತನ್ವಾನೇಭ್ಯಃ ಪ್ರತಿದಧಾನೇಭ್ಯಶ್ಚವೋ ನಮಃ । ' (ಧನುಸ್ಸಿನ ಹೆದೆಯನ್ನು ಎಳೆಯುವವರಂತೆಯೂ, ಧನುಸ್ಸಿಗೆ ಬಾಣವನ್ನು ಹೂಡುವವರಂತೆಯೂ ಕಂಡು ಬರುವ ರುದ್ರರೂಪುಗಳಿಗೆ ನಮಸ್ಕಾರ.) ||೬-೭-೮-೯-೧೦||

' ನಮ ಆಯಚ್ಛದ್ಭ್ಯೋ ವಿಸೃಜದ್ಭ್ಯಶ್ಚವೋ ನಮಃ । ' (ಧನುಸ್ಸಿನ ಮೌರ್ವಿಯನ್ನು ಎಳೆಯುವವರಂತೆಯೂ, ಬಾಣಗಳನ್ನು ಬಿಡುವವರಂತೆಯೂ ಆಕಾರಗಳನ್ನು ಪಡೆಯುವ ರುದ್ರರೂಪಿಗಳಿಗೆ ವಂದನೆ.) ' ನಮೋಽಸ್ಯದ್ಭ್ಯೋ ವಿದ್ಯದ್ಭ್ಯಶ್ಚ ವೋ ನಮಃ । ' (ಗುರಿಯನ್ನಿಟ್ಟು ಹೊಡೆಯುವ ಗುರಿಕಾರರಂತೆಯೂ, ಗುರಿಯ ವರೆಗೆ ಬಂದ ಬಾಣಗಳನ್ನು ಗುರಿಯ ವಸ್ತುಗಳಿಗೆ ಹೋಗಿಸುವವರಂತೆಯೂ ಆಕಾರವನ್ನು ಪಡೆಯುವ ರುದ್ರರಿಗೆ ನಮಸ್ಕಾರ.) ' ನಮ ಆಸೀನೇಭ್ಯಃ ಶಯಾನೇಭ್ಯಶ್ಚವೋ ನಮಃ । ' (ವಿಶ್ರಾಂತಿಯನ್ನು ಪಡೆಯಲು ಕುಳಿತುಕೊಳ್ಳುವವರಂತೆಯೂ, ಮಲಗಿರುವವರಂತೆಯೂ ಕಂಡುಬರುವ ರುದ್ರರೂಪಗಳಿಗೆ ನಮಸ್ಕಾರ.) ' ನಮಃ ಸ್ವಪದ್ಭ್ಯೋ ಜಾಗ್ರದ್ಭ್ಯಶ್ಚವೋ ನಮಃ । ' (ನಿದ್ದೆಮಾಡುತ್ತಿರುವ ಪ್ರಾಣಿಗಳ, ಹಾಗೂ ಎಚ್ಚರಗೊಂಡಿರುವ ಜೀವಿಗಳ ಆಕಾರದಲ್ಲಿರುವ ದೇವತಾಸ್ವರೂಪಕ್ಕೆ ನಮಸ್ಕಾರ.) ' ನಮಸ್ತಿಷ್ಠದ್ಭ್ಯೋ ಧಾವದ್ಭ್ಯಶ್ಚವೋ ನಮಃ । ' (ನಿಂತಿರುವ ಮತ್ತು ಓಡಾಡುತ್ತಿರುವ ಪ್ರಾಣಿಗಳ ಆಕಾರದಲ್ಲಿ ಕಂಡುಬರುವ ಈಶ್ವರಾಕಾರಗಳಿಗೆ ನಮಸ್ಕಾರ.) ' ನಮಃ ಸ್ಸಭಾಭ್ಯಃ ಸಭಾಪತಿಭ್ಯಶ್ಚ ವೋ ನಮಃ । ' (ಸಭೆಯ ಆಕಾರಗಳಿಂದ, ಸಭಾಪತಿಗಳ

ನಮ ಉಗಣಾಭ್ಯ ಇತ್ಯನ್ಯೋ ನಮೋ ಗೃತ್ಸೇಭ್ಯ ಇತ್ಯಥ ।
ನಮೋ ವ್ರಾತೇಭ್ಯ ಇತ್ಯನ್ಯೋ ನಮೋ ಗಣೇಭ್ಯ ಇತ್ಯಥ ॥೧೩॥

ನಮೋ ವಿರೂಪ ಇತ್ಯನ್ಯೋ ನಮೋ ಮಹದ್ಭ್ಯ ಇತ್ಯಥ ।
ನಮೋ ರಥಿಭ್ಯ ಇತ್ಯನ್ಯೋ ನಮೋ ರಥೇಭ್ಯ ಇತ್ಯಥ ॥೧೪॥

---

ಸ್ವರೂಪದಿಂದ ಕಂಡುಬರುತ್ತಿರುವ ಪರಶಿವಸ್ವರೂಪಕ್ಕೆ ವಂದನೆ.) 'ನಮ ಅಶ್ವೇಭ್ಯೋ ಅಶ್ವಪತಿಭ್ಯಶ್ಚವೋ ನಮಃ ।' (ಕುದುರೆಗಳ ಆಕಾರದಲ್ಲಿಯೂ, ಕುದುರೆ ಸೈನ್ಯದ ಅಧಿಪತಿಗಳಂತೆಯೂ ತೋರಿಬರುವ ಪರಶಿವನ ಸ್ವರೂಪಗಳಿಗೆ ನಮಸ್ಕಾರ.) 'ನಮ ಆವ್ಯಾಧಿನೀಭ್ಯೋ ವಿವಿಧ್ಯಂತೀಭ್ಯಶ್ಚ ವೋ ನಮಃ ।' (ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವ ಸ್ತ್ರೀವ್ಯಕ್ತಿಗಳಂತೆಯೂ, ನಿರ್ದಾಕ್ಷಿಣ್ಯವಾಗಿ ಬಾಣ ಬಿಡುವ ಹೆಂಗಸರಂತೆಯೂ ತೋರುವ ಮಹಾದೇವನಿಗೆ ಪ್ರಣಾಮವು.) 'ನಮ ಉಗಣಾಭ್ಯಸ್ತೃಗ್ಂ ಹತೀಭ್ಯಶ್ಚವೋ ನಮಃ ।' (ಸಪ್ತಮಾತೃಕೆಗಳ ಬ್ರಾಹ್ಮೀ-ಮಾಹೇಶ್ವರೀ-ಕೌಮಾರೀ-ವೈಷ್ಣವೀ-ವಾರಾಹೀ-ಚಾಮುಂಡಾ-ಇಂದ್ರಾಣೀ, ರೂಪದಲ್ಲಿಯೂ, ದುರ್ಗಾದಿ ಹಿಂಸಾದೇವತೆಗಳ ರೂಪದಲ್ಲಿಯೂ ಕಂಡುಬರುವ ಶಂಕರನಿಗೆ ನಮಸ್ಕಾರ.) 'ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚವೋ ನಮಃ ।' (ವಿಷಯ ಲಂಪಟರಾಗಿಯೂ, ವಿಷಯಾಸಕ್ತರಿಗೆ ಯಜಮಾನನಂತೆಯೂ ಇರುವ ರುದ್ರ ಮೂರ್ತಿಗಳಿಗೆ ನಮಸ್ಕಾರ.) 'ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚವೋ ನಮಃ ।' (ನಾನಾಜಾತಿಗಳ ಗುಂಪಿನಿಂದಲೂ, ಅವುಗಳ ರಕ್ಷಕರ ರೂಪಿನಿಂದಲೂ ತೋರಿಬರುವ ಮಹೇಶ್ವರನಿಗೆ ನಮಸ್ಕಾರ.) 'ನಮೋ ಗಣೇಭ್ಯೋ ಗಣಪತಿಭ್ಯಶ್ಚವೋ ನಮಃ ।' (ಶಿವಗಣಗಳ ರೂಪದಲ್ಲಿಯೂ, ಅವುಗಳ ಯಜಮಾನರ ರೂಪದಲ್ಲಿಯೂ ಕಂಡುಬರುವ ರುದ್ರನಿಗೆ ನಮಸ್ಕಾರ.) 'ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚವೋ ನಮಃ ।' (ನಗ್ನ, ಮುಂಡ ಮುಂತಾದ ವಿಕಾರರೂಪಿನಿಂದಲೂ, ಆನೆ, ಕುದುರೆ, ಒಂಟೆ ಮುಂತಾದ ಪ್ರಾಣಿಗಳ ಮುಖದಂತೆಯೂ ಕಂಡುಬರುವ ಶಿವಗಣಸ್ವರೂಪನಾದ ಶಂಕರನಿಗೆ ವಂದನೆ.) 'ನಮೋ ಮಹದ್ಭ್ಯಃ ಕ್ಷುಲ್ಲಕೇಭ್ಯಶ್ಚವೋ ನಮಃ ।' (ಅಣಿಮಾದಿ ಅಷ್ಟೈಶ್ವರ್ಯಸಂಪನ್ನರಾದ ಮಹಾಮಹಿಮರಂತೆಯೂ, ಏನೂ ಇಲ್ಲದ ಕೇವಲ ಕ್ಷುಲ್ಲಕರಂತೆಯೂ ಕಂಡುಬರುವ ರುದ್ರರೂಪಗಳಿಗೆ ನಮಸ್ಕಾರ.) 'ನಮೋ ರಥಿಭ್ಯೋ ರಥೇಭ್ಯಶ್ಚವೋ ನಮಃ ।' (ರಥಾರೂಢರಂತೆಯೂ, ರಥವಿಹೀನರಂತೆಯೂ ಕಂಡುಬರುವ ಶಿವಸ್ವರೂಪಗಳಿಗೆ

ನಮಃ ಸೇನಾಭ್ಯ ಇತ್ಯನ್ಯೋ ನಮಃ ಕ್ಷತ್ತೃಭ್ಯ ಇತ್ಯಥ ।
ನಮಸ್ತಕ್ಷಭ್ಯ ಇತ್ಯನ್ಯೋ ನಮಃ ಕುಲಾಲೇಭ್ಯ ಇತ್ಯಥ ॥೧೫॥

ನಮಃ ಪುಂಜಿಷ್ಟ ಇತ್ಯನ್ಯೋ ನಮ ಇಷ್ವಭಿಧೋ ಮನುಃ ।
ನಮೋ ಮೃಗಯುಮಂತ್ರೋನ್ಯೋ ನಮೋಶ್ವಭ್ಯಃ ಪರೋಮನುಃ ॥೧೬॥

---

ನಮಸ್ಕಾರ.) 'ನಮೋ ರಥೇಭ್ಯೋ ರಥಪತಿಭ್ಯಶ್ಚವೋ ನಮಃ ।' (ರಥದ ಆಕಾರದಿಂದಲೂ, ರಥಿಕರ ರೂಪದಿಂದಲೂ ಇರುವ ಶಿವಸ್ವರೂಪಕ್ಕೆ ನಮಸ್ಕಾರ.) 'ನಮಃ ಸೇನಾಭ್ಯಃ ಸೇನಾನಿಭ್ಯಶ್ಚವೋ ನಮಃ ।' (ಸೈನ್ಯದ ರೂಪದಿಂದಲೂ, ಸೇನಾಪತಿಗಳ ಆಕಾರದಿಂದಲೂ ಕಂಡುಬರುವ ರುದ್ರರೂಪಕ್ಕೆ ನಮಸ್ಕಾರ.) 'ನಮಃ ಕ್ಷತ್ತೃಭ್ಯಃ ಸಂಗ್ರಹೀತೃಭ್ಯಶ್ಚವೋ ನಮಃ ।' (ಪ್ರಾಣಿಗಳಿಗೆ ಹಿಂಸೆಯನ್ನು ತಪ್ಪಿಸುವ ಕ್ಷತ್ರಿಯರೂಪದಿಂದಲೂ, ಸಮಸ್ತ ವಸ್ತುಸಂಗ್ರಹಕಾರರ ವೇಷದಿಂದಲೂ ವರ್ತಿಸುವ ಈಶ್ವರಾಕಾರಕ್ಕೆ ನಮಸ್ಕಾರ.) 'ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚವೋ ನಮಃ ।' (ಮರಗಳನ್ನು ಕತ್ತರಿಸುವವರ ಮತ್ತು ರಥಗಳನ್ನು ನಿರ್ಮಿಸುವವರ ಆಕಾರದಲ್ಲಿ ತೋರಿಬರುವ ಶಂಕರರೂಪುಗಳಿಗೆ ನಮಸ್ಕಾರ.) 'ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚವೋ ನಮಃ ।' (ಕುಂಭಕಾರರ (ಕುಂಬಾರ) ಮತ್ತು ಕರ್ಮಕಾರರ (ಕಮ್ಮಾರ) ವೇಷದಲ್ಲಿ ಕಂಡುಬರುವ ಈಶ್ವರರೂಪುಗಳಿಗೆ ನಮಸ್ಕಾರ.) ॥೧೧-೧೨-೧೩-೧೪-೧೫॥

'ನಮಃ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚವೋ ನಮಃ ।' (ಪಕ್ಷಿಗಳ ಸಮೂಹಗಳನ್ನು ಕೊಲ್ಲುವವರಂತೆಯೂ, ಮೀನುಗಳನ್ನು ಹಿಡಿಯುವವರಂತೆಯೂ ಕಾಣುವ ಈಶ್ವರನಿಗೆ ವಂದನೆ.) 'ನಮ ಇಷುಕೃದ್ಭ್ಯೋ ಧನ್ವಾವಿಭ್ಯಶ್ಚವೋ ನಮಃ ।' (ಬಾಣಗಳನ್ನು ನಿರ್ಮಿಸುವವರ ಆಕಾರದಲ್ಲಿಯೂ, ಬಿಲ್ಲುಗಳನ್ನು ಹಿಡಿಯುವವರ ಆಕಾರದಲ್ಲಿಯೂ ಕಂಡುಬರುವ ಮಹಾದೇವನಿಗೆ ನಮಸ್ಕಾರ.) 'ನಮೋ ಮೃಗಯುಭ್ಯಃ ಶ್ವನಿಭ್ಯಶ್ಚವೋ ನಮಃ ।' (ಮೃಗಗಳನ್ನು ಅನ್ವೇಷಣ ಮಾಡುವವರಂತೆಯೂ, ನಾಯಿಗಳನ್ನು ಬೇಟೆಗೆ ಎಳೆಯುವವರಂತೆಯೂ ಕಂಡುಬರುವ ರುದ್ರರೂಪುಗಳಿಗೆ ವಂದನೆ.) 'ನಮಃ ಶ್ವಭ್ಯಃ ಶ್ವಪತಿಭ್ಯಶ್ಚವೋ ನಮಃ ।' (ಕಾಲಭೈರವ ವೇಷಧಾರಿಗಳಾದ ನಾಯಿಗಳಿಗೂ ಆ ನಾಯಿಗಳಿಗೆ ಒಡೆಯರಂತೆಯೂ ಇರುವ ರುದ್ರರೂಪಿಗಳಾದ ನಿಮಗೆ ನಮಸ್ಕಾರ.) 'ನಮೋ ಭವಾಯಚ ರುದ್ರಾಯಚ ।' ಸಮಸ್ತ ಪ್ರಾಣಿಗಳಿಗೂ ಉತ್ಪತ್ತಿಸ್ಥಾನನಾಗಿ, ದುಷ್ಟಜನರ ರೋದನಕ್ಕೆ ಮೂಲ

ನಮೋ ಭವಾಯೇತ್ಯಪರೋ ನಮಃ ಶರ್ವಾಯ ಇತ್ಯಥ ।
ನಮೋ ನೀಲೇತಿ ಮಂತ್ರೋಽನ್ಯೋ ನಮಃ ಕಪರ್ದಿನೇಽಪ್ಯಥ ॥೧೭॥

ನಮಃ ಸಹಸ್ರಾಕ್ಷಾಯ ಚ ಶತಧನ್ವನೇತಿ ಚಾಪರಃ ।
ನಮೋ ಗಿರಿಶಾಯ ಚ ಶಿಪಿವಿಷ್ಟಾಯ ಚಾನ್ಯೋ ಮನುಃ ॥೧೮॥

ನಮೋ ಮೀಢುಷ್ಟಮಾಯೇತಿ ನಮೋ ಹ್ರಸ್ವಾಯ ಚೇತ್ಯಥ ।
ನಮೋ ಬೃಹತ ಇತ್ಯನ್ಯೋ ನಮೋ ವೃದ್ಧಾಯ ಚೇತ್ಯಥ ॥೧೯॥

---

ಕಾರಣನಾದ ಶಂಕರನಿಗೆ ನಮಸ್ಕಾರ.) ' ನಮಃ ಶರ್ವಾಯ ಚ ಪಶುಪತಯೇ ಚ । ' (ಭಕ್ತರ ಪಾಪನಾಶಕನಾಗಿ, ಪಶುಸಮಾನರಾದ ಅಜ್ಞಾನಿಗಳನ್ನು ರಕ್ಷಿಸುವವನಾದ ಮಹಾದೇವನಿಗೆ ವಂದನೆ.) ' ನಮೋ ನೀಲಗ್ರೀವಾಯ ಚ ಶಿತಿಕಂಠಾಯ ಚ । ' (ಕಾಲಕೂಟವಿಷವನ್ನು ಧರಿಸಿಕೊಂಡಿರುವುದರಿಂದ ನೀಲಗ್ರೀವನೆನಿಸಿ, ಶುಭ್ರವಾದ ಕಂಠವುಳ್ಳ ಶಂಕರನಿಗೆ ನಮಸ್ಕಾರ.) ' ನಮಃ ಕಪರ್ದಿನೇ ಚ ವ್ಯುಪ್ತಕೇಶಾಯ ಚ । ' (ಪಾಶುಪತರಂತೆ ಜಟಾಜೂಟದಿಂದ ಶೋಭಿಸುವ ಶಿರಸ್ಸುಳ್ಳವನೂ, ಯತಿಗಳಂತೆ ಮುಂಡಕೇಶನೆನಿಸಿರುವವನೂ ಆದ ಮಹಾದೇವನಿಗೆ ವಂದನೆ.) ' ನಮಃ ಸಹಸ್ರಾಕ್ಷಾಯ ಚ ಶತಧನ್ವನೇ ಚ । ' (ಇಂದ್ರನ ವೇಷದಿಂದ ಸಹಸ್ರಾಕ್ಷನೂ, ಸಹಸ್ರಬಾಹುವಿನಲ್ಲಿಯೂ ಶತಸಂಖ್ಯೆಯ ಧನುಸ್ಸನ್ನು ಹಿಡಿದಿರುವವನೂ ಆದ ಪರಶಿವನಿಗೆ ನಮಸ್ಕಾರ.) ' ನಮೋ ಗಿರಿಶಾಯ ಚ ಶಿಪಿವಿಷ್ಟಾಯ ಚ । ' (ಕೈಲಾಸಗಿರಿಯಂತೆ ಸಂಚರಿಸುವವನೂ, ಸರ್ವವ್ಯಾಪಕನಾಗಿ ಎಲ್ಲೆಲ್ಲಿಯೂ ಪ್ರತಿಫಲಿಸುವವನೂ ಆದ ಮಹೇಶ್ವರನಿಗೆ ವಂದನೆ.) ' ನಮೋ ಮೀಢುಷ್ಟಮಾಯ ಚೇಷುಮತೇ ಚ । ' (ಮೇಘರೂಪದಿಂದ ಮಳೆಸುರಿಸುವವನೂ ಬಾಣಧಾರಕನಾಗಿ ಇಷುಮಂತನೆನಿಸಿರುವವನೂ ಆದ ದೇವತೆಗಳಿಗೆ ನಮಸ್ಕಾರ.) ' ನಮೋ ಹ್ರಸ್ವಾಯ ಚ ವಾಮನಾಯ ಚ । ' (ಅಲ್ಪಪ್ರಮಾಣದ ಶರೀರದಲ್ಲಿರುವವನೂ, ಅಂಗುಲ್ಯಾದಿ ಅವಯವಸಂಕೋಚಗಳುಳ್ಳ ವಾಮನನಂತಿರುವವನೂ ಆದ ಪರಶಿವನಿಗೆ ವಂದನೆ.) ' ನಮೋ ಬೃಹತೇ ಚ ವರ್ಷೀಯಸೇ ಚ । ' (ಪ್ರೌಢಾಕಾರದಲ್ಲಿರುವವನೂ, ಅನೇಕ ಸುಗುಣಗಳಿಂದ ಭರಿತನಾದವನೂ ಆದ ಮಹೇಶ್ವರನಿಗೆ ವಂದನೆ.) ' ನಮೋ ವೃದ್ಧಾಯ ಚ ಸಂವೃಧ್ವನೇ ಚ । ' (ಹೆಚ್ಚು ವಯಸ್ಸಿನಿಂದ ಕೂಡಿರುವ ವೃದ್ಧನ ಆಕಾರದಲ್ಲಿಯೂ, ವೇದದ ಸ್ತುತಿಯಿಂದ ವೃದ್ಧಿಹೊಂದುವವನೂ ಆದ ಶಂಕರನಿಗೆ ನಮಸ್ಕಾರ.) ॥೧೬-೧೭-೧೮-೧೯॥

ನಮೋ ಅಗ್ರಿಯಾಯ ಚೇತ್ಯನ್ಯೋ ನಮ ಆಶವೇತ್ಯಥಾಪರಃ ।
ನಮಃ ಶೀಘ್ರ್ಯಾಯ ಮಂತ್ರೋನ್ಯೋ ನಮ ಊರ್ಮ್ಯಾಯ ಚೇತ್ಯಥ ॥೨೦॥

ನಮಃ ಸ್ರೋತಸ್ಯಾಯೇತಿ ಚ ನಮೋ ಜ್ಯೇಷ್ಠಾಯ ಚೇತ್ಯಥ ।
ನಮಃ ಪೂರ್ವಜಾಯ ಚಾಪರಜಾಯ ಚೇತ್ಯನ್ಯೋ ಮನುಃ ॥೨೧॥

ನಮೋ ಮಧ್ಯಮಾಯ ಚಾಪಗಲ್ಭಾಯಾಪರೋ ಮನುಃ ।
ನಮೋ ಜಘನ್ಯಾಯ ಚೇತಿ ನಮಃ ಸೋಭ್ಯಾಯ ಚೇತ್ಯಥ ॥೨೨॥

---

'ನಮೋ ಅಗ್ರಿಯಾಯ ಚ ಪ್ರಥಮಾಯ ಚ ।' (ಜಗದುತ್ಪತ್ತಿಗಿಂತ ಮೊದಲಿದ್ದವನೂ ಸಭೆಯಲ್ಲಿ ಮೊಟ್ಟಮೊದಲನೆಯವನೂ ಆದ ನಿನಗೆ ನಮಸ್ಕಾರ.) 'ನಮ ಆಶವೇ ಚಾಜಿರಾಯ ಚ ।' (ಲೋಕದಲ್ಲಿ ಎಲ್ಲೆಲ್ಲೂ ವ್ಯಾಪಿಸುವವನೂ, ಶೀಘ್ರವಾಗಿ ಹೋಗುವ ಶಕ್ತಿಯುಳ್ಳವನೂ ಆದ ಶಂಕರನಿಗೆ ವಂದನೆ.) 'ನಮಃ ಶೀಘ್ರ್ಯಾಯ ಚಾತಸ್ಯಾಯ ಚ ।' (ಶೀಘ್ರವಾಗಿ ಹೋಗುವವನೂ, ಜಲಪ್ರವಾಹದಲ್ಲಿ ಅಡಗಿರುವಂತೆ ಕಾಣುವವನೂ ಆದ ನಿನಗೆ ನಮಸ್ಕಾರ.) 'ನಮ ಊರ್ಮ್ಯಾಯ ಚಾವಸ್ವನ್ಯಾಯ ಚ ।' (ಅಲೆಗಳ ಗುಂಪಿನಲ್ಲಿ ಹುದುಗಿರುವವನೂ, ಧ್ವನಿ ಮಾಡುವ ಜಲರಾಶಿಯಲ್ಲಿ ಅಂತರ್ಗತನಾಗಿರುವವನೂ ಆದ ಶಂಕರನಿಗೆ ವಂದನೆ.) 'ನಮಃ ಸ್ರೋತಸ್ಯಾಯ ಚ ದ್ವೀಪ್ಯಾಯ ಚ ।' (ಪ್ರವಾಹದಲ್ಲಿ ಮುಳುಗಿರುವವನೂ, ಜಲಮಧ್ಯವರ್ತಿಯಾದ ಭೂಮಿಯಲ್ಲಿರುವವನೂ ಆದ ದೇವರಿಗೆ ನಮಸ್ಕಾರ.) 'ನಮೋ ಜ್ಯೇಷ್ಠಾಯ ಚ ಕನಿಷ್ಠಾಯ ಚ ।' (ವಿದ್ಯೆ, ಐಶ್ವರ್ಯ ಇವುಗಳಿಂದ ದೊಡ್ಡವನೆನಿಸಿದ ಮತ್ತು, ಯಾವ ವಿದ್ಯಾದಿಗಳೂ ಇಲ್ಲದವನ ಆಕಾರದಲ್ಲಿರುವ ಶಂಕರನಿಗೆ ನಮಸ್ಕಾರ.) 'ನಮಃ ಪೂರ್ವಜಾಯ ಚಾಪರಜಾಯ ಚ ।' (ಜಗತ್ತಿನಲ್ಲಿ ಹಿರಣ್ಯಗರ್ಭರೂಪದಿಂದ ಮೊದಲು ತೋರಿಬಂದವನೂ, ಕಾಲಾಗ್ನಿರೂಪದಲ್ಲಿ ಕೊನೆಯಲ್ಲಿ ಕಾಣುವವನೂ ಆದ ನಿನಗೆ ಪ್ರಣಾಮವು.) 'ನಮೋ ಮಧ್ಯಮಾಯ ಚಾಪಗಲ್ಭಾಯ ಚ ।' (ಮಧ್ಯಕಾಲದಲ್ಲಿ ದೇವ ಮಾನವ ಪ್ರಾಣಿರೂಪದಲ್ಲಿರುವವನೂ, ಇಂದ್ರಿಯಪಾಟವವಿಲ್ಲದ ಬಾಲಕನಂತಿರುವವನೂ ಆದದೇವನಿಗೆ ವಂದನೆ.) 'ನಮೋ ಜಘನ್ಯಾಯ ಚ ಬುಧ್ನ್ಯಾಯ ಚ ।' (ಗೋವುಗಳ ಹಿಂದೆ ಓಡುವ ಕರುವಿನ ವೇಷದಲ್ಲಿಯೂ, ವೃಕ್ಷಾದಿಗಳಬುಡದಲ್ಲಿ ಶಾಖಾದಿರೂಪದಲ್ಲಿಯೂ ಇರುವ ಮಹಾದೇವನಿಗೆ ವಂದನೆ.) 'ನಮಃ ಸೋಭ್ಯಾಯ ಚ ಪ್ರತಿಸರ್ಯಾಯ ಚ ।' (ಪುಣ್ಯ ಮತ್ತು ಪಾಪಗಳಿಂದ, ಮನುಷ್ಯಲೋಕದಲ್ಲಿ

ನಮೋ ಯಾಮ್ಯಾಯ ಚೇತ್ಯನ್ಯೋ ನಮ ಉರ್ವರ್ಯ ಇತ್ಯಥ ।
ನಮಃ ಶ್ಲೋಕ್ಯಾಯ ಚೇತ್ಯನ್ಯೋ ನಮೋ ವನ್ಯಾಯ ಚೇತ್ಯಥ॥೨೩॥

ನಮಃ ಶ್ರವಾಯ ಚ ಪ್ರತಿಶ್ರವಾಯೇತ್ಯಪರೋ ಮನುಃ ।
ನಮ ಆಶುಷೇಣಾಯ ಚಾಪರೋ ಮಂತ್ರೋ ದ್ವಿಜೋತ್ತಮಾಃ॥೨೪॥

ನಮಃ ಶೂರಾಯ ಚೇತ್ಯನ್ಯೋ ನಮೋ ವರ್ಮಿಣ ಇತ್ಯಥ ।
ನಮೋ ಬಿಲ್ಮಿನ ಇತ್ಯನ್ಯೋ ನಮಃ ಶ್ರುತಾಯ ಚೇತ್ಯಥ ॥೨೫॥

---

ಅವತರಿಸುವ ಮತ್ತು ವಿವಾಹ ಪ್ರತಿಸರಕ್ಕೆ ಯೋಗ್ಯವಾಗುವ ವೇಷದಲ್ಲಿರುವ ಶಂಕರನಿಗೆ ನಮಸ್ಕಾರ.) 'ನಮೋ ಯಾಮ್ಯಾಯ ಚ ಕ್ಷೇಮ್ಯಾಯ ಚ।' (ಯಮಲೋಕದಲ್ಲಿ ಶಿಕ್ಷಕನಾಗಿಯೂ, ಮುಕ್ತಿಪ್ರಪಂಚದಲ್ಲಿ ಮುಮುಕ್ಷುವಾಗಿಯೂ ಇರುವ ರುದ್ರನಿಗೆ ವಂದನೆ.) 'ನಮ ಉರ್ವರ್ಯಾಯ ಚ ಖಲ್ಯಾಯ ಚ।' (ಫಲವತ್ತಾದ ಭೂಮಿಯಲ್ಲಿ ಶ್ರೇಷ್ಠ ಸಸ್ಯದಂತಿರುವವನೂ, ಕಣದಲ್ಲಿ ಮೇಟಿಯಂತಿರುವವನೂ ಆದ ದೇವನಿಗೆ ವಂದನೆ.) 'ನಮಃ ಶ್ಲೋಕ್ಯಾಯ ಚಾವಸಾನ್ಯಾಯ ಚ।' (ವೈದಿಕಮಂತ್ರಪ್ರತಿಪಾದ್ಯನೂ, ವೇದಾಂತಪ್ರತಿಪಾದ್ಯನೂ ಆದ ಶಿವನಿಗೆ ನಮಸ್ಕಾರ.) 'ನಮೋ ವನ್ಯಾಯ ಚ ಕಕ್ಷ್ಯಾಯ ಚ।' (ಕಾಡಿನಲ್ಲಿ ವೃಕ್ಷಾದಿ ರೂಪದಿಂದಲೂ ಲತಾದಿರೂಪದಿಂದಲೂ ತೋರಿಬರುವ ಪರಶಿವನಿಗೆ ನಮಸ್ಕಾರ.) 'ನಮಃ ಶ್ರವಾಯ ಚ ಪ್ರತಿಶ್ರವಾಯ ಚ।' (ಶಬ್ದರೂಪದಿಂದಲೂ, ಪ್ರತಿಧ್ವನಿಯ ರೂಪದಿಂದಲೂ ಕಂಡುಬರುವ ಶಂಕರನಿಗೆ ನಮಸ್ಕಾರ.) 'ನಮ ಆಶುಷೇಣಾಯ ಚಾಶುರಥಾಯ ಚ।' (ಶೀಘ್ರವಾಗಿ ಓಡುವ ಸೈನ್ಯವನ್ನೂ ದಿವ್ಯರಥವನ್ನೂ ಹೊಂದಿದವನಿಗೆ ವಂದನೆ.) ॥೨೦-೨೧-೨೨-೨೩-೨೪॥

'ನಮಃ ಶೂರಾಯ ಚಾವಭೇಂದತೇ ಚ।' (ಯುದ್ಧದಲ್ಲಿ ಶೂರನೂ, ವೈರಿಸಂಹಾರಕನೂ ಆದ ದೇವರಿಗೆ ಪ್ರಣಾಮವು.) 'ನಮೋ ವರ್ಮಿಣೇ ಚ ವರೂಥಿನೇ ಚ।' (ದಿವ್ಯ ಕವಚವನ್ನೂ, ಬಲಿಷ್ಠವಾದ ರಥವನ್ನೂ ಹೊಂದಿರುವವನಾದ ಭಗವಂತನಿಗೆ ವಂದನೆ.) 'ನಮೋ ಬಿಲ್ಮನೇ ಚ ಕವಚಿನೇ ಚ।' (ಶಿರಸ್ತ್ರಾಣವನ್ನೂ, ಬಲಿಷ್ಠವಾದ ಕವಚವನ್ನೂ ಯುದ್ಧದಲ್ಲಿ ಧರಿಸಿದ ಶಂಕರನಿಗೆ ವಂದನೆಗಳು.) 'ನಮಃ ಶ್ರುತಾಯ ಚ ಶ್ರುತಸೇನಾಯ ಚ।' (ವೇದಪ್ರಸಿದ್ಧನೂ ಪ್ರಸಿದ್ಧ ಸೈನ್ಯವುಳ್ಳವನೂ ಆದ ದೇವರಿಗೆ ನಮಸ್ಕಾರ.) 'ನಮೋ ದುಂದುಭ್ಯಾಯ ಚಾಹನನ್ಯಾಯ ಚ।' (ನಗಾರಿಯಲ್ಲಿ ಹುಟ್ಟುವ ಶಬ್ದರೂಪದಿಂದಲೂ ದಂಡದಲ್ಲಿ

ನಮೋ ದುಂದುಭ್ಯಾಯ ಚಾ ಹನನ್ಯಾಯ ಚೇತ್ಯನ್ಯೋ ಮನುಃ ।
ನಮೋ ಧೃಷ್ಣವ ಇತ್ಯನ್ಯೋ ನಮೋ ದೂತಾಯ ಚೇತ್ಯಥ ॥೨೬॥

ನಮೋ ನಿಷಂಗಿಣೇ ಚೇಷುಧಿಮತೇ ಚೇತ್ಯನ್ಯೋ ಮನುಃ ।
ನಮಸ್ತೀಕ್ಷ್ಣೇಷವೇ ಚಾಯುಧಿನೇ ಚೇತ್ಯಪರೋ ಮನುಃ ॥೨೭॥

ನಮಃ ಸ್ವಾಯುಧಾಯ ಚ ಸುಧನ್ವನೇ ಚೇತ್ಯನ್ಯೋ ಮನುಃ ।
ನಮಃ ಸ್ರುತ್ಯಾಯ ಚೇತ್ಯನ್ಯೋ ನಮಃ ಕಾಟ್ಯಾಯ ಚೇತ್ಯಥ ॥೨೮॥

ನಮೋ ನಾದ್ಯಾಯ ಚೇತ್ಯನ್ಯೋ ವೈಶಂತಾಯೇತ್ಯಥಾಪರಃ ।
ನಮಃ ಕೂಪ್ಯಾಯ ಚಾಪ್ಯನ್ಯೋ ನಮ ಆವಟ್ಯ ಇತ್ಯಥ ॥೨೯॥

---

ಜನಿಸುವ ತಾಡನಕ್ರಿಯಾರೂಪದಲ್ಲಿಯೂ ಇರುವ ಸ್ವಾಮಿಗೆ ವಂದನೆ.) 'ನಮೋ ಧೃಷ್ಣವೇ ಚ ಪ್ರಮೃಶಾಯ ಚ।' (ಯುದ್ಧದಲ್ಲಿ ಓಡದೆ ನಿಲ್ಲುವವನೂ, ಪರಸೈನ್ಯ ಶಕ್ತಿಪರಾಮರ್ಶಕನೂ ಆದ ಸ್ವಾಮಿಗೆ ನಮಸ್ಕಾರ.) 'ನಮೋ ದೂತಾಯ ಚ ಪ್ರಹಿತಾಯ ಚ।' (ವೃತ್ತಾಂತವನ್ನು ತಿಳಿಸುವ ದೂತನಾಗಿಯೂ, ಸೇವಕನಂತೆಯೂ ಕಂಡುಬರುವ ಮಹಾದೇವನಿಗೆ ನಮಸ್ಕಾರ.) 'ನಮೋ ನಿಷಂಗಿಣೇ ಚೇಷುಧಿಮತೇ ಚ।' (ಖಡ್ಗದಿಂದಲೂ, ಬತ್ತಳಿಕೆಯಿಂದಲೂ ಕೂಡಿ ಶೋಭಿಸುವ ಸ್ವಾಮಿಗೆ ನಮಸ್ಕಾರ.) 'ನಮಸ್ತೀಕ್ಷ್ಣೇಷವೇ ಚಾಯುಧಿನೇ ಚ।' (ಕ್ರೂರವಾದ ಬಾಣಗಳುಳ್ಳವನೂ ನಾನಾಸಂಖ್ಯೆಯ ಆಯುಧಗಳುಳ್ಳವನೂ ಆದ ಶಂಕರನಿಗೆ ವಂದನೆ.) 'ನಮಃ ಸ್ವಾಯುಧಾಯ ಚ ಸುಧನ್ವನೇ ಚ।' (ಶೋಭನವಾದ ಆಯುಧಗಳುಳ್ಳವನೂ, ಪಿನಾಕಧನುರ್ಧಾರಿಯೂ ಆದ ಮಹಾದೇವನಿಗೆ ನಮಸ್ಕಾರ.) 'ನಮಃ ಸ್ರುತ್ಯಾಯ ಚ ಪಥ್ಯಾಯ ಚ।' (ಪಾದಸಂಚಾರ ಮಾಡುವ ಮತ್ತು ರಥಸಂಚಾರದ ಸ್ಥಳದಲ್ಲಿಯೂ ಜನಿಸುವ ಶಂಕರರೂಪಿಗೆ ನಮಸ್ಕಾರ.) 'ನಮಃ ಕಾಟ್ಯಾಯ ಚ ನೀಪ್ಯಾಯ ಚ।' (ಅಲ್ಪಪ್ರವಾಹರೂಪದಿಂದಲೂ, ಪರ್ವತದ ತಪ್ಪಲುಪ್ರದೇಶದ ಜಲರೂಪದಿಂದಲೂ ತೋರಿಬರುವ ಮಹೇಶ್ವರನಿಗೆ ವಂದನೆ.) ॥೨೫-೨೬-೨೭-೨೮॥

ನಮೋ ನಾದ್ಯಾಯ ಚ; ನಮೋ ವೈಶಂತಾಯ ಚ; ನಮಃ ಕೂಪ್ಯಾಯ ಚ; ನಮ ಆವಟ್ಯಾಯ ಚ; ನಮೋ ವರ್ಷ್ಯಾಯ ಚ; ನಮ ಅವರ್ಷ್ಯಾಯ ಚ; ನಮೋ ಮೇಘ್ಯಾಯ ಚ; ನಮೋ ವಿದ್ಯುತ್ಯಾಯ ಚ; ನಮ ಈಧ್ರಿಯಾಯ ಚ;

ನಮೋ ವಷ್ಯಾರ್ಯಾಯ ಇತ್ಯನ್ಯೋ ಅವಷ್ಯಾರ್ಯಾಯೇತ್ಯಥಾಪರಃ ।
ನಮೋ ಮೇಧ್ಯಾಯ ಇತ್ಯನ್ಯೋ ವಿದ್ಯುತ್ಯಾಯೇತ್ಯಥಾಪರಃ ॥೩೦॥

ನಮ ಈಧ್ರಿಯಾಯ ಇತ್ಯನ್ಯೋ ಆತಪ್ಯ ಇತರೋ ಮನುಃ ।
ನಮೋ ವಾತ್ಯಾಯ ಚೇತ್ಯನ್ಯೋ ರೇಷ್ಮಿಯಾಯೇತ್ಯಥೋ ಮನುಃ॥೩೧॥

ವಾಸ್ತವ್ಯಾಯ ಚ ಇತ್ಯನ್ಯೋ ವಾಸ್ತುಪಾಯೇತ್ಯಥಾಪರಃ ।
ನಮಃ ಸೋಮಾಯ ಮಂತ್ರಾನ್ಯೋ ನಮಸ್ತಾಮ್ರಾಯ ಚೇತ್ಯಥ ॥೩೨॥

ನಮಃ ಶಂಗಾಯ ಮಂತ್ರೋऽನ್ಯೋ ನಮ ಉಗ್ರಾಯ ಚೇತ್ಯಥ ।
ನಮೋ ಅಗ್ರೇವಧಾಯೇತಿ ನಮೋ ಹಂತ್ರೇತ್ಯಥಾಪರಃ ॥೩೩॥

---

ನಮ ಆತಪ್ಯಾಯ ಚ; ನಮೋ ವಾತ್ಯಾಯ ಚ; ನಮೋ ರೇಷ್ಮಿಯಾಯ ಚ; ನಮೋ ವಾಸ್ತವ್ಯಾಯ ಚ; ನಮೋ ವಾಸ್ತುಪಾಯ ಚ; ನಮಃ ಸೋಮಾಯ ಚ ರುದ್ರಾಯ ಚ; ನಮಸ್ತಾಮ್ರಾಯ ಚಾರುಣಾಯ ಚ; ನಮಃ ಶಂಗಾಯ ಚ ಪಶುಪತಯೇ ಚ; ನಮ ಉಗ್ರಾಯ ಚ ಭೀಮಾಯ ಚ; ನಮೋ ಅಗ್ರೇವಧಾಯ ಚ ದೂರೇವಧಾಯ ಚ; ನಮೋ ಹಂತ್ರೇ ಚ ಹನೀಯಸೇ ಚ ;( ನದೀ ಜಲರೂಪದಿಂದಿರುವವನೂ, ಅಲ್ಪಸರೋವರದ ರೂಪದಿಂದ ಕಂಡುಬರುವವನೂ ಆದ ಶಂಕರನಿಗೆ ವಂದನೆ. ಬಾವಿಯ ಜಲದರೂಪದಿಂದಲೂ, ಹಳ್ಳದ ಜಲರೂಪದಿಂದಲೂ, ಮಳೆಯ ಜಲದ ರೂಪದಿಂದಲೂ, ಸಮುದ್ರಜಲದ ರೂಪದಿಂದಲೂ ತೋರಿಬರುವ ದೇವರಿಗೆ ವಂದನೆ. ಮೇಘಜಲದಿಂದಲೂ, ಮಿಂಚಿನಲ್ಲಿ ಅಡಗಿರುವುದರಿಂದಲೂ ಶೋಭಿಸುವ ದೇವರಿಗೆ ನಮಸ್ಕಾರ. ಶರತ್ಕಾಲದ ಮೇಘದಂತೆಯೂ, ಬಿಸಿಲಿನಂತೆಯೂ, ವಾಯುವಿನಲ್ಲಿ ಅಡಗಿರುವವನೂ, ಪ್ರಳಯಕಾಲದಲ್ಲಿ ರುದ್ರರೂಪಿನಿಂದಿರುವವನೂ, ಸಮಸ್ತವಸ್ತುಗಳಲ್ಲಿಯೂ ದೇವರೂಪದಲ್ಲಿರುವವನೂ, ಗೃಹರಕ್ಷಕರೂಪದಲ್ಲಿರುವವನೂ ಆದ ಶಂಕರನಿಗೆ ನಮಸ್ಕಾರ. ಉಮಾಸಮೇತನೂ, ಭಯಂಕರರೂಪಿಯೂ, ಉದಯಕಾಲದಲ್ಲಿ ರಕ್ತವರ್ಣವಿಶಿಷ್ಟನಾದ ಸೂರ್ಯನಂತೆಯೂ, ಅರುಣವರ್ಣವಿಶಿಷ್ಟನಾಗಿಯೂ, ಸುಖಪ್ರದನಾಗಿಯೂ, ಪಶುಪತಿಯಾಗಿಯೂ, ಶತ್ರುನಾಶದಲ್ಲಿ ಉಗ್ರನಾಗಿಯೂ, ಭಯಂಕರನಾಗಿಯೂ, ಮುಂದೆಯೇ ವಧಕಾರ್ಯಗಳುಳ್ಳವನಾಗಿಯೂ, ದೂರದಲ್ಲಿ ನಾಶಮಾಡುವ ಕಾರ್ಯತತ್ಪರನಾಗಿಯೂ, ಶತ್ರುನಾಶಕನಾಗಿಯೂ, ಹಂತಕನಾಗಿಯೂ ಇರುವ ಮಹೇಶ್ವರನಿಗೆ ವಂದನೆ. ॥೨೯-೩೦-೩೧-೩೨-೩೩॥

ನಮೋ ವೃಕ್ಷ್ಯೇಭ್ಯ ಇತ್ಯನ್ಯೋ ನಮಸ್ತಾರಾಯ ಇತ್ಯಥ ।
ನಮಃ ಶಂಭವ ಇತ್ಯನ್ಯೋ ನಮೋ ಮಯೋ ಭವೇತಿ ಚ ॥೩೪॥

ನಮಃ ಶಂಕರಾಯ ಚೇತಿ ಮಯಸ್ಕರಾಯ ಇತ್ಯಥ ।
ನಮಃ ಶಿವಾಯ ಮಂತ್ರೋಽನ್ಯೋ ಸರ್ವಮಂತ್ರಶಿಖಾಮಣಿಃ ॥೩೫॥

ತಥಾ ಶಿವತರಶ್ಚಾನ್ಯೋ ಮಂತ್ರೋಽಯಂ ಶಿವಬೋಧಕೃತ್ ।
ನಮಸ್ತೀರ್ಥ್ಯಾಯ ಚಾಪ್ಯನ್ಯೋ ನಮಃ ಕೂಪ್ಯಾಯ ಚೇತಿಚ ॥೩೬॥

ನಮಃ ಪಾರ್ಯಾಯ ಚೇತ್ಯನ್ಯೋ ಅವಾರ್ಯಾಯ ಚೇತ್ಯಪಿ ।
ನಮಃ ಪ್ರಕರಣಾಯೇತಿ ತಥಾ ಚೋತ್ತರಣೋ ಮನುಃ ॥೩೭॥

---

ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ; ನಮಸ್ತಾರಾಯ ನಮಃ ಶಂಭವೇ ಚ; ನಮೋ ಮಯೋಭವೇ ಚ; ನಮಃ ಶಂಕರಾಯ ಚ; ನಮೋ ಮಯಸ್ಕರಾಯ ಚ; ನಮಃ ಶಿವಾಯ ಚ ಎಂಬ ಈಮಂತ್ರವು ಸಕಲ ಮಂತ್ರಗಳಿಗೂ ಚೂಡಾಮಣಿಪ್ರಾಯವಾಗಿರುವುದು; ನಮಃ ಶಿವತರಾಯ ಚ; ಎಂಬ ಮಂತ್ರವೂ ಶಿವಜ್ಞಾನಪ್ರದವಾಗಿರುವುದು. ನಮಸ್ತೀ ರ್ಥ್ಯಾಯ ಚ; ನಮಃ ಕೂಲ್ಯಾಯ ಚ; ನಮಃ ಪಾರ್ಯಾಯ ಚ; ನಮ ಅವಾರ್ಯಾಯ ಚ; ನಮಃ ಪ್ರತರಣಾಯ ಚ; ನಮ ಉತ್ತರಣಾಯ ಚ; ನಮ ಆತಾರ್ಯಾಯ ಚ ಲಾದ್ಯಾಯ ಚ; ನಮಃ ಶಷ್ಪ್ಯಾಯ ಚ ಫೇನ್ಯಾಯ ಚ; ನಮಃ ಸಿಕತ್ಯಾಯ ಚ ಪ್ರವಾಹ್ಯಾಯ ಚ; ನಮ ಇರಿಣ್ಯಾಯ ಚ; ನಮಃ ಪ್ರಪಥ್ಯಾಯ ಚ; ನಮಃ ಪಾಗ್ಂ ಸವ್ಯಾಯ ಚ; ನಮೋ ರಜಸ್ಯಾಯ ಚ; ನಮಃ ಶುಷ್ಕ್ಯಾಯ ಚ; ನಮೋ ಹರಿತ್ಯಾಯ ಚ; ನಮೋ ಲೋಪ್ಯಾಯ ಚ; ನಮ ಉಲುಪ್ಯಾಯ ಚ; ನಮ ಊರ್ವ್ಯಾಯ ಚ ಸೂರ್ವ್ಯಾಯ ಚ; ಪರ್ಣ್ಯಾಯ ಚ ಪರ್ಣಶದ್ಯಾಯ ಚ, ನಮೋಪಗುರುಮಾಣಾಯ ಚಾಭಿಘ್ನತೇ ಚ (ಹರಿದ್ವರ್ಣದ ಎಲೆಗಳುಳ್ಳ ವೃಕ್ಷರೂಪದಲ್ಲಿಯೂ, ಪ್ರಣವಮಂತ್ರ ಸ್ವರೂಪದಲ್ಲಿಯೂ, ಸುಖಪ್ರದನಾಗಿಯೂ, ಮೋಕ್ಷಸುಖದ್ಯೋತಕನಾಗಿಯೂ, ಐಹಿಕಸುಖಪ್ರದನಾಗಿಯೂ, ಇರುವ ಶಂಕರನಿಗೆ ನಮಸ್ಕಾರ. ಕಲ್ಯಾಣರೂಪಿಯಾಗಿಯೂ, ಸನ್ಮಂಗಳಪ್ರದನಾಗಿಯೂ, ಪ್ರಯಾಗಾದಿ ತೀರ್ಥಕ್ಷೇತ್ರಗಳಲ್ಲಿ ಅಡಗಿರುವವನಾಗಿಯೂ, ನದೀತೀರದಲ್ಲಿರುವ ಶಿವಲಿಂಗಾದಿರೂಪದಲ್ಲಿ ತೋರುವವನಾಗಿಯೂ, ಸಂಸಾರ ಸಮುದ್ರದ ಕೊನೆಯ ದಡದಲ್ಲಿ ತೋರುವವನಾಗಿಯೂ, ಸಂಸಾರದಲ್ಲಿ

ನಮ ಆತಾರ್ಯಕೋ ಮಂತ್ರೋ ನಮಃ ಶಷ್ಪ್ಯಾಯ ಚೇತ್ಯಥ ।
ನಮಃ ಸಿಕತ್ಯಾಯ ಚೇತ್ಯನ್ಯೋ ನಮ ಇರಿಣ್ಯಾಯ ಚೇತ್ಯಥ ॥೩೮॥

ನಮಃ ಪ್ರಪಥ್ಯಾಯ ಚೇತ್ಯನ್ಯೋ ನಮಃ ಪಾಗ್ಂಸವ್ಯೋ ಮನುಃ ।
ನಮೋ ರಜಸ್ಯ ಇತ್ಯನ್ಯೋ ಶುಷ್ಕ್ಯೋಽಥ ಹರಿತೋ ಮನುಃ ॥೩೯॥

ನಮೋ ಲೋಪ್ಯಾಯ ಚೇತ್ಯನ್ಯೋ ಉಲಪ್ಯಾಯೇತ್ಯಥಾಪರಃ ।
ನಮ ಉರ್ವ್ಯಾಯ ಚೇತ್ಯನ್ಯೋ ನಮೋಽಪಗುರವೇ ಮನುಃ ॥೪೦॥

ನಮ ಅಕ್ಷ್ಪಿದತೇ ಚೇತಿ ನಮೋ ವಃ ಕಿರಿಕೋ ಮನುಃ ।
ನಮೋ ದೇವಾನಾಗ್ಂ ಹೃದಯಂ ನಮೋ ವಿಕ್ಷೀಣಕಂ ಪರಂ ॥೪೧॥

ನಮೋ ವಿಚಿನ್ವತ್ಕೇಭ್ಯ ನಮ ಆನಿರ್ಹತೇ ಪರಂ ।
ನಮ ಆಮೀವತ್ಕೇಭ್ಯೇತಿ ಅನುವಾಕಂ ಸಮಾಪ್ಯ ಚ ॥೪೨॥

---

ಕಾಮ್ಯಫಲಪ್ರದನಾಗಿಯೂ, ಪಾಪಫಲವನ್ನು ದಾಟಿದವನಾಗಿಯೂ, ಭಕ್ತರನ್ನು ಉದ್ಧರಿಸುವವನಾಗಿಯೂ, ಕಾಮ್ಯಕರ್ಮಾನುಷ್ಠಾನದಿಂದ ಸಂಸಾರದಲ್ಲಿ ಸುಖಿಸುವವರ ರೂಪದಲ್ಲಿ ನಿಲ್ಲುವವನಾಗಿಯೂ ಇರುವ ದೇವದೇವನಿಗೆ ವಂದನೆ. ಕರ್ಮಫಲವನ್ನು ಅನುಭವಿಸುವ ಜೀವನಾಗಿಯೂ, ಬಾಲತೃಣರೂಪದಲ್ಲಿಯೂ, ನೊರೆಯ ರೂಪದಲ್ಲಿಯೂ, ಮರಳಿನ ರೂಪದಲ್ಲಿಯೂ, ಪ್ರವಾಹದ ರೂಪದಲ್ಲಿಯೂ, ಊಷರ ಭೂಮಿಯ ಆಕಾರದಲ್ಲಿಯೂ, ಮಾರ್ಗ, ನೊರಜುಗಲ್ಲು, ವಾಸಯೋಗ್ಯಸ್ಥಳ, ಈ ರೂಪದಲ್ಲಿಯೂ, ಜಟಾಬದ್ಧನಾಗಿ ಭಕ್ತರಿಗೆ ಪ್ರತ್ಯಕ್ಷವಾಗುವ ಕೊಟ್ಟಿಗೆ, ಗೃಹ, ಹಾಸಿಗೆ ಇವೇ ಮೊದಲಾದ ಸ್ಥಳಗಳಲ್ಲಿ ನೆಲಸಿದವನಾಗಿಯೂ, ಕಾಡು, ಗುಹೆ, ಬಾವಿ, ಮಂಜು, ಪರಮಾಣು, ದೂಳು, ಒಣಮರ, ಹಸುರುಮರ, ಬಂಡೆ, ತೃಣ ಗುಲ್ಮ, ಭೂಮಿ, ತಟಾಕ, ಎಲೆರಾಶಿ, ಆಯುಧ ಇವುಗಳ ರೂಪದಿಂದಲೂ ತೋರಿ ಬರುವ ಶಂಕರನಿಗೆ ನಮಸ್ಕಾರ.) ॥೩೪-೩೫-೩೬-೩೭-೩೮-೩೯-೪೦॥

'ನಮ ಆಕ್ಖಿದತೇ ಚ ಪ್ರಕ್ಖಿದತೇ ಚ; ನಮೋ ವಃ ಕಿರಿಕೇಭ್ಯಃ; (ಶತ್ರುಗಳನ್ನು ಸ್ವಲ್ಪವಾಗಿಯೂ ಬಹಳವಾಗಿಯೂ ಖೇದಗೊಳಿಸುವವನಿಗೆ ನಮಸ್ಕಾರ, ಭಕ್ತರಿಗೆ ನಿಧಿಯನ್ನು ಎರಚುವವನಿಗೆ ನಮಸ್ಕಾರ.) 'ನಮೋ ದೇವಾನಾಗ್ಂ ಹೃದಯೇಭ್ಯಃ; ನಮೋ ವಿಕ್ಷೀಣಕೇಭ್ಯಃ; ನಮೋ ವಿಚಿನ್ವತ್ಕೇಭ್ಯಃ; (ದೇವತೆ

ಅನುಷಂಗಾದೇಭ್ಯ ಇತಿ ವೃಚ್ಛರೇತ್ಸಿದ್ಧವಿದ್ಯಕಃ ।
ದ್ರಾಪೇ ಅಂಧಸ ಇತ್ಯನ್ಯೋ ಯಾತೇ ರುದ್ರ ಶಿವೇತ್ಯಥ ॥೪೩॥

ಇಮಾ ರುದ್ರಾಯ ವಿದ್ಯಾನ್ಯಾ ಮೃಡಾನೋ ರುದ್ರಮಂತ್ರಕಃ ।
ಮಾನೋ ಮಹಾಂತ ಇತ್ಯನ್ಯೋ ಮಾನಸ್ತೋಕೋ ಮನುಸ್ತತಃ ॥೪೪॥

---

ಗಳಿಗೆ ಹೃದಯರೂಪದಿಂದಿರುವವನಿಗೂ, ಯಾವಾಗಲೂ ಕ್ಷೀಣಿಸದಿರುವವನಿಗೂ ವಂದನೆ) 'ನಮ ಆನಿರ್ಹತೇಭ್ಯಃ ; ನಮ ಆಮೀವತ್ಕೇಭ್ಯಃ ; (ಇಷ್ಟಾರ್ಥಗಳನ್ನು ಭಕ್ತರಿಗೆ ಕೊಡುವವನಿಗೂ, ಪಾಪನಾಶಕನಿಗೂ, ಸ್ಥೂಲರೂಪಿಗೂ ನಮಸ್ಕಾರ) ಎಂಬ ಅನುವಾಕವನ್ನು ಮುಗಿಸಿ ಸಿದ್ಧವಿದ್ಯೆಯುಳ್ಳವನಾಗಿ ಹೋಮಾಂತದಲ್ಲಿ ಆಯಾ ದೇವತೆಗಳಿಗೆ ವಿನಿಯೋಗವನ್ನು ಉಚ್ಚಾರಮಾಡಬೇಕು. 'ದ್ರಾಪೇ ಅಂಧಸಸ್ಪತೇ ದರಿದ್ರನ್ನೀಲಲೋಹಿತ । ಏಷಾಂ ಪುರುಷಾಣಾಮೇಷಾಂ ಪಶೂನಾಂ । ಮಾಭೇರ್ಮಾರೋ ಮೋ ಏಷಾಂ ಕಿಂಚನಾಮಮತ್' 'ಯಾತೇ ರುದ್ರಶಿವಾತನೂ ಶ್ಶಿವಾ ವಿಶ್ವಾಹಭೇಷಜೀ । ಶಿವಾ ರುದ್ರಸ್ಯ ಭೇಷಜೀ ತಯಾನೋ ಮೃಡಜೀವಸೇ' (ದುಷ್ಟಶಿಕ್ಷಕನಾಗಿ, ಅನ್ನಾಧಿಪತಿಯಾಗಿದ್ದರೂ ಸ್ವಯಂ ದಿಗಂಬರನಾಗಿ ನೀಲಲೋಹಿತನೆನಿಸಿಕೊಂಡಿರುವ ಪರಮೇಶ್ವರನೇ, ನೀನು ನಮ್ಮ ಮಕ್ಕಳು ಮೊಮ್ಮಕ್ಕಳಿಗೂ, ನಮ್ಮ ಪಶುಸಂಪತ್ತಿಗೂ ಎಂದೂ ಭಯಪ್ರದನಾಗಬೇಡ. ಈ ಸಂಪತ್ತು ನಮ್ಮಿಂದ ಯಾವಾಗಲೂ ದೂರವಾಗದಿರಲಿ.) ॥೪೧-೪೨-೪೩॥

'ಇಮಾ ರುದ್ರಾಯ ತವಸೇಕಪರ್ದಿನೇ ಕ್ಷಯದ್ವೀರಾಯ ಪ್ರಭರಾಮಹೇ ಮತಿಂ; ಯಥಾ ನಃ ಶಮಸದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನನಾತುರಂ' (ಪರಶಿವನೇ, ನಿನ್ನ ಮಂಗಳಕರವಾದ ದೇಹವು ಪ್ರಪಂಚದಲ್ಲಿ ಕಂಡುಬರುವ ಸಮಸ್ತ ವ್ಯಾಧಿಗೂ, ದರಿದ್ರಕ್ಕೂ ಔಷಧಪ್ರಾಯವಾಗಿರುವುದು. ಅಂತಹ ದೇಹವು ನಮ್ಮನ್ನು ಕಾಪಾಡಲಿ. ಈ ಗ್ರಾಮದಲ್ಲಿರುವ ದ್ವಿಪಾದ ಮತ್ತು ಚತುಷ್ಪಾದ ಪ್ರಾಣಿಗಳಿಗೆಲ್ಲಾ ದುಃಖನಿವೃತ್ತಿಪೂರ್ವಕ ಸುಖಪ್ರಾಪ್ತಿಯಾಗುವಂತೆ ಅನುಗ್ರಹಮಾಡು.) 'ಮೃಡಾನೋ ರುದ್ರೋತನೋ ಮಯಸ್ಕೃಧಿ ಕ್ಷಯದ್ವೀರಾಯ ನಮಸಾ ವಿಧೇಮತೇ । ಯಚ್ಛಂ ಚ ಯೋಶ್ಚ ಮನುರಾಯಜೇ ಪಿತಾ ತದಶ್ಯಾಮ ತವ ರುದ್ರಪ್ರಣೀತೌ ॥' 'ಮಾನೋ ಮಹಾಂತಮುತಮಾನೋ ಅರ್ಭಕಂ ಮಾನ ಉಕ್ಷಂತಮುತಮಾನ ಉಕ್ಷಿತಂ । ಮಾನೋ ವಧೀಃ ಪಿತರಂ ಮೋತ ಮಾತರಂ

ಆರಾತ್ತೇ ಗೋಘ್ನ ಇತ್ಯನ್ಯೋ ಸ್ತುಹಿ ಶ್ರುತಮಥಾಪರಃ ।
ಪರಿಣೋ ರುದ್ರ ಇತ್ಯನ್ಯೋ ಮೀಢುಷ್ಟಮ ತತೋಽಪರಃ ॥೪೫॥

---

ಪ್ರಿಯಾಮಾನಸ್ತನುವೋ ರುದ್ರರೀರಿಷಃ ॥' 'ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ । ವೀರಾನ್ಮಾನೋ ರುದ್ರಭಾಮಿತೋ ವಧೀರ್ಹವಿಷ್ಮಂತೋ ನಮಸಾ ವಿಧೇಮತೇ॥' 'ಆರಾತ್ತೇ ಗೋಘ್ನ ಉತಪೂರುಷಘ್ನೇ ಕ್ಷಯದ್ವೀರಾಯ ಸುಮ್ನಮಸ್ಮೇತೇ ಅಸ್ತು । ರಕ್ಷಾ ಚನೋ ಅಧಿಚದೇವಬ್ರೂಹ್ಯಥಾ ಚ ನಃ ಶರ್ಮಯಚ್ಛ ದ್ವಿಬರ್ಹಾಃ ॥' 'ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಂ । ಮೃಡಾ ಜರಿತ್ರೇ ರುದ್ರಸ್ತವಾನೋ ಅನ್ಯಂತೇ ಅಸ್ಮನ್ನಿವಪಂತು ಸೇನಾಃ ॥' 'ಪರಿಣೋ ರುದ್ರಸ್ಯ ಹೇತಿರ್ವೃಣಕ್ತು ಪರಿತ್ವೇಷಸ್ಯ ದುರ್ಮತಿರಘಾಯೋಃ । ಅವಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಡಯ ॥' 'ಮೀಢು ಷ್ಟಮ ಶಿವತಮ ಶಿವೋ ನಃ ಸುಮನಾಭವ । ಪರಮೇ ವೃಕ್ಷ ಆಯುಧಂ ನಿಧಾಯ ಕೃತ್ತಿಂ ವಸಾನ ಆಚರ ಪಿನಾಕಂ ಬಿಭ್ರದಾಗಹಿ ॥' 'ವಿಕಿರಿದ ವಿಲೋಹಿತ ನಮಸ್ತೇ ಅಸ್ತು ಭಗವಃ । ಯಾಸ್ತೇ ಸಹಸ್ರಗ್ಂ ಹೇತಯೋಽನ್ಯಮಸ್ಮನ್ನಿವಪಂತು ತಾಃ ॥' 'ಸಹಸ್ರಾಣಿ ಸಹಸ್ರಧಾ ಬಾಹುವೋಸ್ತವ ಹೇತಯಃ । ತಾಸಾಮೀಶಾನೋ ಭಗವಃ ಪರಾಚೀನಾ ಮುಖಾಕೃಧಿ ॥' 'ಸಹಸ್ರಾಣಿ ಸಹಸ್ರಶೋಯೇ ರುದ್ರಾ ಅಧಿಭೂಮ್ಯಾಂ ತೇಷಾಗ್ಂ ಸಹಸ್ರಯೋಜನೇವ ಧನ್ವಾನಿ ತನ್ಮಸಿ ॥' 'ಅಸ್ಮಿನ್ಮಹ ತ್ಯರ್ಣವೇಂತರಿಕ್ಷೇ ಭವಾ ಅಧಿ' (ಎಲೈ ರುದ್ರದೇವನೇ, ನಮಗೆ ಐಹಿಕ ಮತ್ತು ಪಾರಲೌಕಿಕ ಸುಖಗಳನ್ನು ಕಲ್ಪಿಸು. ನಮ್ಮ ಪಾಪರಾಶಿಗಳನ್ನು ನಿರ್ಮೂಲ ಗೊಳಿಸಬಲ್ಲ ಶಕ್ತಿಯುಳ್ಳ ನಿನಗೆ ನಾವು ನಮಸ್ಕರಿಸುವೆವು. ಜಗತ್ತಿಗೆ ತಂದೆಯಂ ತಿರುವ ಪ್ರಜಾಪತಿ ಬ್ರಹ್ಮನು ಯಾವ ಸುಖವನ್ನು ಪಡೆದಿರುವನೋ ಅಂತಹ ದುಃಖಮಿಶ್ರವಲ್ಲದ ಆನಂದವನ್ನು ನಿನ್ನ ಸ್ನೇಹಾತಿಶಯದಿಂದ ನಾವು ಸಂಪಾದಿಸ ಬಲ್ಲೆವು. ರುದ್ರದೇವನೇ, ನಮ್ಮ ಸಂಬಂಧಿಗಳಾದ ವೃದ್ಧರನ್ನೂ, ಬಾಲಕರನ್ನೂ, ಸಮರ್ಥರಾದವರನ್ನೂ, ಗರ್ಭಸ್ಥವಾದ ಶಿಶುಗಳನ್ನೂ, ನಮ್ಮ ಮಾತಾಪಿತೃಗಳನ್ನೂ ನಮ್ಮ ಪ್ರಿಯಕರಗಳಾದ ಶರೀರಗಳನ್ನೂ ಕಾಪಾಡು. ಯಾವ ಹಿಂಸೆಯನ್ನೂ ಇವರಿಗೆ ಕೊಡಬೇಡ. ಪರಶಿವನೇ, ನಮ್ಮ ಗರ್ಭಸ್ಥ ಶಿಶುಗಳನ್ನೂ, . ಹುಟ್ಟಿದ ಮಕ್ಕಳನ್ನೂ, ಹಿಂಸೆಯಿಲ್ಲದೆ ಕಾಪಾಡು. ಕೋಪಗೊಂಡು ನಮ್ಮ ಸೇವಕರನ್ನು

ವಿಕಿರಿದಿತಿ ಮಂತ್ರೋsನ್ಯೋ ಸಹಸ್ರಾಣಿ ಸಹಸ್ರಧಾ ।
ಸಹಸ್ರಾಣಿ ಸಹಸ್ರಶೋಯೋ ಅಸ್ಮಿನ್ನಿತ್ಯಪರೋ ಮನುಃ ॥೪೬॥

---

ಹಿಂಸಿಸಬೇಡ. ಹವಿಸ್ಸಿನಿಂದ ಕೂಡಿಕೊಂಡು ನಾವು ಸದಾ ನಿನ್ನನ್ನು ಪೂಜಿಸುವೆವು. ಗೋಹತ್ಯ, ಪುತ್ರಪೌತ್ರಾದಿಗಳ ಹನನ ಇವುಗಳನ್ನು ನಡೆಸಿದವರಿಗೆ ತೋರ್ಪಡಿಸುವಂತಹ ನಿನ್ನ ಉಗ್ರವಾದ ರೂಪವನ್ನು ಮಾತ್ರ ನಮಗೆ ಕಾಣಿಸಬೇಡ. ಸುಖಕರವಾದ ನಿನ್ನ ಸುಂದರ ರೂಪವನ್ನೇ ಮಾತ್ರ ನಮಗೆ ಆಗಾಗ ತೋರ್ಪಡಿಸುತ್ತಿರು. ಎಲ್ಲ ರೀತಿಯಲ್ಲಿಯೂ ಯಾವಾಗಲೂ ನಮ್ಮನ್ನು ರಕ್ಷಿಸು. ಯಾಗ ಕರ್ತೃಗಳಾದ ಯಜಮಾನರಂತೆಯೇ ನಮ್ಮನ್ನು ದೇವತೆಗಳ ಮಧ್ಯದಲ್ಲಿ ನಿಯೋಜಿಸು. ಭೂರ್ಭುವಾದಿ ಲೋಕಗಳನ್ನು ವೃದ್ಧಿಗೊಳಿಸುವಂತಹ ಪರಮಾತ್ಮನೇ, ನೀನು ನಮ್ಮನ್ನು ಕಾಪಾಡು. ಎಲೈ ಮನಸ್ಸೇ, ಸರ್ವರ ಹೃದಯಕಮಲದಲ್ಲಿಯೂ ಸ್ಫುರಿಸುತ್ತಿರುವ ಸರ್ವದಾ ಯುವಕನಂತೆ ಕಾಣುವ, ಪ್ರಳಯಕಾಲದಲ್ಲಿ ಸಮಸ್ತ ಪ್ರಪಂಚವನ್ನೂ ನಿರ್ಮೂಲಗೊಳಿಸಬಲ್ಲ ಮಹಾದೇವನನ್ನು ಸರ್ವದಾ ಧ್ಯಾನಿಸುತ್ತಿರು. ಆನೆಯೇ ಮೊದಲಾದುವುಗಳು ಸಿಂಹವನ್ನು ಕಂಡು ಹೆದರುವಂತೆ, ರುದ್ರದೇವನನ್ನು ನೋಡಲು ಭಯಭಕ್ತಿಗಳಿಂದ ಮುಂದುವರಿ. ಪರಮೇಶ್ವರನೇ, ಈರೀತಿ ಸರ್ವದಾ ಸ್ತುತಿಸುತ್ತಿರುವ ನಮ್ಮನ್ನು ಕಾಪಾಡು. ಕ್ಷೀಣಸ್ವಭಾವದ ನಮ್ಮ ಶರೀರವನ್ನು ಪರಿಪುಷ್ಟಿಗೊಳಿಸು. ನಿನ್ನ ಸೈನ್ಯಗಳು ನಮ್ಮ ಶತ್ರುಗಳನ್ನು ನಿರ್ಮೂಲಗೊಳಿಸಲಿ. ಶತ್ರುನಾಶಕವಾದ ರುದ್ರನ ಧನುರ್ಬಾಣಗಳು ನಮ್ಮನ್ನು ಸರ್ವದಾ ರಕ್ಷಿಸುತ್ತಿರಲಿ. ಕ್ರೋಧಾವಿಷ್ಟವಾದ ಮತ್ತು ಮಹಾಪಾಪ ನಿವಾರಕವಾದ ಪರಶಿವನ ಉಗ್ರಕೋಪವು ನಮ್ಮನ್ನು ಸದಾ ಕಾಪಾಡಲಿ. ವಿರೋಧಿನಾಶಕವಾದ ನಿನ್ನ ಕೋಪವು ಯಾಗಕರ್ತೃಗಳಾದ ಯಜಮಾನರಿಗೆ ಅನ್ನಪ್ರದಗಳಾದ ವೃಷ್ಟ್ಯಾದಿಗಳನ್ನು ಸರ್ವದಾ ಕರುಣಿಸುತ್ತಿರಲಿ. ಇಷ್ಟಾರ್ಥಪ್ರದನಾದ ಶಂಕರನೇ, ಶಾಂತಾತ್ಮನೇ, ನಮ್ಮ ಮೇಲಿನ ದಯೆಯಿಂದ, ನೀನು ನಿನ್ನ ಸಮಸ್ತ ಆಯುಧಗಳನ್ನೂ ವಟ, ಅಶ್ವತ್ಥ ಮುಂತಾದ ದೇವವೃಕ್ಷಗಳಲ್ಲಿ ನಮಗೆ ಕಾಣದಂತೆ ಅಡಗಿಸಿಡು. ವ್ಯಾಘ್ರ ಚರ್ಮಧಾರಿಯಾದ ನಿನ್ನ ರೂಪವನ್ನು ಮಾತ್ರ ನಮಗೆ ಕರುಣಿಸು. ಒಂದು ವೇಳೆ ಧನುರ್ಧಾರಿಯಾಗಿ ಗೋಚರಿಸಬೇಕಾದರೂ ಕೇವಲ ಅಲಂಕಾರಾರ್ಥವಾದ ಧನುಸ್ಸನ್ನು ಮಾತ್ರ ಹಿಡಿದು ಪ್ರತ್ಯಕ್ಷನಾಗು. ಭಕ್ತರಿಗೆ ಸಕಲೈಶ್ವರ್ಯವನ್ನೂ ಕರುಣಿಸುವ ರಕ್ತವರ್ಣದಿಂದ ಶೋಭಿಸುವವನೇ, ಷಡ್ಗುಣೈಶ್ವರ್ಯಸಂಪನ್ನನೇ, ನಿನಗೆ ನಮಸ್ಕಾರ.

ನೀಲಗ್ರೀವಾ ಶಿತಿಚಾನ್ಯೋ ನೀಲಾತನ್ವಾ ಇತೀರಿತಃ ।
ಯೇ ವೃಕ್ಷೇಷು ಮಂತ್ರೋಽನ್ಯೋ ಯೇ ಭೂತಾನಾಮಥಾಪರಃ ॥೪೭॥

---

ವನೇ, ಅತ್ಯಂತ ಸಹಸ್ರಸಂಖ್ಯಾಕಗಳಾದ ನಿನ್ನ ಆಯುಧಗಳು ನಮ್ಮನ್ನು ರಕ್ಷಿಸುತ್ತಾ ನಮ್ಮ ವೈರಿಗಳನ್ನು ಮಾತ್ರ ನಾಶಗೊಳಿಸಲಿ. ನಿನ್ನ ಒಂದೊಂದು ಆಯುಧಗಳೂ ಸಾವಿರಾರು ಸಂಖ್ಯೆಯಲ್ಲಿ ಕಂಡುಬರುತ್ತಿವೆ. ಅಂತಹ ಎಲ್ಲ ಆಯುಧಗಳೂ ನಮ್ಮ ಶತ್ರುಗಳ ಕಡೆಗೆ ತಿರುಗಿ ಅವರನ್ನು ನಾಶಗೊಳಿಸುವ ಕಾರ್ಯದಲ್ಲಿ ತ್ವರೆಗೊಳ್ಳಲಿ ಪರಮೇಶ್ವರನೇ, ನಿನಗೆ ವಂದನೆ.) ॥೪೪-೪೫-೪೬॥

'ನೀಲಗ್ರೀವಾಃ ಶಿತಿಕಂಠಾಃ ಶರ್ವಾ ಅಧಃ ಕ್ಷಮಾಚರಾಃ' 'ನೀಲ ಗ್ರೀವಾಃ ಶಿತಿಕಂಠಾ ದಿವಗ್‌ಂ ರುದ್ರಾ ಉಪಶ್ರಿತಾಃ' 'ಯೇ ವೃಕ್ಷೇಷು ಸಸ್ಪಿಂಜರಾಃ ನೀಲಗ್ರೀವಾ ವಿಲೋಹಿತಾಃ' 'ಯೇ ಭೂತಾನಾಮಧಿಪತಯೋ ವಿಶಿಖಾ ಸಃ ಕಪರ್ದಿನಃ' 'ಯೇ ಅನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋ ಜನಾನ್' 'ಯೇ ಪಥಾಂ ಪಥಿ ರಕ್ಷಯ ಐಲಬೃದಾಯವ್ಯುಧಃ' 'ಯೇ ತೀರ್ಥಾನಿ ಪ್ರಚರಂತಿ ಸೃಕಾವಂತೋ ನಿಷಂಗಿಣಃ' 'ಯ ಏತಾವಂತಶ್ಚ ಭೂಯಾಗ್‌ಂಸಶ್ಚ ದಿಶೋ ರುದ್ರಾವಿತಸ್ಥಿರೇ' 'ತೇಷಾಗ್‌ಂ ಸಹಸ್ರಯೋಜನೇ ವಧನ್ವಾನಿ ತನ್ಮಸಿ' 'ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತರಿಕ್ಷೇಯೇ ದಿವಿ ಯೇಷಾ ಮನ್ನಂ ವಾತೋ ವರ್ಷಮಿಷವಸ್ತೇಭ್ಯೋ ದಶಪ್ರಾಚೀರ್ದಶದಕ್ಷಿಣಾ ದಶಪ್ರತೀ ಚೀರ್ದಶೋದೀಚೀರ್ದಶೋರ್ಧ್ವಾಃ ತೇಭ್ಯೋ ನಮಸ್ತೇನೋ ಮೃಡಯಂತು ತೇ ಯಂದ್ವಿಷ್ಮೋ ಯಶ್ಚನೋ ದ್ವೇಷ್ಟಿತಂವೋ ಜಂಭೇದಧಾಮಿ' ಈರೀತಿಯಾಗಿ ನೂರು ಮಂತ್ರಗಳು ಒಟ್ಟುಗೂಡಿ ಶತರುದ್ರವೆನಿಸಿದೆ. (ಪರಮೇಶ್ವರನೇ, ನಿನ್ನ ಸಹಸ್ರಾರು ಸಂಖ್ಯೆಯ ಪ್ರಮಥಗಣಗಳು, ವಿನಾಯಕ, ನಂದಿ, ಷಣ್ಮುಖ ಮುಂತಾದ ಆಕಾರಗಳಿಂದ ಭೂಲೋಕದಲ್ಲಿ ಸಂಚರಿಸುತ್ತಿವೆಯಲ್ಲವೆ! ಅಂತಹ ರುದ್ರಾಂಶ ಸಂಭೂತ ಗಣಗಳು ಪ್ರತ್ಯೇಕಪ್ರತ್ಯೇಕವಾಗಿ ಸಹಸ್ರಾರು ಉಗ್ರವಾದ ಆಯುಧಗಳನ್ನು ಧರಿಸಿವೆ. ಅಂತಹ ಉಗ್ರಾಯುಧಗಳೆಲ್ಲವೂ, ನಮ್ಮಿಂದ ನೂರಾರು ಯೋಜನ ದೂರದಲ್ಲಿ ನಿಂತು, ನಮ್ಮ ಶತ್ರುಗಳನ್ನು ಮಾತ್ರ ಧ್ವಂಸಗೊಳಿಸಲಿ. ಅದೇ ರೀತಿ ರುದ್ರಾಂಶಸಂಭೂತಗಣಗಳು ರುದ್ರರೂಪದಿಂದ, ಮಹಾಸಮುದ್ರದಂತೆ ವಿಶಾಲವಾಗಿ ಕಂಡುಬರುವ ಅಂತರಿಕ್ಷಮಧ್ಯದಲ್ಲಿಯೂ ವಿಹರಿಸುತ್ತಿವೆಯಷ್ಟೆ. ಆ ಗಣದೇವತೆಗಳು ಕತ್ತಿನಲ್ಲಿ ನೀಲವರ್ಣವನ್ನೂ, ಕಂಠದಲ್ಲಿ ವಿಷವನ್ನೂ ಹೊಂದಿ, ಭೂಲೋಕ ಮತ್ತು

ಯೇ ಅನ್ನೇಷು ಇತ್ಯನ್ಯೋ ಯೇ ಪಥಾಂ ಪಥಿಮಂತ್ರಕೇಃ ।
ಯೇ ತೀರ್ಥಾನಿ ಮಂತ್ರಾನ್ನ್ಯೋ ಯ ಏತಾವಂತ ಇತ್ಯಥ ॥೪೮॥

ನಮೋ ರುದ್ರೇಭ್ಯ ಇತ್ಯನ್ಯೋ ತಂ ವೋ ಜಂಭೇತಿ ಚ ತ್ರಿಭಿಃ ।
ಏವಂ ಶತಂ ತೇ ಮಂತ್ರಾಃ ಸ್ಯುಃ ಶತರುದ್ರಾಃ ಸಮೀರಿತಾಃ ॥೪೯॥

---

ಪಾತಾಳಲೋಕದಲ್ಲಿಯೂ ಸಂಚರಿಸುವವರಾಗಿ ಕಂಡುಬರುತ್ತಾರೆ. ಮತ್ತೆ ಕೆಲವು ರುದ್ರಗಣಗಳು ಸ್ವರ್ಗದಲ್ಲಿ ಮಾತ್ರ ಸಂಚರಿಸುವರು. ಮತ್ತೆ ಹಲವರು, ವೃಕ್ಷಾದಿಗಳಲ್ಲಿ, ಬಾಲತೃಣವರ್ಣಸಾಮ್ಯವನ್ನು ಪಡೆದು ನೀಲಗ್ರೀವರಾಗಿ ವಿಹರಿಸುವರು. ಇನ್ನು ಕೆಲವರು ಅತ್ಯಂತ ರಕ್ತವರ್ಣದಿಂದ ವಿರಾಜಿಸುತ್ತಾ, ಭಯಂಕರರಾಗಿ ಎಲ್ಲೆಲ್ಲಿಯೂ ಸುತ್ತುತ್ತಿರುವರು. ಭೂತಗಳ ಆಕಾರದಿಂದ ಶರೀರವಿಲ್ಲದೆ ಮನುಷ್ಯರಿಗೆ ವಿಶೇಷ ಉಪದ್ರವವನ್ನುಂಟುಮಾಡುತ್ತಾ ಅಲ್ಲಲ್ಲಿ ಓಡಾಡುವ ಭೂತಗಳೂ ಬಹಳವಾಗಿ ಕಂಡುಬರುವುವು. ಇಂತಹ ರುದ್ರಗಣಗಳ ಬಾಣಾದಿಗಳೆಲ್ಲವೂ ನಮ್ಮ ಸ್ಥಳಕ್ಕಿಂತ ಸಾವಿರಾರು ಯೋಜನದ ದೂರದಲ್ಲಿಯೇ ನಿಂತುಹೋಗಲಿ. ಹಾಗೆಯೇ ಜನರು ಊಟಮಾಡುವ ಆಹಾರಾದಿಗಳಲ್ಲಿ ಅಡಗಿ, ಊಟಮಾಡುವವರಿಗೆ ತೊಂದರೆ ಕೊಡುವಂತಹ ರುದ್ರಗಣಗಳೂ, ಕ್ಷೀರಪಾತ್ರೆಯೇ ಮೊದಲಾದ ದ್ರವವಸ್ತುಗಳಿಗೆ ಆಶ್ರಯಕೊಡುವ ಪಾತ್ರೆಗಳಲ್ಲಿ ನಿಂತು, ಅದನ್ನು ಕುಡಿಯುವವರಿಗೆ ವಿಶೇಷ ತೊಂದರೆಯನ್ನುಂಟುಮಾಡುವ ರುದ್ರದೇವತೆಗಳೂ, ಲೌಕಿಕ ವೈದಿಕ ಮಾರ್ಗಗಳಲ್ಲಿ ತತ್ಪರರಾದವರನ್ನು ಕಾಪಾಡುವ ರುದ್ರಗಣಗಳೂ, ಪ್ರಾಣಿಗಳಿಗೆ ಅನ್ನಾದಿ ಆಹಾರಗಳನ್ನು ಕೊಟ್ಟು ಸರ್ವದಾ ಅವರನ್ನು ರಕ್ಷಿಸುತ್ತಿರುವ ರುದ್ರಗಣಗಳೂ, ನಮ್ಮ ಶತ್ರುಗಳೊಡನೆ ಹೋರಾಡಿ, ನಮ್ಮನ್ನು ಅವರಿಂದ ಕಾಪಾಡುತ್ತಿರುವ ರುದ್ರದೇವತೆಗಳೂ, ತಮ್ಮ ತಮ್ಮ ಉಗ್ರವಾದ ಆಯುಧರಾಶಿಯನ್ನು ದೂರದಲ್ಲಿರಿಸಿ ನಮ್ಮನ್ನು ಶಾಂತರೀತಿಯಿಂದ ಸಲಹುತ್ತಿರಲಿ. ಮತ್ತು ಹರಿತವಾದ ಕತ್ತಿಗಳನ್ನು ಹಿಡಿದು ಕಾಶೀ, ಪ್ರಯಾಗ ಮುಂತಾದ ಪವಿತ್ರ ಶಿವಕ್ಷೇತ್ರಗಳನ್ನು ರಕ್ಷಣೆಮಾಡುತ್ತಿರುವ ರುದ್ರಗಣಗಳೂ, ಬಾಣ ಬತ್ತಳಿಕೆಗಳಿಂದ ತೀರ್ಥಕ್ಷೇತ್ರಾದಿಗಳನ್ನು ರಕ್ಷಿಸುವ ಶಿವಗಣಗಳೂ, ಇದೇ ರೀತಿ ನಾನಾದಿಕ್ಕುಗಳಲ್ಲಿ ಶಿವಾಜ್ಞಾನುಸಾರವಾಗಿ ಸಂಚರಿಸುವ ವಿವಿಧ ರುದ್ರಗಣಗಳೂ ನಮ್ಮನ್ನು ಸರ್ವದಾ ಸಲಹುತ್ತಿರಲಿ. ಅವರ ಆಯುಧಗಳು ಮಾತ್ರ ನಮ್ಮನ್ನು ಹೆದರಿಸದೆ, ದೂರದಲ್ಲಿಯೇ ನಿಂತು ಸಂರಕ್ಷಿಸಲಿ. ಅಂತರಿಕ್ಷದಲ್ಲಾಗಲಿ, ವಾಯುಮಂಡಲದಲ್ಲಾಗಲಿ, ಇಷುರೂಪದಿಂದ ವಾಯುರೂಪದಿಂದ

ಅಷ್ಟಪಂಚಾಶದಧಿಕಾಃ ಶತಮಂತ್ರಾಃ ಪ್ರಕೀರ್ತಿತಾಃ ।
ಏತೇಽಮೃತಾಖ್ಯಾ ಮಂತ್ರಾಃ ಸ್ಯುರಮೃತತ್ವಪ್ರದಾಯಕಾಃ ॥೫೦॥

ಸ್ವಾಹಾಂತಾ ಹೋಮಕಾಲೇಸ್ಯುಃ ಸರ್ವಸಿದ್ಧಿಪ್ರದಾಯಕಾಃ ।
ಶ್ರೀರುದ್ರಾಯ ಇದಂ ನಮಮೇತ್ಯುಚ್ಚರೇದ್ಬ್ರಾಹ್ಮಣೋತ್ತಮೈಃ ॥೫೧॥

ಅಷ್ಟಪಂಚಾಶದಧಿಕಶತಮಂತ್ರೈಃ ಫಲಪ್ರದೈಃ ।
ಹುತ್ವಾ ಪಶ್ಚಾದ್ವಸೋರ್ಧಾರಾಂ ಏಕಾಮಾಹುತಿಮಾಚರೇತ್ ॥೫೨॥

---

ವಿವಿಧ ಆಕಾರಗಳಿಂದ ಸಂಚರಿಸುವ ಸಮಸ್ತ ರುದ್ರಾಂಶದೇವತೆಗಳೂ, ಆಹಾರವನ್ನೇ ಬಾಣವನ್ನಾಗಿ ಮಾಡಿಕೊಂಡಿರುವ ರುದ್ರದೇವತೆಗಳೂ, ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ, ಅಧೋಭಾಗಗಳಲ್ಲಿರುವ ನೂರಾರು ಸಂಖ್ಯೆಯ ಸಮಸ್ತ ದೇವತೆಗಳೂ, ನಮಗೆ ನಿತ್ಯಸುಖವನ್ನುಂಟುಮಾಡುತ್ತಾ ನಮ್ಮ ಶತ್ರುಸಮೂಹವನ್ನು ಧ್ವಂಸಗೊಳಿಸುತ್ತಾ ನಮ್ಮನ್ನು ಕಾಪಾಡಲಿ. ನಾವಾದರೋ ಅಂತಹ ರುದ್ರ ದೇವತೆಗಳಿಗೆ ನಾಲ್ಕು ದಿಕ್ಕುಗಳಲ್ಲಿಯೂ ಅಭಿಮುಖವಾಗಿ ನಿಂತು ದಶಾಂಗುಲ ಪರಿಮಿತವಾದ ಅಂಜಲಿಯನ್ನು ಶಿರಸ್ಸಿನಲ್ಲಿಟ್ಟು ದೀರ್ಘದಂಡ ಪ್ರಣಾಮಮಾಡುವೆವು. ಸತ್ಪುರುಷರನ್ನು ನಿಷ್ಕಾರಣವಾಗಿ ದ್ವೇಷಿಸುವ ಹಾಗೆಯೇ ಮೌನದಿಂದಿರುವ ನಮ್ಮನ್ನು ನಿಷ್ಕಾರಣವಾಗಿ ದ್ವೇಷಿಸಿ ಹಿಂಸೆಕೊಡುವ ಶತ್ರುವರ್ಗವನ್ನು ಎಲೈ ರುದ್ರದೇವತೆಗಳೇ, ನಿಮ್ಮ ವಿಶಾಲವಾದ ಬಾಯಿಯೊಳಕ್ಕೆ ಹಾಕಿ ಆ ಮೂಲಕ ಶತ್ರುನಿರ್ಮೂಲವನ್ನು ಸಾಧಿಸುವೆವು.) ||೪೭-೪೮-೪೯||

ಹೀಗೆ ಒಟ್ಟು ನೂರೈವತ್ತೆಂಟು ಮಂತ್ರಗಳು ಅಮೃತಸಂಜ್ಞೆಯನ್ನು ಹೊಂದಿ ಅಮರತ್ವವನ್ನು ಕೊಡತಕ್ಕವುಗಳೆನಿಸಿವೆ. ಹೋಮ ಮಾಡುವ ಕಾಲದಲ್ಲಿ ಈ ಮಂತ್ರಗಳ ಕೊನೆಯಲ್ಲಿ ಸ್ವಾಹಾಪದವನ್ನುಚ್ಚರಿಸಿ ಅನಂತರ ವಿಧ್ಯುಕ್ತ ದ್ರವ್ಯ ಗಳಿಂದ ಹೋಮಮಾಡಿದರೆ, ಮಾಡಿದವರಿಗೆ ಸಕಲ ಇಷ್ಟಾರ್ಥಗಳೂ ಅನಾಯಾಸ ವಾಗಿ ಲಭಿಸುವುವು. ಆ ಹೋಮಕಾಲದಲ್ಲಿ ಬ್ರಾಹ್ಮಣೋತ್ತಮರು " ಶ್ರೀರುದ್ರಾಯ ಇದಂ ನಮಮ " ಎಂದು ಉದ್ದೇಶತ್ಯಾಗಮಾಡುತ್ತಾ ರುದ್ರನಾಮಕನಾದ ಪರಮೇಶ್ವರನಿಗೆ ಇದು ತೃಪ್ತಿಯಾಗಲಿ ಎಂದು ಹೇಳುತ್ತಿರಬೇಕು. ||೫೦-೫೧||

ಐಹಿಕಾಮುಷ್ಮಿಕ ಫಲಗಳನ್ನುಂಟುಮಾಡುವ ಈ ನೂರೈವತ್ತೆಂಟು ಮಂತ್ರ ಗಳಿಂದ ಒಂದು ಸಾರಿ ಹೋಮಮಾಡಿ, ಅನಂತರ ಕೊನೆಯಲ್ಲಿ ಪೂರ್ಣಾಹುತಿಯಿಂದ

ಏವಮೇಕಾದಶಾವೃತ್ಯಾ ರುದ್ರೈಕಾದಶಿನೀ ಸ್ಮೃತಾ ।
ಯಃ ಕೋಽಪಿ ನಮಕಾಂತಸ್ಥೈರ್ಮಂತ್ರೈರ್ಹುತ್ವಾಜ್ಯಮಾದರಾತ್ ॥೫೩॥

ವಸೋರ್ಧಾರಾಂ ಜಪನ್ನಂತೇ ಕುರ್ವನ್ನೇಕಾಹುತಿಂ ಬುಧಃ ।
ರುದ್ರೈಕಾದಶಿನೀ ಹೋಮಂ ರುದ್ರಾವೃತ್ಯಾ ಸಮಾಚರೇತ್ ॥೫೪॥

ಮಹಾರುದ್ರಾಂಗಹೋಮೋಽಯಂ ಸರ್ವಾಘೌಘವಿನಾಶನಃ ।
ಅತಿರುದ್ರೇ ತಥಾ ಕುರ್ಯುಃ ಶತಮೇಕಾದಶೋತ್ತರಂ ॥೫೫॥

ನಮಕೇನಾನುವಾಕೇನ ಹೋಮಂ ಕೃತ್ವಾ ವಿಚಕ್ಷಣಃ ।
ಚಮಕೇನಾನುವಾಕೇನ ಹೋಮಂ ಕುರ್ಯುಸ್ತತೋ ದ್ವಿಜಾಃ ॥೫೬॥

ಪುನಃ ಸಮಗ್ರನಮಕಂ ಜಪ್ತ್ವಾಂತೇ ವಹ್ನಿವಲ್ಲಭಾಂ ।
ಏಕಾಮೇವಾಹುತಿಂ ಕುರ್ಯಾತ್ಸಮಗ್ರನಮಕಂ ತತಃ ॥೫೭॥

---

ವಸೋರ್ಧಾರಾ ಹೋಮವನ್ನು ನಡೆಸಬೇಕು. ಹೀಗೆ ಹನ್ನೊಂದು ಬಾರಿ ರುದ್ರ ಹೋಮವನ್ನು ನಡೆಸಿದರೆ ಅದು 'ರುದ್ರೈಕಾದಶಿನೀ' ಎನ್ನಿಸಿಕೊಳ್ಳುವುದು. ಈ ರೀತಿ ಸ್ವಾಹಾಂತಗಳಾದ ನಮಕಮಂತ್ರಗಳ ಕೊನೆಯಲ್ಲಿರುವ ಮಂತ್ರಗಳಿಂದ ತುಪ್ಪವನ್ನು ಅಗ್ನಿಯಲ್ಲಿ ಭಕ್ತಿಯಿಂದ ಹೋಮಮಾಡಿ, ವಸೋರ್ಧಾರಾಮಂತ್ರ ವನ್ನು ಜಪಿಸುತ್ತಾ ಕೊನೆಯಲ್ಲಿ ಪೂರ್ಣಾಹುತಿಯನ್ನಿತ್ತು, ಅದನ್ನು ಯಜ್ಞೇಶ್ವರ ನಿಗೆ ಸಮರ್ಪಿಸಬೇಕು. ರುದ್ರೈಕಾದಶೀ ಹೋಮವೆಂದರೆ ರುದ್ರಮಂತ್ರವನ್ನು ಆವೃತ್ತಿಮಾಡುತ್ತಾ ನಡೆಸುವ ಹೋಮವೆಂದೇ ಅರಿಯಬೇಕು. ಇಂತಹ ರುದ್ರ ಹೋಮವನ್ನು ಯಾರು ಬೇಕಾದರೂ ನಡೆಸಬಹುದು. ಆದರೆ, ವಿಧಿಜ್ಞರಾದವರ ಮೂಲಕ ಇದನ್ನು ನಡೆಸುವುದು ಶ್ರೇಯಸ್ಕರ ॥೫೨-೫೩-೫೪॥

ಇದು ಸಕಲ ಪಾಪಗಳನ್ನೂ ನಾಶಮಾಡುವ ಮಹಾರುದ್ರಾಂಗಹೋಮವೆನಿಸುವುದು. ಹಾಗೆಯೇ ಅತಿರುದ್ರದಲ್ಲಿಯೂ ನೂರುಹನ್ನೊಂದು (೧೧೧) ಬಾರಿ ಹೋಮಗಳನ್ನು ಮಾಡಬೇಕು. ವಿಧಿಜ್ಞನಾದವನು ಮೊದಲು ನಮಕಮಂತ್ರ ಗಳಿಂದ ಹೋಮಮಾಡಿ ಅನಂತರ ಚಮಕಮಂತ್ರಗಳಿಂದಲೂ ಹೋಮಮಾಡ ಬೇಕು. ಓ ವಿಪ್ರರೆ, ಒಂದುಸಾರಿ ಸಂಪೂರ್ಣವಾದ ನಮಕಮಂತ್ರವನ್ನು ಜಪಿಸಿ ಕೊನೆಯಲ್ಲಿ ವಸೋರ್ಧಾರಾನುವಾಕದಿಂದ ಒಂದೇ ಆಹುತಿ ಕೊಡಬೇಕು. ಮತ್ತೆ

ಜಪಸ್ಯಾಂತೇ ವಹ್ನಿದಯಿತಾಮುಚ್ಚಾರ್ಯೈಕಾಹುತಿಂ ಚರೇತ್ ।
ಇತಿ ವಾರತ್ರಯಂ ಕುರ್ಯಾತ್ಪೂರ್ಣಾಹುತಿಮತಃ ಪರಂ ॥೫೮॥

ಅತಿರುದ್ರಾಂಗಹೋಮೋಽಯಂ ಸರ್ವಪ್ರತ್ಯೂಹನಾಶನಃ ।
ಏತಚ್ಚ ದ್ವಿಗುಣಂ ಪ್ರೋಕ್ತಂ ಮಹಾರುದ್ರಜಪೋಹವ್ಯೆ ॥೫೯॥

ಏತದ್ದಶಗುಣಂ ಕುರ್ವನ್ನಪಹೋಮಂ ದ್ವಿಜಾರ್ಚನಂ ।
ಕೋಟಿರುದ್ರಮಿತಿ ಪ್ರೋಕ್ತಂ ಶಿವಪ್ರೀತಿಕರಂ ಮುನೇ ॥೬೦॥

ಅಶ್ವಮೇಧಸಹಸ್ರಸ್ಯ ಫಲಮಾಪ್ನೋತಿ ಸಾಧಕಃ ।
ಪುತ್ರಪೌತ್ರಾನವಾಪ್ನೋತಿ ವಿದ್ಯಾಯುಃ ಶ್ರೀಸಮನ್ವಿತಃ ॥೬೧॥

ಅಣಿಮಾದಿಗುಣೈಶ್ವರ್ಯಂ ದಿವ್ಯಾನ್ಭೋಗಾಂಶ್ಚ ದುರ್ಲಭಾನ್ ।
ಆಸಾದ್ಯ ಶಿವಸಾಯುಜ್ಯಮಾಪ್ನೋತ್ಯಂತೇ ನ ಸಂಶಯಃ ॥೬೨॥

---

ಪುನಃ ನಮಕಮಂತ್ರಜಪವನ್ನಾರಂಭಿಸಬೇಕು. ಋಷಿದೇವತಾಛಂದಸ್ಸನ್ನು ಚ್ಚರಿಸುತ್ತಾ ರುದ್ರಮಂತ್ರಜಪವನ್ನು ಪ್ರಾರಂಭಿಸಬೇಕು. ॥೫೫-೫೬-೫೭॥

ಆ ರೀತಿ ಪೂರ್ಣವಾಗಿ ಜಪಮಾಡಿ ಕೊನೆಯಲ್ಲಿ ಸ್ವಾಹಾಕಾರವನ್ನು ಚ್ಚರಿಸುತ್ತಾ, ಪ್ರತಿಮಂತ್ರಕ್ಕೂ ಒಂದಾಹುತಿ ಕೊಡಬೇಕು. ಹೀಗೆ ಮೂರಾವರ್ತಿ ಹೋಮ ಮಾಡಿ ಅನಂತರ ಪೂರ್ಣಾಹುತಿ ಕೊಡಬಹುದು. ಇದು ಸಕಲ ಪಾಪಗಳನ್ನೂ ನಾಶ ಮಾಡುವ ಅತಿರುದ್ರಾಂಗಹೋಮವೆನಿಸುವುದು. ಇದರ ಎರಡರಷ್ಟು ಸಂಖ್ಯೆಯದು ಮಹಾರುದ್ರಜಪಹೋಮವೆಂದು ಹೇಳಲ್ಪಟ್ಟಿದೆ. ಇದಕ್ಕೆ ಹತ್ತುಬಾರಿ ಜಪ, ಹೋಮ ಮತ್ತು ಬ್ರಾಹ್ಮಣ ಪೂಜಾದಿಗಳನ್ನು ಮಾಡಿದರೆ ಶಿವನಿಗೆ ಪ್ರೀತಿಯನ್ನುಂಟುಮಾಡುವ ಕೋಟಿರುದ್ರವೆನಿಸುವುದು. ॥೫೮-೫೯-೬೦॥

ಹೀಗೆ ಮಾಡುವ ಕೋಟಿರುದ್ರಹೋಮದಿಂದ ಸಾಧಕನು ಸಾವಿರ ಅಶ್ವಮೇಧಯಾಗಗಳ ಫಲವನ್ನು ಪಡೆಯುತ್ತಾನೆ. ಇದರ ಫಲವಾಗಿ ಪುತ್ರಪೌತ್ರರನ್ನೂ ಹೊಂದಿ ವಿದ್ಯೆ, ಆಯುಸ್ಸು, ಐಶ್ವರ್ಯಗಳಿಂದ ಯುಕ್ತನಾಗುತ್ತಾನೆ. ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಹೊಂದಲಸಾಧ್ಯವಾದ ದಿವ್ಯಭೋಗಗಳನ್ನೂ ಪಡೆದು ಕೊನೆಗೆ ಶಿವಸಾಯುಜ್ಯವನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ. ॥೬೧-೬೨॥

ಯಾವದ್ವಿಶ್ವಂಭರಾ ಶೈಲದ್ವೀಪಕಾನನಸಂಯುತಾ ।
ಅತಿರುದ್ರಕೃತೋ ತಾವತ್ಕಾಲಂ ಭೂಮಂಡಲೇ ದ್ವಿಜಾಃ ||೬೩||

ವಿದ್ಯಾಯುಃ ಶ್ರೀಸಮಾಯುಕ್ತಾ ಸಂತತಿರ್ವಸತಿ ಧ್ರುವಂ ।
ಅತಿರುದ್ರಸಮೋ ಧರ್ಮೋ ನ ಭೂತೋ ನ ಭವಿಷ್ಯತಿ ||೬೪||

ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್ ।
ಏತದ್ವಃ ಶತರುದ್ರೀಯಮಾಹಾತ್ಮ್ಯಂ ಪಾಪನಾಶನಂ ||೬೫||

ಉದೀರಿತಾ ಮಯಾ ವಿಪ್ರಾಃ ಕಿಂ ಪುನಃ ಶ್ರೋತುಮಿಚ್ಛಥ ||೬೬||

ಶ್ರೀರುದ್ರಪ್ರಜಪಾದರೋಽಭಿನಿವಸೇತ್ತತ್ಕ್ಷೇತ್ರವರ್ಯಂ ಮಮ
ಕ್ರೋಶಂ ತತ್ರ ಮೃತೋಽಪಿ ಕೀಟಕವರೋ ಗ್ರಾಮೋಽಪಿ ನೈವಾದರಃ ।
ಭೂಯಾದೇಕಶ್ರುತೀರಿತೋಽಯಮಗಜೇ ಪುಣ್ಯೋ ವಿಧಿಃ ಕೇವಲಃ ||೬೭||

---

ಓ ಬ್ರಾಹ್ಮಣರೇ, ಈ ಭೂಮಂಡಲವು ಬೆಟ್ಟ, ದ್ವೀಪ, ಕಾಡುಗಳಿಂದ ಯುಕ್ತವಾಗಿರುವವರೆಗೂ ಈ ಭೂಮಿಯಲ್ಲಿ ಅತಿರುದ್ರಯಾಗಮಾಡಿದವನ ಸಂತತಿಯು ವಿದ್ಯೆ, ಆಯುಸ್ಸು, ಐಶ್ವರ್ಯಗಳಿಂದ ಕೂಡಿ ಅತಿಯಾದ ಆನಂದದಿಂದ ಜೀವಿಸುವುದು. ಈ ಅತಿರುದ್ರಕ್ಕೆ ಸಮಾನವಾದ ಧರ್ಮವು ಲೋಕದಲ್ಲಿ ಬೇರೊಂದಿಲ್ಲ. ಹಿಂದೆ ಇರಲಿಲ್ಲ. ಮುಂದೆ ಇದಕ್ಕೆ ಸಮವಾದ ಧರ್ಮವೂ ಉದ್ಭವಿಸಲಾರದು. ||೬೩-೬೪||

ಈ ಅತಿರುದ್ರದಲ್ಲಿ ಏನಿರುವುದೋ ಅದೇ ಎಲ್ಲ ಕಡೆಯಲ್ಲಿಯೂ ಕಂಡುಬರುವುದು. ಇದರಲ್ಲಿಲ್ಲದುದು ಜಗತ್ತಿನಲ್ಲಿ ಬೇರೆಲ್ಲಿಯೂ ಯಾವ ಗ್ರಂಥದಲ್ಲಿಯೂ ಇಲ್ಲ. ಅಯ್ಯ ವಿಪ್ರರೆ! ಪಾಪನಾಶಕವಾದ ಈ ಶತರುದ್ರೀಯ ಮಹಿಮೆಯನ್ನು ನಾನು ನಿಮಗೆ ವಿಸ್ತಾರವಾಗಿ ಹೇಳಿರುವೆನು. ಓ ವಿಪ್ರರೆ, ಮತ್ತೇನು ಕೇಳಬಯಸುತ್ತೀರಿ? ಎಂದು ಕುಮಾರಸ್ವಾಮಿಯು ಮುನಿಗಳಿಗೆ ಹೇಳಿದನು. ||೬೫-೬೬||

ಎಲೌ ಪಾರ್ವತಿಯೇ, ಭಸ್ಮರುದ್ರಾಕ್ಷಧಾರಣೆಮಾಡಿ, ಶ್ರೀರುದ್ರಮಂತ್ರಜಪದಲ್ಲಿ ಆದರವುಳ್ಳ ಬ್ರಾಹ್ಮಣಶ್ರೇಷ್ಠನು ಯಾವ ಹಳ್ಳಿ ಅಥವಾ ಪಟ್ಟಣದಲ್ಲಿ ವಾಸಮಾಡುವನೋ ಅದೇ ನನ್ನ ಉತ್ತಮ ಕ್ಷೇತ್ರವೆಂದು ತಿಳಿ; ಆ ಸುತ್ತ ಒಂದು ಹರಿದಾರಿ ಜಾಗದಲ್ಲಿ ಸಣ್ಣ ಕ್ರಿಮಿಕೀಟವೇ ಮೃತವಾದರೂ ' ಅದು ಶ್ರೇಷ್ಠವಾದ ಜನ್ಮವನ್ನು

ಕಿಂ ಜಪ್ತೇನಾಮೃತತ್ವಂ ಭವತಿ ಭಗವತೀಹೇತ್ಯುಪಕ್ರಮ್ಯ ವೇದೇ
ಪೃಷ್ಟೋ ವರ್ಣಿಗಣೈರ್ಗಣೇಂದ್ರಪದದಂ ಪ್ರಾಹಾರುಣೇ ಮೇ ಪರಂ।
ಪುಣ್ಯಂ ಮೇ ಶತರುದ್ರಜಾಪನವಿಧಿಶ್ಚೋದ್ಧೂಳಿತಾಂಗೋ ಮುದಾ
ರುದ್ರಾಕ್ಷಾಭರಣೋ ತ್ರಿಪುಂಡ್ರಲಸಿತೋ ಫಾಲಪ್ರಭಾಮಂಡಲಃ ॥೬೮॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ರುದ್ರಹೋಮವಿಧಿನಿರೂಪಣಂ
ನಾಮೈಕತ್ರಿಂಶೋಽಧ್ಯಾಯಃ

---

ಪಡೆಯುವುದು, ಬೇರೆ ಮತ್ತಾವ ಗ್ರಾಮದಲ್ಲಿ ಮೃತವಾದರೂ ಅದಕ್ಕೆ ಅಂತಹ ದಿವ್ಯಜನ್ಮವು ಲಭಿಸಲಾರದು. ದೇವಿ, ಒಟ್ಟಿನಲ್ಲಿ ಅಂತಹ ಸಂಭವವೊದಗಬೇಕಾದರೆ ಕೇವಲ ಪುಣ್ಯಕರವಾದ ವಿಧಿಯೊಂದೇ ಕಾರಣವೆಂದು ತಿಳಿ. ॥೬೭॥

ಎಲೌ ಪೂಜ್ಯಳೇ, ವೇದದಲ್ಲಿರುವ ಯಾವ ಮಂತ್ರವನ್ನು ಜಪಮಾಡುವುದರಿಂದ ಅಮರತ್ವವುಂಟಾಗುವುದು; ಎಂದು ಬ್ರಹ್ಮಚಾರಿಸಮೂಹಗಳೊಡನೆ ಪಾರ್ವತೀದೇವಿಯನ್ನು ನಾನು ಪ್ರಶ್ನೆಮಾಡಲು, ಆಗ ಆ ದೇವಿಯು ಗಣಾಧಿಪ ಪದವಿಯನ್ನುಂಟುಮಾಡುವ ಶ್ರೇಷ್ಠವಾದ ಮಾರ್ಗವನ್ನು ಹೀಗೆ ತಿಳಿಸಿದಳು. ಭಸ್ಮೋದ್ಧೂಳಿತಗಾತ್ರನಾಗಿ ರುದ್ರಾಕ್ಷಗಳನ್ನು ಧರಿಸಿ, ತ್ರಿಪುಂಡ್ರಕಾಂತಿಗಳಿಂದ ಶೋಭಿಸುತ್ತಿರುವ ಹಣೆಯುಳ್ಳವನಾಗಿ ಶತರುದ್ರಮಂತ್ರಜಪಮಾಡುವ ವಿಧಿಯೇ ಮುಕ್ತಿಪ್ರದವಾದುದೆಂದು ನನಗೆ ತೋರುತ್ತದೆಂದು ದೇವಿಯು (ನನಗೆ) ಕುಮಾರಸ್ವಾಮಿಗೆ ಹೇಳಿದಳು. ಎಂದು ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದನು. ॥೬೮॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ರುದ್ರಹೋಮದ ವಿಧಿವರ್ಣನೆಯೆಂಬ
ಮೂವತ್ತೊಂದನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ದ್ವಾತ್ರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಅಥಾನ್ಯಾಂ ವಿಧಿಮಾಖ್ಯಾಸ್ಯೇ ರುದ್ರಮಂತ್ರಸ್ಯ ಸತ್ತಮ ।
ಶೃಣುಷ್ವ ಸಾವಧಾನೇನ ಚೇತಸಾ ಶಿವಭಾಷಿತಂ ॥೧॥

॥ ಈಶ್ವರ ಉವಾಚ ॥

ಜಪಂ ದಿವಾಸ್ವೇವ ಮುದೇವ ಕುರ್ಯಾ
ಚ್ಛ್ರೀರುದ್ರಮಂತ್ರಸ್ಯ ಸದೈವ ಶಂಕರಿ ।
ರಾತ್ರೌ ನ ಜಪ್ಯೋ ಮನುರೇಷ ನಿಶ್ಚಿತಂ
ಶಿವಾಭಿಷೇಕೇ ತು ಸದೈವ ಯೋಜ್ಯಃ ॥೨॥

---

## ಮೂವತ್ತೆರಡನೆಯ ಅಧ್ಯಾಯ

ಸಾಧುವರ್ಯನೆ! ಶ್ರೀರುದ್ರಮಂತ್ರಜಪದ ಬೇರೊಂದು ವಿಧಿಯನ್ನು ಹೇಳುವೆನು; ಕೇಳು. ಸಾವಧಾನಮನಸ್ಸಿನಿಂದ ನಾನು ಹೇಳಲಿರುವ ಶಿವನ ವಚನವನ್ನು ಲಾಲಿಸು. ಎಂದು ಸ್ಕಂದನು ಜೈಗೀಷವ್ಯನಿಗೆ ಶಿವೋಕ್ತಿಯನ್ನೇ ಅನುವಾದ ಮಾಡುತ್ತಾ ಹೀಗೆಂದನು. ॥೧॥

ಎಲೌ ಪಾರ್ವತಿಯೇ ಕೇಳು, ಯಾವಾಗಲೂ ಶಿವರುದ್ರಮಂತ್ರಜಪವನ್ನು ಹಗಲುಹೊತ್ತಿನಲ್ಲಿಯೇ ಸಂತೋಷದಿಂದ ಮಾಡಬೇಕು. ಈ ರುದ್ರಮಂತ್ರವನ್ನು ರಾತ್ರಿವೇಳೆ ನಿಶ್ಚಯವಾಗಿಯೂ ಜಪಿಸಬಾರದು. ಜಪಮಾಡುವುದಾದರೆ ಶಿವಲಿಂಗಾಭಿಷೇಕಕಾಲದಲ್ಲಿ ಮಾತ್ರ ಕಾಲನಿಯಮವಿಲ್ಲದೇ ಯಾವಾಗಬೇಕಾದರೂ ಮಂತ್ರ ಪಾರಾಯಣಮಾಡಬಹುದು. ॥೨॥

ಕಾಲಾಷ್ಟಮ್ಯಾಂ ಸೋಮವಾರೇ ಮಹೇಶಿ
ಭೂತಾಯಾಂ ವೈ ಗ್ರಹಣೇ ಪರ್ವಕಾಲೇ ।
ನಿತ್ಯಾದಭೀಷ್ಟಂ ಫಲಮಾಪ್ಯ ಮೋದತೇ
ಶ್ರೀರುದ್ರಸಂಜಪ್ಯ ಯ ಏಷ ಶಾಂಭವಃ ॥೩॥

ಮೃದೋರ್ಧ್ವಪುಂಡ್ರಂ ವಿರಚಯ್ಯ ಫಾಲೇ
ಜಪ್ಯೋ ನ ಚಾಯಂ ಮನುರೇಷ ನಿಶ್ಚಯಂ ।
ಜಪ್ತ್ವಾ ಸ ಚಾಂತೇ ನರಕಂ ಪ್ರಯಾತಿ
ಭಸ್ಮಾಕ್ಷಧೃಗ್ಯೋಗ್ಯತಮೋ ಹಿ ಜಪ್ತಾ ॥೪॥

ಸಾಧಿಷ್ಠೇತ ಭವೇತ ಭಸ್ಮಜಮಹಂ ನಿಷ್ಠೋ ಭವೇಚ್ಛಾಂಕರಿ
ಜ್ಯೇಷ್ಠಃ ಶ್ರೀಶತರುದ್ರನಿಷ್ಠಸುಹೃದಾ ಪೂತೋ ವರಿಷ್ಠೋ ನರಃ ।
ಅನ್ಯೇ ಕುಷ್ಠಕಚಿಷ್ಟದುಷ್ಟಜನಿತಾ ಶ್ರೀರುದ್ರಜಾಪ್ಯೋಽಂಬಿಕೇ
ಪ್ರೇತಾಸ್ತೇ ದುರದೃಷ್ಟತಃ ಪ್ರತಿಭವೇ ವಿಪ್ರಾಶನಾಃ ಸಂಕರಾಃ ॥೫॥

---

ಮಹೇಶ್ವರಿ, ಕೃಷ್ಣಾಷ್ಟಮಿ, ಸೋಮವಾರ, ಚತುರ್ದಶೀ ತಿಥಿಗಳು, ಗ್ರಹಣ, ಮತ್ತು ಪರ್ವಕಾಲಗಳಲ್ಲಿ ಶ್ರೀರುದ್ರಮಂತ್ರಜಪಮಾಡುವ ಶೈವನು ನಿತ್ಯಕ್ಕಿಂತಲೂ ಅಧಿಕವಾದ ಅಭೀಷ್ಟಫಲಗಳನ್ನು ಪಡೆದು ಸಂತೋಷಪಡುತ್ತಾನೆ. ॥೩॥

ಗೋಪೀಚಂದನ, ನಾಮ ಮುಂತಾದ ಮೃತ್ತಿಕೆಗಳಿಂದ ಹಣೆಯಲ್ಲಿ ಊರ್ಧ್ವ ಪುಂಡ್ರವನ್ನು ಧರಿಸಿ ಈ ಮಂತ್ರವನ್ನು ನಿಶ್ಚಯವಾಗಿಯೂ ಜಪಮಾಡಬಾರದು. ಒಂದುವೇಳೆ ಹಾಗೆ ಜಪಮಾಡಿದರೆ ಕೊನೆಯಲ್ಲಿ ಅವನು ಪುನರಾವೃತ್ತಿರಹಿತವಾದ ನರಕವನ್ನು ಹೊಂದುವನು. ಈ ರುದ್ರಮಂತ್ರವನ್ನು ಜಪಮಾಡಲು ಭಸ್ಮರುದ್ರಾಕ್ಷ ಧಾರಿಯಾದವನೇ ನಿಜವಾದ ಅಧಿಕಾರಿ ಎಂದು ತಿಳಿ. ॥೪॥

ಎಲೌ ಪಾರ್ವತಿಯೇ, ಈ ಭಸ್ಮಮಹಿಮೆಯನ್ನು ನಿಷ್ಠನಾಗಿ ಸಾಧಿಸುತ್ತಾ ಶ್ರೀಶತರುದ್ರಮಂತ್ರಜಪದಲ್ಲಿ ನಿರತವಾದ ಮನಸ್ಸುಳ್ಳ ಮಾನವನು ಎಲ್ಲರಲ್ಲಿಯೂ ದೊಡ್ಡವನೂ, ಪವಿತ್ರನೂ, ಶ್ರೇಷ್ಠನೂ ಎನಿಸುವನು. ಈ ರೀತಿ ಭಸ್ಮಮಹಿಮೆಯು ನ್ನರಿತು ನಡೆಯದೇ ಮೃತ್ಪುಂಡ್ರಧಾರಿಗಳಾದ ಇತರರು ರುದ್ರಜಪಮಾಡುವುದಾದರೆ ಶ್ವೇತ, ತುರಿ, ಮುಂತಾದ ದುಷ್ಟರೋಗಪೀಡಿತರಾಗಿ ದೌರ್ಭಾಗ್ಯದಿಂದ ಪ್ರೇತತ್ವ

ಮದ್ರುದ್ರಜಾಪ್ಯಂ ಪರಿಹಾಯ ಮರ್ತ್ಯಾಃ
ಮುಕ್ತ್ಯೈ ಕಥಂ ತೇ ಪ್ರಭವಂತಿ ಮೂಢಾಃ ।
ರತ್ನಂ ಸ್ವಹಸ್ತಸ್ಥಮುಪಾಸ್ಯ ಹರ್ಷತೋ
ಗೃಹ್ಣಾತಿ ಕಾಚೇತ್ಯಯಥಾ ಕಥೇಯಂ ॥೬॥

ಯತ್ತು ಋಜುವಚಸಾ ಸ್ಮಿತಪ್ರಜಪ-
ನ್ಮುಕ್ತಿಮುಪಾಶ್ನುತೇಽವರೋಽಪಿ ।
ಯದಿ ಸಂತ್ಯಜ್ಯ ಸುರುದ್ರಜಾಪ್ಯಂ
ಗಿರಿಜೇ ಪೂಯಪಪಾತಕೀ ಭವೇತ್ ॥೭॥

ನೈತತ್ಪ್ರಜಪಸ್ತ್ವಧಿಕಮೇತದೇವ
ಶ್ರೀರುದ್ರಮಂತ್ರಂ ಚ ತದಾನ್ಯಶಾಖಿನಃ ।
ಸ್ವಕಂ ಚ ರುದ್ರಂ ಪ್ರಜಪಂತಿ ಬೋಧದಂ
ಪೂರ್ವಂ ತತೋ ರುದ್ರಪರೋ ಭವೇತ ॥೮॥

---

ವನ್ನು ಪಡೆದು ಪ್ರತಿಯೊಂದು ಜನ್ಮದಲ್ಲಿಯೂ ವಿಪ್ರಹಿಂಸಕರಾದ ಸಂಕರಜಾತಿಯವರಾಗಿ ಜನಿಸುವರು. ॥೫॥

ಅಂಬಿಕೆ, ನನ್ನ ಈ ರುದ್ರಮಂತ್ರವನ್ನು ಜಪಮಾಡದೇ ಮೂಢರಾದ ಮಾನವರು ಹೇಗೆ ತಾನೆ ಮುಕ್ತಿಪಡೆಯಬಲ್ಲರು? ತನ್ನ ಕೈಯಲ್ಲಿ ರತ್ನವಿದ್ದರೂ ಅದನ್ನು ಬಿಟ್ಟು, ಗಾಜನ್ನು ನೋಡಿ ಅದರಲ್ಲಿ ಭ್ರಾಂತಿ ಹೊಂದುವಂತೆ ಅಜ್ಞಾನಿಗಳಾದವರು ಪ್ರತ್ಯಕ್ಷವಾಗಿ ಮುಕ್ತಿಪ್ರದವಾದ ರುದ್ರಮಂತ್ರಜಪವನ್ನು ಬಿಟ್ಟು ಬೇರೆಯ ಮಂತ್ರಗಳಲ್ಲಿ ಪ್ರವರ್ತಿಸುವರು. ॥೬॥

ಒಳ್ಳೆಯ ವಚನಗಳಿಂದ ಮಂದಹಾಸಯುಕ್ತನಾಗಿ ಶ್ರೀರುದ್ರಮಂತ್ರವನ್ನು ಜಪಮಾಡುವವನು ನೀಚನಾದರೂ ಮುಕ್ತಿಹೊಂದುತ್ತಾನೆ. ಎಲೌ ಪಾರ್ವತಿಯೇ, ಈ ರುದ್ರಜಪವನ್ನು ಬಿಡುವವನು ಎಷ್ಟೇ ಉತ್ತಮನಾದರೂ ನರಕದಲ್ಲಿ ಕೀವುಗಳನ್ನು ಕುಡಿಯುವಂತಹ ಪಾಪಮಾಡಿದವನಿಗೆ ಸದೃಶನಾಗುವನು. ॥೭॥

ಶ್ರೀರುದ್ರವು ಯಜುಸ್ಸಂಹಿತೆಯಲ್ಲಿ ಉಕ್ತವಾಗಿದೆ. ಆದ್ದರಿಂದ ಇದನ್ನು ಶಾಖಾಂತರದವರು ಅಂದರೆ ಋಗ್ವೇದ ಮತ್ತು ಸಾಮವೇದೀಯರು ಓದುವುದು ಹೇಗೆ? ಎಂಬ ಸಂಶಯವು ಜನರಿಗೆ ಬರಬಹುದು. ಹಾಗೆ ಸಂಶಯಪಡಬೇಕಾಗಿಲ್ಲ.

ನಮಕಂ ಚಮಕೈಶ್ಚ ವರ್ಜಿತಂ
ಪ್ರಜಪನ್ಸೈ ಸುಮತಿಂ ನಮೋಽನುವಾಕಂ ।
ಯತಿಭಿಃ ಸಿತಭಸ್ಮಧಾರಿಭಿಃ
ಶತರುದ್ರಪ್ರವಣೋಽಥ ಮುಕ್ತಿಭಾಕ್ಸ್ಯಾತ್ ॥೯॥

ವಿಷಮಂ ಪ್ರಜಪೇತ ರುದ್ರಮಂತ್ರಂ
ವಿಷಶೇಷ ಪ್ರವಿಶೋಷ ಭಸ್ಮಭೂಷಃ ।
ವಿಷಮಾಕ್ಷಂ ತ್ವಭಿವೀಕ್ಷ್ಯ ಧುಕ್ಷಿತಾಘೋ
ಪ್ರಭವೇದೇವ ಸ ಮೋಕ್ಷಣೇಽಧಿಕಾರೀ ॥೧೦॥

---

ಏಕೆಂದರೆ, ಪ್ರತಿ ವೇದದಲ್ಲಿಯೂ ರುದ್ರದೇವತಾಕವಾದ ಅಥವಾ ರುದ್ರಸ್ತುತಿ ರೂಪವಾದ ಸೂಕ್ತಮಂತ್ರಗಳು ಇದ್ದೇಇರುತ್ತವೆ. ಆಯಾ ಶಾಖಾನುಯಾಯಿಗಳು ಮೊದಲು ಆ ಶಾಖಾಮಂತ್ರಗಳನ್ನು ಜಪಮಾಡಿ ಅನಂತರ ಯಜುರ್ವೇದಾಂತರ್ಗತ ವಾಗಿರುವ ಈ ರುದ್ರಾಧ್ಯಾಯವನ್ನು ಪಾರಾಯಣಮಾಡಬಹುದು. ಪ್ರಪಂಚದಲ್ಲಿ ಈ ರುದ್ರಾಧ್ಯಾಯಕ್ಕಿಂತ ಹೆಚ್ಚಿನದಾದ ಬೇರೊಂದು ಮಂತ್ರವೇ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ॥೮॥

ಚಮಕಮಂತ್ರಗಳಿಂದ ಬಿಡಲ್ಪಟ್ಟ ಕೇವಲ ನಮಕಮಂತ್ರವನ್ನು ಜಪ ಮಾಡುವ ಮನುಷ್ಯನು ಶುಭ್ರಭಸ್ಮಧಾರಿಗಳಾದ ಯತಿಗಳೊಡನೆ ಸೇರಿ ಶತರುದ್ರ ಮಂತ್ರಜಪನಿರತನಾದವನಾಗಿ ಮುಕ್ತಿಭಾಗಿಯಾಗುವನು. ಅಂದರೆ ಕೇವಲ ರುದ್ರಾಧ್ಯಾಯಜಾಪಕನಿಗೆ ಪರಮೇಶ್ವರನ ಸನ್ನಿಧಿರೂಪವಾದ ಮುಕ್ತಿಯೂ ದೊರೆಯುವುದು. ಇದರಲ್ಲಿ ಸಂಶಯವಿಲ್ಲ. ॥೯॥

ಕಾಮಕ್ರೋಧಾದಿರೂಪವಾದ ಮತ್ತು ಹಾಲಾಹಲವೆನಿಸಿದ ವಿಷವು ಪೂರ್ಣವಾಗಿ ನಾಶವಾಗುವಂತಹ ಪವಿತ್ರ ಭಸ್ಮವನ್ನು ಧರಿಸಿ, ವಿಷಮವಾದ ಸಂಖ್ಯೆಯಲ್ಲಿ ಅಂದರೆ ಹನ್ನೊಂದುಬಾರಿ ರುದ್ರಮಂತ್ರವನ್ನು ಜಪಮಾಡುತ್ತಾ ಮುಕ್ಕಣ್ಣನಾದ ಮಹೇಶ್ವರನನ್ನು ದರ್ಶನಮಾಡುತ್ತಾ, ಸಕಲ ಪಾಪಗಳನ್ನು ಕಳೆದು ಕೊಂಡು ಈಶ್ವರಭಕ್ತನು ಮೋಕ್ಷಪ್ರಾಪ್ತಿಗೆ ಅಧಿಕಾರಿಯಾಗುವನು. ಅಂದರೆ ಯಾರು ಏಕಾದಶಾವೃತ್ತಿಯಿಂದ ಶ್ರೀ ರುದ್ರಮಂತ್ರಗಳನ್ನು ಜಪಿಸುವರೋ ಅಂತಹವರಿಗೆ ಶಿವಕೃಪೆಯು ಒದಗಿ ತನ್ಮೂಲಕ ಮುಕ್ತಿಯೂ ಪ್ರಾಪ್ತವಾಗುವುದು. ॥೧೦॥

ಶ್ರೀಪಂಚಾಕ್ಷರಮಧ್ಯಭಾಗವಿಲಸಚ್ಛ್ರೀರುದ್ರಸೂಕ್ತಾದರೋ
ದಾರಾನ್ಮುಕ್ತಿಮುಪೇತ್ಯ ಶಂಕರಪದಧ್ಯಾನಾನುಧಾರಾದರಃ ।
ರುಧ್ರಾಕ್ಷಾತುಲಭಸ್ಮಫಾಲಕಲಿತಾ ಮುದ್ರಾದಿವಿದ್ರಾವಿತ
ತಾಪಧ್ವಾಂತನಿವಾರಣಾರ್ಕಕಿರಣೋ ಭೂಯಾನ್ಮುದೇ ಮೇ ಶಿವೇ ॥೧೧॥

ತರಣಿಸ್ಥಿತಕಾರುಣಂ ಮಹೇಶ
ಚರಣಂ ಯಃ ಶರಣಂ ಹೃದಾಪ್ರಪದ್ಯ ।
ಪ್ರಣಿಪತ್ಯ ಚ ರುದ್ರಮಂತ್ರಜಾಪಿನಾಂ
ಮರಣಾಂತೋ ಭವಿತಾಽವಿಮುಕ್ತಕೇ ॥೧೨॥

ರುದ್ರೈಕಾದಶಿನೀಂ ಜಪಂತಿ ಚ ಭವೇ ಭಸ್ಮತ್ರಿಪುಂಡ್ರಾಂಕಿತೋ
ರುದ್ರಾಕ್ಷಾಭರಣಾಃ ಶಿವೈಕಶರಣಾಃ ಪೂತಾ ಮಹಾಪಾತಕೈಃ ।

---

ಶಿವಪಂಚಾಕ್ಷರಮಂತ್ರವೆಂಬ ಮಧ್ಯಭಾಗದಿಂದ ಶೋಭಿಸುತ್ತಿರುವ ರುದ್ರ ಸೂಕ್ತಮಂತ್ರದಲ್ಲಿ ಆದರವುಳ್ಳವನು ಶಂಕರನ ಪಾದಧ್ಯಾನದಲ್ಲಿ ಆದರವುಳ್ಳವನಾಗಿ ಸುಲಭವಾಗಿ ಮೋಕ್ಷವನ್ನು ಹೊಂದುವನು. ಅಲ್ಲದೆ ಅವನ ರುದ್ರಾಕ್ಷಿ, ಅಸದೃಶವಾದ ಭಸ್ಮ ಇವುಗಳಿಂದ ಅಲಂಕೃತನಾಗಿ ಈ ಭಸ್ಮರುದ್ರಾಕ್ಷಾದಿ ಮುದ್ರೆಗಳಿಂದ ಕೂಡಿ ದ್ದಾದರೆ, ಅವನ ಪಾಪವೆಂಬ ಅಂಧಕಾರವನ್ನು ಓಡಿಸುವುದರಲ್ಲಿ ನಾನು ಸೂರ್ಯನ ಕಿರಣಗಳಂತೆ ಆಚರಿಸುವೆನು. ಅಂತಹ ಭಕ್ತನೇ ಯಾವಾಗಲೂ ನನಗೆ ಸಂತೋಷ ಪ್ರದನಾಗುವನು. ಅಂತಹವನನ್ನು ನಾನು ಯಾವಾಗಲೂ ಪ್ರೀತಿಸುವೆನು. ॥೧೧॥

ಸೂರ್ಯಮಂಡಲದಲ್ಲಿ ನೆಲಸಿ, ಸಕಲ ಜಗತ್ಸೃಷ್ಟಿ ಸ್ಥಿತಿಸಂಹಾರಾದಿಗಳಿಗೆ ಮೂಲಕಾರಣನಾಗಿರುವ ಮಹೇಶ್ವರನ ಪಾದವನ್ನು ಯಾರು ತಮ್ಮ ಮನಃಪೂರ್ವಕ ವಾಗಿ ಧ್ಯಾನಿಸುತ್ತಾ ಶರಣುಹೊಂದಿ ನಮಸ್ಕರಿಸಿ ಶ್ರೀರುದ್ರಮಂತ್ರಜಪಮಾಡುವರೋ ಅಂತಹವರಿಗೆ ಸದ್ಯೋಮುಕ್ತಿಪ್ರದವಾದ ಅವಿಮುಕ್ತಕ್ಷೇತ್ರದಲ್ಲಿ ಮರಣವುಂಟಾಗು ವುದು. ಆದರಿಂದಲೇ ಅವರು ಅನಿವಾರ್ಯವಾಗಿ ಮುಕ್ತಿಸುಖವನ್ನೂ ಅನುಭವಿಸು ವರು. ॥೧೨॥

ಈ ಭೂಮಂಡಲದಲ್ಲಿ ಭಸ್ಮತ್ರಿಪುಂಡ್ರಧಾರಣೆಮಾಡಿಕೊಂಡು ರುದ್ರಾಕ್ಷ ಮಾಲಾಲಂಕೃತರಾಗಿ ಶಿವನಲ್ಲೇ ನೆಟ್ಟಮನಸ್ಸಿನಿಂದ ರುದ್ರೈಕಾದಶಿನಿಯನ್ನು ಶ್ರದ್ಧೆ ಯಿಂದ ಜಪಮಾಡುವವರು ಪಂಚ ಮಹಾಪಾಪಗಳಿಂದಲೂ ಸಹ ಬಿಡುಗಡೆಹೊಂದಿ

ತೇನೈವೋತ್ತಮದಿವ್ಯಲಿಂಗಮಗಜೇ ಸಂಸಿಚ್ಯ ನೀರೈರ್ವರೈಃ
ಸರ್ವೋರ್ವೀವರದಾನಕೋಟಿಜಫಲಂ ಲಬ್ಧ್ವಾ ಸ ಮುಕ್ತೋ ಭವೇತ್ ॥೧೩॥

ವಿಮುಕ್ತಪಾಪೋಽಪ್ಯವಿಮುಕ್ತಮಾಶ್ರಯೇ
ಚ್ಛ್ರೀರುದ್ರಸೂಕ್ತಂ ಪ್ರಜಪನ್ನಘಘ್ನಂ ।
ಯುಕ್ತೋ ಹಿ ಭಕ್ತ್ಯೈವ ಮಹೇಶಪಾದ
ಸಕ್ತ್ಯೈವ ಭಸ್ಮಾಕ್ಷಧರೋ ನರೋಽಪಿ ॥೧೪॥

ಭಸ್ಮಚ್ಛನ್ನೋ ಭವಘ್ನಂ ಪ್ರಜಪತಿ ಯತಿರಾಡ್ರುದ್ರಮಂತ್ರಂ ಸತಾರಂ
ಪಾರಂ ತದ್ಭವಸಾಗರೋಡುಪಮಿವ ಪ್ರಾಪ್ಸ್ಯೇತ ಮುಕ್ತಿಂ ಸ್ಥಿರಾಂ ।
ದಿವ್ಯಂ ಫಾಲತಲೇ ತ್ರಿಪುಂಡ್ರಮಗಜೇ ಬಿಭ್ರತ್ಸರುದ್ರಾಕ್ಷಭಾ
ಕ್ಸಂತ್ಯಜ್ಯಾನ್ಯಮೃದೋರ್ಧ್ವಪುಂಡ್ರಮಖಿಲಂ ವಿದ್ಯಾನಿಧಿಂ ಪ್ರಾಪ್ನುಯಾತ್
॥೧೫॥

---

ಪವಿತ್ರರೆನಿಸುವರು. ಅಂತಹವರು ಎಲೌ ಪಾರ್ವತಿಯೇ, ದಿವ್ಯವಾದ ನನ್ನ ಶಿವಲಿಂಗಕ್ಕೆ ಶ್ರೇಷ್ಠವಾದ ಜಲಧಾರೆಯಿಂದ ಅಭಿಷೇಕವನ್ನು ನಡೆಸಿದರೆ ಆವರಿಗೆ ಸಕಲಭೂಮಂಡಲವನ್ನೂ ದಾನಮಾಡಿದುದರಿಂದ ಬರುವ ಫಲಕ್ಕಿಂತಲೂ ಕೋಟಿಪಾಲು ಹೆಚ್ಚಿನ ಫಲವು ಲಭಿಸಿ, ಶಿವಾನುಗ್ರಹವನ್ನು ಪಡೆದು ಕೂಡಲೇ ಮುಕ್ತರಾಗುವರು. ಶಿವಲಿಂಗಕ್ಕೆ ರುದ್ರಾಭಿಷೇಕಮಾಡುವುದರಿಂದ ಅಂತಹ ಫಲವು ಲಭಿಸುವುದು. ॥೧೩॥

ಹೀಗೆ ರುದ್ರಜಪದಿಂದ ಸಮಸ್ತ ಪಾಪಗಳನ್ನು ಕಳೆದುಕೊಂಡವನು ಪಾಪನಾಶಕವಾದ ಶ್ರೀರುದ್ರಸೂಕ್ತವನ್ನು ಜಪಮಾಡುತ್ತಾ ಮುಕ್ತಿಪ್ರಾಪ್ತಿಗಾಗಿ ಅವಿಮುಕ್ತ ಕ್ಷೇತ್ರವನ್ನಾಶ್ರಯಿಸಬೇಕು. ಅಲ್ಲಿ ಭಸ್ಮರುದ್ರಾಕ್ಷಧಾರಿಯಾಗಿ ದೇವದೇವನೆನಿಸಿಧ ಮಹೇಶ್ವರನ ಭಕ್ತಿಯಿಂದ ಯುಕ್ತನಾಗಿದ್ದರೆ, ಅಂತಹವನು ಪರಶಿವನ ಪಾದದಲ್ಲಿ ಲೀನನಾಗುವನು. ಅಂದರೆ ಶಿವಸಾಯುಜ್ಯರೂಪವಾದ ಮೋಕ್ಷವನ್ನು ಪಡೆಯುವನು. ॥೧೪॥

ವಿಭೂತಿಲೇಪಿತನಾಗಿ ಸಂಸಾರಬಂಧನಾಶರೂಪವಾದ ಈ ರುದ್ರಮಂತ್ರವನ್ನು ಪ್ರಣವ ಮಂತ್ರಸಹಿತವಾಗಿ ಜಪಮಾಡುವ ಯತಿಪುಂಗವನು ಸಂಸಾರಸಾಗರವನ್ನು ದಾಟಿಸಿ ದಡಸೇರಿಸುವುದರಲ್ಲಿ ದೋಣಿಯಂತಿರುವ ಈ ರುದ್ರಮಂತ್ರದಿಂದ ಶಾಶ್ವತವಾದ ಮುಕ್ತಿಯನ್ನು ಪಡೆಯುತ್ತಾನೆ. ಆದರೆ ಆರೀತಿ ಭಸ್ಮಧಾರಿಯಾಗದೆ ಊರ್ಧ್ವ

ಯದಿ ಸಿತಭಸಿತತ್ರಿಪುಂಡ್ರಧಾರೀ
ವಿಮಲಮನುಂ ಪ್ರಜಪೇತ ರುದ್ರಸೂಕ್ತಂ ।
ಶಿವಪದಕಮಲೇ ನಿವಿಷ್ಟಚಿತ್ತೋ
ಭವತಿ ಭವೇಽಪಿ ವಿಮುಚ್ಯತೇ ಗೃಹಸ್ಥಃ ॥೧೬॥

ವರ್ಣೀ ವನೀ ಶತಮನುಂ ಶತರುದ್ರಮಂತ್ರಂ
ಭಸ್ಮಾಕ್ಷಧೃಗ್ಯದಿ ಜಪೇದವಿಮುಕ್ತಸಿದ್ಧ್ಯೈ ।
ವಿಧ್ಯುಜ್ಝಿತೋಽಪಿ ನಿಯಮಾಶ್ರಮವರ್ಣಧರ್ಮೈಃ
ರುದ್ರಸ್ಯ ಜಾಪ್ಯ ಪರಮಃ ಸಕಲಂ ಲಭೇತ ॥೧೭॥

ರುದ್ರೇಣ ವಿದ್ರಾವಿತಸರ್ವಪಾಪ
ಸಂತಾಪನಿದ್ರಾದಿವಿವರ್ಜಿತಾಕ್ಷಃ ।
ತ್ರ್ಯಕ್ಷಪ್ರಸಾದೇನ ಚ ರುದ್ರಜಾಪೀ
ದಾರಿದ್ರ್ಯನಾಶಂ ಕಿಲ ಶೈವಮಂತ್ರೈಃ ॥೧೮॥

---

ಪುಂಡ್ರವನ್ನು ಕೇವಲ ಮಣ್ಣಿನಿಂದ ಇಟ್ಟು ರುದ್ರಮಂತ್ರವನ್ನು ಜಪಿಸದವನು ಕೇವಲ ನರಕಕ್ಕೆ ಭಾಗಿಯಾಗುವನು. ಇದು ನಿಜ. ॥೧೫॥

ಶುಭ್ರವಾದ ಭಸ್ಮತ್ರಿಪುಂಡ್ರಗಳನ್ನು ಧರಿಸಿ ಶಿವನ ಪಾದಕಮಲದಲ್ಲಿ ನೆಟ್ಟ ಮನಸ್ಸುಳ್ಳವನಾಗಿ ಪವಿತ್ರಮಂತ್ರವೆನಿಸಿದ ರುದ್ರಸೂಕ್ತವನ್ನು ಜಪಮಾಡುವ ಗೃಹಸ್ಥನು ಈ ಸಂಸಾರಬಂಧನದಿಂದ ನಿಜವಾಗಿ ಮುಕ್ತನಾಗುತ್ತಾನೆ. ಅವನಿಗೆ ಐಹಿಕ ಮತ್ತು ಆಮುಷ್ಮಿಕಸೌಖ್ಯಗಳೆರಡೂ ಕರಗತಗಳಾಗುತ್ತವೆ. ॥೧೬॥

ವನವಾಸಿಯಾದ ವಾನಪ್ರಸ್ಥನೂ ಬ್ರಹ್ಮಚಾರಿಯೂ ಭಸ್ಮರುದ್ರಾಕ್ಷಧಾರಿಯಾಗಿ ಅವಿಮುಕ್ತಕ್ಷೇತ್ರಪ್ರಾಪ್ತಿಗಾಗಿ ನೂರುಮಂತ್ರಗಳುಳ್ಳ ಈ ಶತರುದ್ರಮಂತ್ರವನ್ನು ಜಪಮಾಡುವುದಾದರೆ, ಅವನು ನಿಯಮ, ಆಶ್ರಮ ಮತ್ತು ವರ್ಣಧರ್ಮಗಳ ವಿಧಿಯನ್ನು ಮೀರಿದ್ದರೂ ಧರ್ಮಭ್ರಷ್ಟನಾಗಿದ್ದರೂ ಈ ರುದ್ರಮಂತ್ರಜಪಮಹಿಮೆಯಿಂದ ಸಮಸ್ತ ಫಲವನ್ನೂ ಪಡೆಯುತ್ತಾರೆ. ॥೧೭॥

ಶತರುದ್ರಮಂತ್ರಜಪಮಾಡುವವನು ಬಹುಜನ್ಮಾಂತರಗಳಿಂದ ಸಂಪಾದಿಸಿದ ಸಮಸ್ತಪಾಪಗಳಿಂದಲೂ ದುಃಖ, ನಿದ್ರಾ, ಜಾಗರಣಾದಿಗಳಿಂದಲೂ ಮುಕ್ತನಾಗಿ ಜಯಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ ಪವಿತ್ರವಾದ ರುದ್ರಮಂತ್ರ ಮಹಿಮೆಯಿಂದ

ಗೃಹೇ ವಾ ಗೋಷ್ಠೇ ವಾ ನದತಟವಟಾಶ್ವತ್ಥತಲಗಃ
ಕ್ರಮಾತ್ಪುಣ್ಯೇ ವೃದ್ಧಿಂ ಲಭತಿ ಚ ಜಪನ್ರುದ್ರಮುಗಜೇ ।
ಶಿವಕ್ಷೇತ್ರೇ ಪುಣ್ಯೇ ಭವತಿ ಶಿವಪಾದಾಬ್ಜಭವನೇ
ಜಪೇ ಬಿಲ್ವಸ್ಯಾಧೋ ಯದಿ ಜಪನಕೃತ್ತಪನಭಾಃ ॥೧೯॥

ಯದಿ ಸಿತಭಸಿತತ್ರಿಪುಂಡ್ರಫಾಲೋ
ಮನುಗಣಮದ್ರಿಸುತೇ ಸುರುದ್ರಜಾಪೀ ।
ಪಾಪೋಪತಾಪಸಹಿತೋಽಪಿ ವಿಮುಕ್ತಸಂಘಃ
ಪ್ರಭವತಿ ರುದ್ರಗಣೋತ್ತಮಃ ಸ ಧನ್ಯಃ ॥೨೦॥

ಯೋ ಭಾನುಸೋದರವರೋತ್ತಮಮೂಲಸಂಸ್ಥೋ
ರುದ್ರಾರ್ಥವಾದವಿಧಿಬೋಧಿತಮಂತ್ರಸಾರಃ ।

---

ಪರಮೇಶ್ವರನ ಅನುಗ್ರಹವನ್ನು ಪಡೆದು ಸಕಲವಿಧವಾದ ದಾರಿದ್ರ್ಯವನ್ನೂ ಕಳೆದು ಕೊಳ್ಳುವನು. ಇದರಲ್ಲಿ ಸಂಶಯವಿಲ್ಲ. ॥೧೮॥

ಎಲೌ ಪಾರ್ವತಿಯೇ ಕೇಳು, ಮನೆ, ಹಸುವಿನ ಕೊಟ್ಟಿಗೆ, ನದಿ, ಆಲದಮರ, ಅರಳೀವೃಕ್ಷಗಳ ದಡ ಇವುಗಳಲ್ಲಿ ಕುಳಿತು ರುದ್ರಮಂತ್ರವನ್ನು ಜಪಿಸುವವನು ಕ್ರಮವಾಗಿ ಪುಣ್ಯದಲ್ಲಿ ವೃದ್ಧಿಯನ್ನು ಹೊಂದುವನು. ಅಂದರೆ ಮೇಲೆ ಹೇಳಿದ ಸ್ಥಳಗಳು ಉತ್ತರೋತ್ತರ ಪವಿತ್ರ ಕ್ಷೇತ್ರಗಳೆನಿಸಿವೆ. ಶಿವನ ಪಾದಕಮಲಕ್ಕೆ ನೆಲೆಯಾದ ಪುಣ್ಯಪ್ರದವಾದ ಶಿವಕ್ಷೇತ್ರದಲ್ಲಿಯಾಗಲಿ, ಬಿಲ್ವವೃಕ್ಷದ ಬುಡದಲ್ಲಿ ಯಾಗಲಿ ಈ ರುದ್ರಮಂತ್ರಜಪಮಾಡುವವನು ಸೂರ್ಯಸಮಾನವಾದ ತೇಜಸ್ಸನ್ನು ಪಡೆದು ಶಿವಸನ್ನಿಧಿಯನ್ನೈದುವನು. ॥೧೯॥

ಗಿರಿಜೇ ! ಶುಭ್ರವಾದ ಭಸ್ಮತ್ರಿಪುಂಡ್ರದಿಂದ ರಂಜಿತವಾದ ಹಣೆಯುಳ್ಳವ ನಾಗಿ ಶತರುದ್ರಮಂತ್ರವೆನಿಸಿದ ರುದ್ರಾಧ್ಯಾಯವನ್ನು ಜಪಮಾಡುವವನು, ಸಕಲ ಮಹಾಪಾಪಗಳಿಂದಲೂ ಉಪಪಾತಕಗಳ ಸಮೂಹದಿಂದಲೂ ಬಿಡಲ್ಪಟ್ಟವನಾಗಿ ಐಹಿಕಾಮುಷ್ಮಿಕಸುಖಗಳಿಗೆ ಭಾಗಿಯೆನಿಸಿ, ಕೊನೆಯಲ್ಲಿ ರುದ್ರಗಣವರ್ಯನೂ ಧನ್ಯನೂ ಎನಿಸುವನು. ॥೨೦॥

ಪರಮೇಶ್ವರಿಯೇ ! ಯಾವನು ಅರ್ಕವೃಕ್ಷ (ಎಕ್ಕದಗಿಡ) ಬುಡದಲ್ಲಿ ಕುಳಿತು ಈ ರುದ್ರಮಂತ್ರವನ್ನು ಅರ್ಥಜ್ಞಾನಪುರಸ್ಸರವಾಗಿ ಸರಿಯಾದ ಮಂತ್ರವಿಧಾನ

ತಸ್ಯಾವಿಮುಕ್ತಸದನಂ ಮರಣಾಂತಕಾಲೇ
ಪ್ರಾಪ್ಯಂ ಸದೇಶಿ ಮದನಾಂತಕದೃಷ್ಟಿದೃಷ್ಟಃ ॥೨೧॥

ಶ್ರೀಬಿಲ್ವಮೂಲಗತಿಭಾಕ್ಛತರುದ್ರಮಂತ್ರ
ಜಾಪ್ಯೇನ ಪಾಪಸಹಿತೋಽಪಿ ವಿಮುಕ್ತಪಾಪಃ ।
ಸ ಏವ ಮೇ ಪಂಕಜಪಾದಮಿಷ್ಟ್ವ
ನಿಷ್ಠಾನಕೃಚ್ಛಾಂಭವಸತ್ತಮೋಽದ್ರಿಜೇ ॥೨೨॥

ಪ್ರಾತಃ ಶ್ರೀಶತರುದ್ರಮಂತ್ರಜಪತೋ ಭಸ್ಮತ್ರಿಪುಂಡ್ರಾಕ್ಷಧೃಕ್
ಮಧ್ಯಾಹ್ನೇಽಪಿ ತತೋಽಪಿ ಸಂಗವಕೃತಂ ಸಾಯಂತನೇ ಜನ್ಮಹಂ ।
ರಾತ್ರೌ ತತ್ಪ್ರಜಪನ್ನಿಶಾಸು ಗಿರಿಜೇ ಭಸ್ಮಾಕ್ಷಧೃಙ್ಮುಕ್ತಿಭಾಕ್ ॥೨೩॥

---

ವನ್ನರಿತು ಪ್ರತಿದಿನ ರುದ್ರಮಂತ್ರಜಪಮಾಡುವನೋ ಅವನು ಮನ್ಮಥಾಂತಕನಾದ ಮಹೇಶನ ಅನುಗ್ರಹಕ್ಕೆಪಾತ್ರನಾಗಿ ಮರಣಸಮಯದಲ್ಲಿ ಅವಿಮುಕ್ತಕ್ಷೇತ್ರವನ್ನು ಪಡೆಯುವನು. 'ಕಾಶೀಮರಣಾನ್ಮುಕ್ತಿಃ' ಎಂಬ ನ್ಯಾಯದಂತೆ ಅಂತಹವನಿಗೆ ಅನಾಯಾಸವಾಗಿ ಮೋಕ್ಷವು ದೊರೆಯುವುದರಲ್ಲಿ ಸಂಶಯವಿಲ್ಲ. ॥೨೧॥

ಪರ್ವತರಾಜಕುಮಾರಿಯೇ! ಶ್ರೀಬಿಲ್ವವೃಕ್ಷದ ಬುಡದಲ್ಲಿ ನಿಂತು ಶತರುದ್ರ ಮಂತ್ರ ಜಪಮಾಡುವವನು ಎಂತಹ ಪಾಪಯುಕ್ತನಾಗಿದ್ದರೂ ಕ್ಷಣಕಾಲದಲ್ಲಿ ಪಾಪರಹಿತನಾಗುವನು. ಅವನೇ ನನ್ನ ಕಮಲದಂತಿರುವ ಪಾದವನ್ನು ಸೇವಿಸುವ ವನಾಗಿ ನಿಜವಾದ ಶಾಂಭವವರ್ಯನೆನಿಸುವನು. ಅವನಲ್ಲಿ ನಾನು ಸಂಪೂರ್ಣವಾದ ಅನುಗ್ರಹವನ್ನಿಡುವೆನು ॥೨೨॥

ಗಿರಿಜೆಯೇ ಕೇಳು, ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳನ್ನು ಧರಿಸಿ ಪ್ರಾತಃಕಾಲ, ಸಂಗಮಕಾಲ, ಮಧ್ಯಾಹ್ನ, ಸಾಯಂಕಾಲ ಮತ್ತು ರಾತ್ರಿಕಾಲಗಳಲ್ಲಿ, ಅಂದರೆ ದಿನಕ್ಕೆ ಐದುಸಾರಿ ಈ ರುದ್ರಮಂತ್ರವನ್ನು ಜಪಮಾಡುವವನು ಕ್ರಮವಾಗಿ ಉತ್ತರೋತ್ತರ ಸತ್ಫಲಗಳನ್ನು ಪಡೆದು ಕೊನೆಗೆ ಮುಕ್ತಿಯನ್ನು ಹೊಂದುವನು. (ವಿ.ಸೂ. ಮೂಲದಲ್ಲಿ ಈ ಶ್ಲೋಕದ ನಾಲ್ಕನೆಯ ಪಾದವು ಕಂಡುಬರುವುದಿಲ್ಲ) ॥೨೩॥

ನಿರ್ಮಾತೋ ಯತೀನಾಂ ಶ್ರುತಿಶತಗತಂ ವೈ ದ್ವಿಜವರೋ
ಮುದಾರುದ್ರಂ ಭಸ್ಮಸ್ಥಿತಸಿತವರಾಂಗೋ ದ್ರುತಪದಂ ।
ತ್ರಿಪುಂಡ್ರಾಂಕಃ ಫಾಲೇ ಧೃತಸಿತವರಾಕ್ಷಸ್ರಜಧರೋ
ವರೋ ಹಾರಃ ಸಾರೋ ಭವತಿ ಚ ವಿಮುಕ್ತ್ಯೈ ಪರತರಃ ॥೨೪॥

ನಾನ್ಯಾರ್ಥಂ ಪ್ರಜಪೇದಘಘ್ನಮಥ ಮೇ ಶ್ರೀರುದ್ರಮಂತ್ರಂ ಶಿವೇ
ಕಾಮಾದ್ವಾ ಧನಲೋಭತೋ ಗಿರಿಸುತೇ ಜಪ್ತ್ವಾ ಲಭೇದ್ಯಾತನಾಂ ।
ಲಾಲಾಜಾಲನಿಕಾಯದುಷ್ಕ್ರಿಮಿಯುತೋ ವಕ್ತ್ರೇಣ ಪೂಯಾದ್ಯಸೃಕ್
ಪೂತೀಗಂಧಯುತಾಂಗತೋ ಹಿ ಸ ಭವೇತ್ತದ್ದೇವಮಾನಂ ಶತಂ ॥೨೫॥

ಪುಣ್ಯೇ ವಿಮುಕ್ತಸದನೇ ಶತನಿಗಮಗತಂ ರುದ್ರಜಾಪ್ಯಾದ್ವಿಮುಕ್ತ
ಸ್ತತ್ರೈವಂ ಯದಿ ಲೋಭತೋ ಧನಪರೋ ಜಪ್ತ್ವಾ ಲಭೇದ್ರೌರವೀಂ ।

---

ತನ್ನ ಹಣೆಯಲ್ಲಿ ಶುದ್ಧವಾದ ಭಸ್ಮತ್ರಿಪುಂಡ್ರವನ್ನು ಧರಿಸಿ ಪವಿತ್ರವಾದ ದಿವ್ಯರುದ್ರಾಕ್ಷಮಾಲೆಯನ್ನು ಅಂಗಾಂಗಗಳಿಗೆ ಹಾಕಿಕೊಂಡು, ಮೈಗೆಲ್ಲಾ ಭಸ್ಮ ಲೇಪನಮಾಡಿಕೊಂಡು ಸಂತೋಷದಿಂದ ರುದ್ರಜಪಮಾಡುವ ಶ್ರೇಷ್ಠನಾದ ಶೈವ ವರ್ಯನು ಮುಕ್ತಿಪ್ರಾಪ್ತಿಗೆ ಅರ್ಹನೆನಿಸುವನು. ಅವನೇ ನಿಜವಾದ ಶಾಂಭವ ಶಬ್ದ ವಾಚ್ಯನು. ಆ ಮಂತ್ರವೇ ವೇದದ ಸಾರ. ॥೨೪॥

ಗಿರಿಸುತೆಯೇ ಕೇಳು, ಪಾಪನಾಶಕವಾದ ಈ ಶತರುದ್ರಮಂತ್ರವನ್ನು ಬೇರೆ ಪ್ರಯೋಜನವನ್ನುದ್ದೇಶಿಸಿ ಜಪಮಾಡಬಾರದು. ಕೇವಲ ಈಶ್ವರಪ್ರೀತಿಯೇ ಇದಕ್ಕೆ ಮುಖ್ಯ ಧ್ಯೇಯವಾಗಿರಬೇಕು. ಎಲೌ ಗಿರಿರಾಜಕುಮಾರಿ, ಹಾಗಿಲ್ಲದೆ ಮತ್ತಾವ ಕಾಮನೆಯಿಂದಲೋ, ಧನಲೋಭದಿಂದಲೋ ಈ ರುದ್ರಮಂತ್ರವನ್ನು ಜಪಮಾಡಿ ದರೆ ದುಷ್ಟಕ್ರಿಮಿಗಳಿಂದ ಯುಕ್ತವಾದ ಲಾಲಾರಸವುಳ್ಳವನಾಗಿ ಬಾಯಿಂದ ಕೀವು, ರಕ್ತಗಳನ್ನು ಸುರಿಸುತ್ತಾ ದೇಹದಲ್ಲೆಲ್ಲಾ ದುರ್ಗಂಧಹೊಂದಿ ದೇವತೆಗಳ ನೂರು ವರ್ಷಗಳ ಕಾಲದವರೆಗೆ ಘೋರವಾದ ಯಾತನೆಯನ್ನನುಭವಿಸುವನು. (ಮಾನವರ ಒಂದು ವರ್ಷವು ದೇವತೆಗಳಿಗೆ ಒಂದು ದಿನವಾಗುವುದು. ಅಂತಹ ಮುನ್ನೂರರು ವತ್ತು ದಿನಗಳು ದೇವತೆಗಳಿಗೆ ಒಂದು ವರ್ಷವೆನಿಸುವುದು.) ॥೨೫।

ಪುಣ್ಯಕರವಾದ ಅವಿಮುಕ್ತಕ್ಷೇತ್ರದಲ್ಲಿ ಶತರುದ್ರೀಯಾಂತರ್ಗತವಾದ ರುದ್ರ ಮಂತ್ರಜಪದಿಂದ ಭಕ್ತನು ಮುಕ್ತನಾಗುವನು. ಆದರೆ ಅಲ್ಲಿಯೇ ಧನಲೋಭದಿಂದೇ

ದುಷ್ಟಾಂ ತಾಂ ಕಿಲ ಯಾತನಾಂ ಗಿರಿಸುತೇ ತದ್ಭೈರವಸ್ಯ ಕಶಾಘಾತಜಾಂ
ತಾಂ ಸೋಢಾಂ ನ ಹಿ ತತ್ರ ತತ್ಕ್ಷಣಮುಮೇ ತತ್ಕೇನ ಶಕ್ಯಾ ಧ್ರುವಂ॥೨೬॥

ಭೂಯಾದ್ರುದ್ರಪಿಶಾಚಕೋತ್ತರಗೃಹೇ ಜಪ್ತ್ವಾಪಿ ತತ್ಪಾತಕೈ
ರ್ಮುಕ್ತೋ ನೈವ ಭವೇತ (ಚೋಗ್ರಕಿರಣತನಯಸ್ಯ) ಸದ್ಮನಿಹಿತೋ
ವಿಷ್ಟಾಸು ತಿಷ್ಠೇಚ್ಛತಂ ।
ತಸ್ಮಾನ್ನ ಪ್ರಜಪಂತಿ ಸಾಧವ ಇಮಂ ಮಂತ್ರಂ ವಿಮುಕ್ತಿಪ್ರದಂ
ಸ್ವರ್ಗಾರೋಗ್ಯಸುಖಪ್ರದಾನಮಗಜೇ ಮದ್ಜ್ಞಾನದಂ ಕೇವಲಂ ॥೨೭॥

ಮಲ್ಲಿಂಗಾಸೇಕನೀರೈಃ ಶತಮನುವಿಹಿತೈಃ ಸ್ನಾಪಯೇದ್ರೋಗಿಣಂ ವಾ
ವಂಧ್ಯಾ ವಾ ನಿಯತಂ ಸುರುದ್ರಜಪಕೃದ್ರೋಗೈಃ ಪ್ರಮುಕ್ತೋ ಭವೇತ್ ।
ವಂಧ್ಯಾಚಾಪಿ ಸುವೇತ ಪುತ್ರಮಗಜೇ ಪುಣ್ಯಂ ಪರಂ ಶಾಂಭವಂ
ಮುಕ್ತ್ಯೈ ಚಾಪಿ ಮನುಂ ದಿಶಂತಿ ಮುನಯೋ ಮತ್ಪಾದನಿಷ್ಠಾಃ ಸದಾ॥೨೮॥

---

ನಾದರೂ ಈ ಮಂತ್ರವನ್ನು ಜಪಮಾಡಿದಲ್ಲಿ ಭಯಂಕರವಾದ ಅತಿ ದುಷ್ಟಯಾತನೆಯನ್ನು ಅನುಭವಿಸುವನು. ಪರ್ವತರಾಜಕುಮಾರಿ ಕೇಳು. ಕಾಶೀಕ್ಷೇತ್ರರಕ್ಷಕನಾದ ಕಾಲಭೈರವನ ಚಾವಟೀ ಏಟಿನಿಂದುಂಟಾಗುವ ಆ ಯಾತನೆಯನ್ನು ಸಹಿಸುವುದೇ ಯಾರಿಂದಲೂ ಸಾಧ್ಯವಿಲ್ಲ. ಉಮೆ, ನಿಶ್ಚಯವಾಗಿಯೂ ಆ ಕ್ಷಣದಲ್ಲಿ ಕಾಲಭೈರವನು ಅಂತಹ ಲೋಭಿಯನ್ನು ಕ್ರೂರವಾದ ಶಿಕ್ಷೆಯಿಂದ ಶಿಕ್ಷಿಸುವನು. ॥೨೬॥

ಹಾಗೆ ಧನಾರ್ಥವಾಗಿ ಜಪಮಾಡುವುದರಿಂದ ರುದ್ರಪಿಶಾಚಿಯಾಗುವನು. ಆ ಜಪದಿಂದ ಯಾವ ಪಾಪಗಳೂ ನಾಶವಾಗಲಾರವು. ಅಲ್ಲದೆ ಯಮನ ಲೋಕದಲ್ಲಿ ನೂರುವರ್ಷಗಳ ಕಾಲ ಅಮೇಧ್ಯಕುಂಡದಲ್ಲಿ ಬೀಳಬೇಕಾಗುವುದು. ಗಿರಿರಾಜಸುತೆ! ಕೇಳು, ಆದ್ದರಿಂದ ಸಾಧುಗಳು, ಮೋಕ್ಷಪ್ರದವೂ, ಸ್ವರ್ಗ, ಆರೋಗ್ಯ ಮತ್ತು ಸುಖವನ್ನುಂಟುಮಾಡುವುದೂ, ಅಲ್ಲದೆ ನನ್ನ ವಿಷಯಕಜ್ಞಾನವನ್ನುಂಟುಮಾಡುವುದೂ ಆದ ಈ ರುದ್ರಮಂತ್ರವನ್ನು ಬೇರೆ ಫಲೋದ್ದೇಶದಿಂದ ಜಪಮಾಡುವುದಿಲ್ಲ. ॥೨೭॥

ಶತರುದ್ರಮಂತ್ರಪೂರ್ವಕವಾಗಿ ನನ್ನ ಲಿಂಗಕ್ಕೆ ಅಭಿಷೇಕಮಾಡಿದ ನೀರಿನಿಂದ ರೋಗಿಗೂ ಸ್ನಾನಮಾಡಿಸಬಹುದು. ಇದರಿಂದ ಅವನ ದೈಹಿಕರೋಗವು ಬಿಡುಗಡೆಯಾಗುವುದು. ಬಂಜೆಯಾದಿರೂ ಸ್ತ್ರೀಯು ಉತ್ತಮವಾದ ಈ ರುದ್ರಮಂತ್ರ ಜಪಮಾಡಿದರೆ ಸುಪುತ್ರನನ್ನು ಪಡೆಯುವಳು. ಆದ್ದರಿಂದಲೇ ನನ್ನ ಪಾದಭಕ್ತರಾದ

ಆ ಪಾತಾಳನಭಸ್ಸ್ಥಲಾಂತ ಭುವನ ಬ್ರಹ್ಮಾಂಡಮಾವಿಸ್ಫುರ-
ಜ್ಜ್ಯೋತಿಸ್ಫಾಟಿಕಲಿಂಗಮೌಳಿವಿಲಸತ್ಪೂರ್ಣೇಂದುವಾಂತಾಮೃತೈಃ ।
ಅಸ್ತೋಕಾಪ್ಲುತಮೇಕಮೀಶಮನಿಶಂ ರುದ್ರಾನುವಾಕಾನ್ಜಪನ್
ಧ್ಯಾಯೇದೀಪ್ಸಿತಸಿದ್ಧಯೇ ಧ್ರುವ (ದ್ಭುತ)ಪದಂ ವಿಪ್ರೋಽಭಿಷಿಂಚೇಚ್ಛಿವಂ
॥೨೯॥

॥ ಶ್ರೀ ಸ್ಕಂದ ಉವಾಚ ॥

ಏವಮಾಹ ಮಹಾದೇವಃ ಕೈಲಾಸೇ ಗಿರಿಜಾಂ ಪ್ರತಿ ।
ರುದ್ರಾಧ್ಯಾಯವಿಧಿಂ ಕೃತ್ಸ್ನಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೩೦॥

ಶಂಭೋಃ ಪದಾಂಭೋಜಸಮರ್ಚನೇನ
ಕುಂಭೋದ್ಭವಾದ್ಯಾ ಮುನಯಶ್ಚ ಶಾಂಭವಾಃ ।
ಅಂಭೋಜಜಾತೋಽಪಿ ಚ ಪಂಚರುದ್ರಂ
ಜಪಂತಿ ದಂಭಾದಿವಿವರ್ಜಿತಾಂಗಾಃ ॥೩೧॥

---

ಮುನಿಗಳು ಯಾವಾಗಲೂ ಪುಣ್ಯವೂ, ಶ್ರೇಷ್ಠವೂ, ಶಿವಭಕ್ತಿಪೂರ್ಣವೂ ಆದ ಈ ಶತರುದ್ರಮಂತ್ರವನ್ನು ಮುಕ್ತಿಪ್ರಾಪ್ತಿಗಾಗಿ ಎಲ್ಲರಿಗೂ ಉಪದೇಶಮಾಡುತ್ತಾರೆ.॥೨೮॥

ಪಾತಾಳದಿಂದ ಹಿಡಿದು ಅಂತರಿಕ್ಷದ ವರೆಗೂ ಮಧ್ಯೆ ವ್ಯಾಪಿಸಿರುವ ಈ ಬ್ರಹ್ಮಾಂಡದಲ್ಲಿ, ಅತ್ಯದ್ಭುತವಾದ ತೇಜಸ್ಸುಳ್ಳ ಸ್ಫಟಿಕಮಯವಾದ ಶಿವಲಿಂಗದ ಮೇಲೆ ವಿರಾಜಿಸುವ ಪೂರ್ಣಚಂದ್ರನ ಅಮೃತಕಿರಣಗಳಿಂದ ಸಂಪೂರ್ಣವಾಗಿ ತೊಯ್ದಿರುವ ಅದ್ವಿತೀಯನಾದ ಈಶ್ವರನನ್ನು ಧ್ಯಾನಿಸುತ್ತಾ, ರುದ್ರಾಧ್ಯಾಯವನ್ನು ಜಪಮಾಡುತ್ತಾ, ಬ್ರಾಹ್ಮಣನು ಇಷ್ಟಾರ್ಥಸಿದ್ಧಿಗಾಗಿ ಶಾಶ್ವತವಾದ ಮೋಕ್ಷರೂಪವಾದ ಸ್ಥಾನವನ್ನು ಕರುಣಿಸುವ ಶಿವನಿಗೆ ಅಭಿಷೇಕಮಾಡಬೇಕು. ॥೨೯॥

ಅಯ್ಯ ಜೈಗೀಷವ್ಯನೆ, ಹೀಗೆ ಕೈಲಾಸದಲ್ಲಿ ಮಹಾದೇವನು ಗಿರಿಜೆಯನ್ನು ಕುರಿತು, ಸಂಪೂರ್ಣವಾಗಿ ರುದ್ರಾಧ್ಯಾಯವಿಧಿಯನ್ನು ಹೇಳಿದನು. ಎಲೈ ಮುನಿಯೇ, ಮತ್ತೇನನ್ನು ಕೇಳಬೇಕೆಂದಿರುವೆ? ತಿಳಿಸು ಎಂದು ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ಹೇಳುತ್ತಾ ಹೀಗೆಂದನು. ॥೩೦॥

ಅಗಸ್ತ್ಯರೇ ಮುಂತಾದ ಮುನಿಗಳೂ ಶಂಭುವಿನ ಪಾದಕಮಲಪೂಜೆಯಿಂದ ಶೈವರಾಗಿರುವರು. ಬ್ರಹ್ಮನೂ ಸಹ ಶ್ರೀ ರುದ್ರವನ್ನು ಜಪಿಸುತ್ತಿರುವನು. ಹೀಗೆ

ತಾರಾದ್ಯಂತಪದಂ ಜಪೇದ್ಯದಿ ಮುದಾ ರುದ್ರಂ ದ್ರುತೋಚ್ಚಂ ವಿನಾ
ನತ್ವಾ ಪ್ರಾಂಜಲಿರೀಶನಾಮ ಕಲಯನ್ಮುಕ್ತೋ ಮಹಾಪಾತಕೈಃ ।
ಭಸ್ಮೋದ್ಧೂಳಿತದೇಹ ಏವ ಹಿ ಜಪಂಛ್ರೀರುದ್ರಮಂತ್ರಂ ದ್ವಿಜೋ
ರುದ್ರಾಕ್ಷಾಮಲದೇಹ ಏವ ಹಿ ಭವೇನ್ಮುಕ್ತೋ ಮಹಾಪಾತಕೈಃ ॥೩೨॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಶತರುದ್ರೀಯ
ಮಹಿಮಾನುವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ

---

ಆಗಸ್ತ್ಯ ಬ್ರಹ್ಮ ಮುಂತಾದ ಐದುಮಂದಿಯೂ ಈ ರುದ್ರಮಂತ್ರಜಪಮಹಿಮೆಯಿಂದ ಅಹಂಕಾರ ಡಂಭಾದಿಗಳಿಲ್ಲದವರಾಗಿದ್ದಾರೆ. ||೩೧||

ಅತಿ ತ್ವರೆಯಾಗಿ ಮತ್ತು ಅತಿ ಗಟ್ಟಿಯಾಗಿ ಜಪಮಾಡುವುದನ್ನು ಬಿಟ್ಟು ನಿಧಾನವಾಗಿ ಮಧ್ಯಮವಾದ ಸ್ವರದಿಂದ ಓಂಕಾರವೇ ಆದ್ಯಂತವಾಗುಳ್ಳ ಈ ರುದ್ರ ಮಂತ್ರವನ್ನು ಜಪಿಸುತ್ತಾ, ಕೈಜೋಡಿಸಿಕೊಂಡು ಭಸ್ಮಲೇಪಿತಗಾತ್ರನಾಗಿ ರುದ್ರಾಕ್ಷ ಮಾಲೆಗಳಿಂದ ಪವಿತ್ರದೇಹವುಳ್ಳ ಬ್ರಾಹ್ಮಣನು ಶ್ರೀರುದ್ರಮಂತ್ರವನ್ನು ಜಪ ಮಾಡುವುದಾದರೆ ಅವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುತ್ತಾನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮುನಿಗಳಿಗೆ ಶ್ರೀ ರುದ್ರಮಹಿಮೆಯನ್ನು ಹೇಳಿದನು. ||೩೨||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಶತರುದ್ರೀಯ ಮಂತ್ರದ ಮಹಿಮಾವರ್ಣನೆಯೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ತ್ರಯಸ್ತ್ರಿಂಶೋಽಧ್ಯಾಯಃ

॥ ಶ್ರೀಜೈಗೀಷವ್ಯ ಉವಾಚ ॥

ಶ್ರುತಂ ತೇ ರುದ್ರಮಾಹಾತ್ಮ್ಯಂ ದೇವ ದೇವ ಸನಾತನ ।
ಪಂಚಾಕ್ಷರಸ್ಯ ಚ ವಿಧಿಂ ಉತ್ಪತ್ತಿಂ ಮೇ ವದಾಧುನಾ ॥೧॥

ವಿಧಿರ್ಜಪೇಽಧಿಕಾರಂ ಚ ಕೀದೃಶಸ್ಯ ತು ಬ್ರೂಹಿ ಮೇ ।
ಸುಬ್ರಹ್ಮಣ್ಯ ನಮಸ್ತೇಽಸ್ತು ತ್ವತ್ತೋ ವೇತ್ತಾ ನ ಚಾಪರಃ ॥೨॥

---

## ಮೂವತ್ತಮೂರನೆಯ ಅಧ್ಯಾಯ

ದೇವಾದಿದೇವನೂ ಸನಾತನನೂ ಆದ ಸ್ಕಂದದೇವನೇ, ನಿನ್ನ ಅನುಗ್ರಹದಿಂದ ನನಗೆ ರುದ್ರಾಧ್ಯಾಯದಮಹಿಮೆಯ ಅರಿವಾಯಿತು. ಇನ್ನು ಶಿವಪಂಚಾಕ್ಷರ ಮಂತ್ರದ ಉತ್ಪತ್ತಿಯನ್ನೂ ಅದರ ವಿಧಿಯನ್ನೂ ಕೇಳಲು ಅಪೇಕ್ಷಿಸುವೆನು. ಯಾರಿಗೆ ಆ ಜಪಾಧಿಕಾರವಿರುವುದೆಂಬುದನ್ನೂ ದಯೆಯಿಂದ ನನಗೆ ಈಗಲೇ ತಿಳಿಸು. ಸುಬ್ರಹ್ಮಣ್ಯಸ್ವಾಮಿಯೇ, ನಿನಗೆ ಸಾಷ್ಟಾಂಗ ನಮಸ್ಕಾರಮಾಡುತ್ತೇನೆ. ಈ ವಿಷಯದಲ್ಲಿ ನಿನಗಿಂತಲೂ ಹೆಚ್ಚು ತಿಳಿದವರು ಬೇರೆ ಯಾರೂ ಇಲ್ಲವೆಂದೇ ನನ್ನ ಅಭಿಪ್ರಾಯ. ಹೀಗೆಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಕುರಿತು ಪ್ರಾರ್ಥಿಸಿಕೊಂಡನು. ॥೧-೨॥

॥ ಸೂತ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಮುನಿಂ ಪ್ರಾಹ ಶಿಖಿಧ್ವಜಃ ।
ಮಹಾದೇವೇನ ಯತ್ಪ್ರೋಕ್ತಂ ಕೈಲಾಸೇ ಪಾರ್ವತೀಂ ಪ್ರತಿ ॥೩॥

॥ ಶ್ರೀ ಸ್ಕಂದ ಉವಾಚ ॥

ಜೈಗೀಷವ್ಯ ಶೃಣುಷ್ವೇವಮಿತಿಹಾಸಂ ನಗೋತ್ತಮೇ ।
ಕೈಲಾಸೇ ಲಾಸ್ಯಸದನೇ ಮದನಾಂತಕರಸ್ಯ ಚ ॥೪॥

ನಾನಾಶಿವಾಲಯೋಲ್ಲಾಸಿ ಮಣಿದ್ಯುತಿವಿರಾಜಿತೇ ।
ಶಾತಕುಂಭಮಹಾಕುಂಭಧಗದ್ಧಗಿತದಿಕ್ತಟೇ ॥೫॥

ಮಹಾಬಿಲ್ವೋರುವಿಪಿನ ಸಂತಾನಪ್ರವರೇ ಮುನೇ ।
ರತ್ನಪ್ರಾಕಾರಸೌಧೋದ್ಯಚ್ಚಂದ್ರಮೌಳೀಶ್ವರಾಲಯೇ ॥೬॥

ಪಂಚಯೋಜನಸಾಹಸ್ರಚಂದ್ರಸ್ಫಟಿಕನಿರ್ಮಿತೇ ।
ಕಕ್ಷ್ಯಾಗವಾಕ್ಷಶಿಕ್ಷಾಭಿರ್ದೇವತಾಕ್ಷ ಸುದುರ್ಲಭೇ ॥೭॥

---

ಹೀಗೆ ವಿಷಯಜಿಜ್ಞಾಸೆಯಿಂದ ಕೇಳಿಕೊಂಡ ಜೈಗೀಷವ್ಯನ ಮಾತುಗಳನ್ನು ಕೇಳಿ ಮಯೂರಧ್ವಜನಾದ ಕುಮಾರಸ್ವಾಮಿಯು, ಕೈಲಾಸಪರ್ವತದಲ್ಲಿ ಮಹಾದೇವನು ಪಾರ್ವತಿಗೆ ಪ್ರೀತಿಯಿಂದ ಹೇಳಿದ ಈ ವಿಷಯವನ್ನು ಆ ಮುನಿಗೆ ಹೇಳಿದನೆಂದು ಸೂತರು ವಾಜಶ್ರವಸಾದಿಗಳಿಗೆ ನಿರೂಪಿಸಿದರು. ಅಯ್ಯ ಜೈಗೀಷವ್ಯನೇ, ಆ ಶಿವಪಂಚಾಕ್ಷರಮಂತ್ರದ ಇತಿಹಾಸವನ್ನಿಂತು ಕೇಳು; ಮಹೇಶನ ನಾಟ್ಯಭೂಮಿಯೂ, ಅನೇಕ ಶಿವದೇವಾಲಯಗಳ ರತ್ನಕಾಂತಿಗಳಿಂದ ವಿರಾಜಿಸುತ್ತಿರುವುದೂ, ಸುವರ್ಣಮಯವಾದ ದೊಡ್ಡ ಕುಂಭಗಳಿಂದ ಧಗಧಗಿಸುತ್ತಿರುವ ದಿಕ್ಪ್ರದೇಶವುಳ್ಳದುದೂ ಆದ . ಉತ್ತಮವಾದ ಕೈಲಾಸಪರ್ವತದಲ್ಲಿ ಮಹೇಶ್ವರನು ಒಂದು ದಿನ ರತ್ನಸಿಂಹಾಸನದಲ್ಲಿ ಸಂತೋಷದಿಂದ ಮಂಡಿಸಿದ್ದನು. ॥೩-೪-೫॥

ಆ ಕೈಲಾಸಪರ್ವತದ ದೊಡ್ಡ ಬಿಲ್ವಾರಣ್ಯದ ಸಾಂದ್ರತೆಯಿಂದ ಶ್ರೇಷ್ಠವಾಗಿ ರತ್ನಮಯವಾದ ಪ್ರಾಕಾರವುಳ್ಳ ಉಪ್ಪರಿಗೆಯಿಂದ ಕಂಗೊಳಿಸುವ ಚಂದ್ರಮೌಳೀಶ್ವರನ ದಿವ್ಯಾಲಯವೊಂದಿರುವುದು. ಅದು ಐದುಸಾವಿರ ಯೋಜನದ ವರೆಗೂ

ತತ್ರ ತತ್ಸ್ಫಟಿಕೋದ್ದಾಮಸೌಧೇ ಚಂದ್ರಶಿಖಾಮಣಿಃ ।
ಏಕಾಕಾರಾಖಂಡದಂಡಸ್ಫಟಿಕೋತ್ತಮಮಂಡಪೇ ॥೮॥

ಸಹಸ್ರಸ್ತಂಭವಿತತೇ ರತ್ನಸಿಂಹಾಸನಸ್ಥಿತಃ ।
ದೇವ್ಯಾ ಸಹ ಮಹಾದೇವಃ ರಹಸ್ಯೇ ಸುಂದರಾಸ್ಯಕಃ ॥೯॥

ತನ್ಮೌಲಿಚಂದ್ರಕಿರಣನಿರ್ಯತ್ಸ್ಫಟಿಕ ಸಂಸ್ರವೈಃ ।
ಅಚ್ಛೋದ್ಯೈಃ ಸರಮುತ್ಕೃಷ್ಟಮುತ್ಫುಲ್ಲಕಮಲೋತ್ಪಲಂ ॥೧೦॥

ಸ್ಫಟಿಕೋತ್ತಮಸೋಪಾನತತ್ತೀರಮಣಿಮಂಟಪಂ ।
ಪಶ್ಚಿಮಾಭಿಮುಖಂ ತತ್ರ ಗರ್ಭಾಗಾರಂ ಮಹೇಶಿತುಃ ॥೧೧॥

ಶತಯೋಜನಮಾನೇನ ಸ್ಫಟಿಕೋಪಲನಿರ್ಮಿತಂ ।
ಪ್ರಾಕಾರರಾಜದ್ವೃಷಭಂ ಮಣಿಕುಂಭವಿರಾಜಿತಂ ॥೧೨॥

---

ವಿಸ್ತಾರವಾಗಿ ಚಂದ್ರನಂತೆ ಹೊಳೆಯುವ ಸ್ಫಟಿಕಶಿಲೆಯಿಂದ ನಿರ್ಮಿತವಾಗಿರುವುದು. ಉಪ್ಪರಿಗೆ ಗವಾಕ್ಷಗಳು ಇವುಗಳಿಂದ ತುಂಬಿ ಶೋಭಿಸುತ್ತಿರುವ ಅದು ದೇವತೆಗಳ ಕಣ್ಣುಗಳಿಗೂ ಸುಲಭವಾಗಿ ಕಾಣದಂತಿರುವುದು ॥೬-೭॥

ಸ್ಫಟಿಕಮಯವಾದ ಆ ದೊಡ್ಡ ಸೌಧದಲ್ಲಿ ಚಂದ್ರಚೂಡನು ಕುಳಿತಿರುವಾಗ ಅಖಂಡವಾದ ಸ್ಫಟಿಕಶಿಲೆಗಳ ಕಂಬಗಳು ದಿವ್ಯ ಕಾಂತಿಯನ್ನು ಬೀರುತ್ತಿರುವುವು. ಅಂತಹ ಸಾವಿರ ಕಂಬಗಳಿಂದ ಕೂಡಿ ವಿಶಾಲವೆನಿಸಿರುವ ದಿವ್ಯ ಮಂಟಪದಲ್ಲಿ ಸುಂದರ ಮುಖನಾದ ಮಹಾದೇವನು ಪಾರ್ವತಿಯೊಡನೆ ರಹಸ್ಯವಾಗಿ ರತ್ನಸಿಂಹಾಸನದ ಮೇಲೆ ಸಂತೋಷದಿಂದ ಕುಳಿತಿದ್ದನು. ॥೮-೯॥

ಆ ಮಹೇಶನ ದಿವ್ಯ ಕಿರೀಟದಲ್ಲಿರುವ ಚಂದ್ರನ ಕಿರಣಗಳು ಆ ಮಂಟಪ ದಲ್ಲಿದ್ದ ಚಂದ್ರಕಾಂತಶಿಲೆಗಳ ಮೇಲೆ ಬಿದ್ದು ಅದರಿಂದ ಹೊರಹೊರಟ ಸ್ವಚ್ಛವಾದ ನೀರು ಅಲ್ಲಿ ಸರೋವರವಾಗಿರುವುದು. ಅದರಲ್ಲಿ ಅರಳಿದ ಕಮಲಗಳೂ ಮತ್ತು ಕನ್ನೈದಿಲೆಗಳೂ ಗೋಚರಿಸುತ್ತಿರುವುವು. ಸ್ಫಟಿಕದಿಂದ ಉತ್ತಮವಾಗಿ ರಚಿಸಿರುವ ಸೋಪಾನವೊಂದು ಆ ಸರೋವರದ ಸೌಂದರ್ಯವನ್ನು ಮತ್ತೂ ಹೆಚ್ಚಿಸಿರುವುದು. ಅದರ ದಡದಲ್ಲಿ ಒಂದು ರತ್ನಮಂಟಪವಿರುವುದು. ಆ ಮಂಟಪದಲ್ಲಿ ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಮಹೇಶ್ವರನ ಗರ್ಭಗುಡಿಯಿರುವುದು. ಅದು ನೂರುಯೋಜನ ಪ್ರಮಾಣವುಳ್ಳದ್ದಾಗಿ ಸ್ಫಟಿಕಶಿಲೆಯಿಂದ ನಿರ್ಮಿತವಾಗಿರುವುದು. ಅದರ ಪ್ರಾಕಾರ

ಚಂದ್ರಮೌಳೀಶ್ವರಂ ಲಿಂಗಂ ಸ್ಫಾಟಿಕಂ ಯೋಜನೋನ್ನತಂ ।
ತನ್ಮೌಲಿಚಂದ್ರಕಾಂತೋರುಧಾರಾಸಾರಾಂಗಶೀತಲಂ ॥೧೩॥

ಭುಜಂಗ ಬಿಲ್ವಕುಸುಮೈರರ್ಚಿತಂ ಲಿಂಗಮುತ್ತಮಂ ।
ಸೋಮಾರ್ದ್ರಪಾತಯುಕ್ತಾಯಾಂ ಭೂತಾಯಾಂ ಭೂತನಾಯಕಂ ॥೧೪॥

ಸ್ನಾತ್ವಾ ತಚ್ಚಂದ್ರಸರಸಿ ಭಸ್ಮರುದ್ರಾಕ್ಷಭೂಷಣಾಃ ।
ಗಣಾಸ್ತತ್ರ ಸಮಾಯಾಂತಿ ಅಹಂ ಚಾಪಿ ಗಜಾನನಃ ॥೧೫॥

ವೀರಭದ್ರಸ್ತಥಾ ನಂದೀ ವಿಘ್ನತಂಡುರಿಟಿರ್ಮುನೇ ।
ಚಂದ್ರಮೌಳೀಶ್ವರಂ ಲಿಂಗಂ ದ್ರಷ್ಟುಂ ಸಂಪೂಜಿತಂ ತದಾ ॥೧೬॥

ತಸ್ಯಾಂ ತಿಥಾವೇಕದಾಹಂ ಗಜಾಸ್ಯಗಣಪೈರ್ವೃತಃ ।
ದ್ರಷ್ಟುಂ ಶ್ರೀಚಂದ್ರಮೌಳೀಶಂ ವರೀಯಸ್ಯಾಕರೋಗಮಂ ॥೧೭॥

---

ದಲ್ಲಿ ಸುತ್ತಲೂ ವಿರಾಜಿಸುತ್ತಿರುವ ವೃಷಭವಿಗ್ರಹಗಳು ರತ್ನಮಯವಾದ ಕುಂಭಗಳಿಂದ ಅಲಂಕೃತವಾಗಿ ಪ್ರಕಾಶಿಸುತ್ತಿರುವುವು. ॥೧೦-೧೧-೧೨॥

ಅಲ್ಲಿ ಒಂದು ಯೋಜನದೆತ್ತರವಿರುವ ಸ್ಫಟಿಕಮಯವಾದ ಚಂದ್ರಮೌಳೀಶ್ವರ ಲಿಂಗವು, ಅದರ ತಲೆಯಮೇಲಿರುವ ಚಂದ್ರಕಾಂತಶಿಲೆಗಳ ಮೇಲೆ ಬಿದ್ದ ಚಂದ್ರ ಕಿರಣಗಳಿಂದ ಕರಗಿ ಧಾರಾಕಾರವಾಗಿ ನೀರಾಗಿ ಹರಿದು ಶೀತಲವಾಗಿರುವುದು. ಅಲ್ಲಿ ನಾಗಲಿಂಗಪುಷ್ಪ, ಬಿಲ್ವದಳಗಳು, ನಾನಾವಿಧವಾದ ಪುಷ್ಪಗಳು, ಇವುಗಳಿಂದ ಉತ್ತಮವಾದ ಆ ಲಿಂಗವನ್ನು ಪೂಜೆಮಾಡಿದ್ದರು. ಸೋಮವಾರ, ಆರಿದ್ರಾನಕ್ಷತ್ರ ಮತ್ತು ವ್ಯತೀಪಾತಗಳು ಸೇರಿದ ಚತುರ್ದಶೀ ತಿಥಿಯಲ್ಲಿ, ಆ ಚಂದ್ರಸರೋವರದಲ್ಲಿ ಸ್ನಾನಮಾಡಿ ಭಸ್ಮರುದ್ರಾಕ್ಷಭೂಷಣರಾಗಿ ಶಿವಗಣಗಳೆಲ್ಲರೂ ಆ ಭೂತನಾಥನನ್ನು ದರ್ಶನಮಾಡಲು ಬರುತ್ತಾರೆ. ಆ ದಿವಸ ನಾನೂ, ಗಣಪತಿ, ವೀರಭದ್ರ, ನಂದಿ, ವಿಘ್ನರಾಜ, ತಂಡು, ರಿಟಿ, ಮೊದಲಾದವರೆಲ್ಲರೂ ಪೂಜೆಮಾಡಿರುವ ಆ ಚಂದ್ರ ಮೌಳೀಶ್ವರಲಿಂಗವನ್ನು ದರ್ಶನಮಾಡಿಕೊಂಡುಬರಲು ಅಲ್ಲಿಗೆ ಹೋದೆವು. ॥೧೩-೧೪-೧೫-೧೬॥

ಅದೇ ತಿಥಿಯಲ್ಲಿ ಒಂದುಸಲ ನಾನು ಗಜಾನನನೇ ಮುಂತಾದ ಗಣಾಧಿಪ ರೊಡನೆ ಕೂಡಿ ಶ್ರೀಚಂದ್ರಮೌಳೀಶ್ವರನನ್ನು ನೋಡಲು ಸಮೀಪಕ್ಕೆ ಹೋದೆನು.

ತದ್ವಾರಿ ವಾರಿತೋ ತಿಷ್ಠನ್ನಂದಿಕೇಶೇನ ಸಾದರಂ ।
ಅಹಮೇವಾಬ್ರುವಂ ತತ್ರ ನಂದಿಕೇಶಂ ಗಣೈರ್ವೃತಃ ॥೧೮॥

॥ ಸ್ಕಂದ ಉವಾಚ ॥

ಸೋಮಾದ್ರಾವ್ಯತೀಪಾತಯುಕ್ತಾಯಾಂ ಭೂತಾಯಾಂ ಜಗತಃ ಪತಿಂ ।
ಅಸ್ಯಾಂ ಸಂಪೂಜಯಾಮೀಶಂ ಚಂದ್ರಮೌಳೀಶ್ವರಂ ಶಿವಂ ॥೧೯॥

ತದಾ ತದ್ವಚನಂ ಶ್ರುತ್ವಾ ನಂದಿಕೇಶೋಽಭ್ಯಭಾಷತ ।
ಪ್ರಣಮ್ಯ ಮಾಂ ದ್ವಾರಪಾಲಃ ಶಂಭೋರಂತರ್ಗೃಹಾರ್ಚಿತಃ ॥೨೦॥

॥ ನಂದಿಕೇಶ ಉವಾಚ ॥

ರಹಸ್ಯಾಸ್ತೇಽತ್ರ ದೇವೇಶೋ ದೇವ್ಯಾಃ ಸ್ಫಾಟಿಕಮಂಟಪೇ ।
ನ ಚಾತ್ರ ಗಮನಂ ಶಕ್ಯಂ ಸರ್ವೇಷಾಂ ತಾರಕಾಂತಕ ॥೨೧॥

ಚಂದ್ರಮೌಳೀಶ್ವರಂ ಲಿಂಗಂ ದ್ರಷ್ಟವ್ಯಂ ಚೇತ್ತ್ವಯಾಗಣೈಃ ।
ನಂತುಮರ್ಚಿತುಮೀಶಾಯ ವಿಜ್ಞಾಸ್ಯಾದ್ಯಾಹಮಾವ್ರಜೇ ॥೨೨॥

---

ಆದರೆ ಬಾಗಿಲಿನಲ್ಲಿಯೇ ನಂದಿಕೇಶನು ನಿಂತುಕೊಂಡು ಆಗ ಗಣಗಳೊಡನೆ ಆದರದಿಂದ ನಾನೇ ಆ ನಂದಿಕೇಶ್ವರನನ್ನು ಕುರಿತು ಇಂತೆಂದೆನು. ॥೧೭-೧೮॥

'ಓ ನಂದಿಕೇಶ್ವರನೇ, ಸೋಮವಾರ, ಆದ್ರಾನಕ್ಷತ್ರ, ವ್ಯತೀಪಾತಯುಕ್ತವಾದ ಈ ಚತುರ್ದಶೀ ತಿಥಿಯಲ್ಲಿ ಚಂದ್ರಮೌಳೀಶ್ವರಲಿಂಗವನ್ನು ಪೂಜೆಮಾಡಬೇಕೆಂದು ಬಂದಿರುವೆವು. ಈಗ ನಮಗೆ ಒಳಗೆ ಹೋಗಲು ಅವಕಾಶಕೊಡಬೇಕು' ಎಂದು ಹೇಳಿದ ಕುಮಾರಸ್ವಾಮಿಯ ಮಾತನ್ನು ಕೇಳಿ ಶಂಭುವಿನ ಅಂತರ್ಗೃಹದಲ್ಲಿ ಪೂಜ್ಯನೆನಿಸಿದ ದ್ವಾರಪಾಲಕನಾದ ನಂದಿಕೇಶ್ವರನು ನನಗೆ ನಮಸ್ಕಾರಮಾಡಿ ಹೀಗೆ ಮಾತನಾಡಿದನು. ॥೧೯-೨೦॥

ಎಲೈ ಸ್ಕಂದದೇವನೇ, ದೇವದೇವನು ದೇವಿಯೊಡನೆ ಸ್ಫಟಿಕಮಂಟಪದಲ್ಲಿ ಏಕಾಂತದಲ್ಲಿರುವನು. ಅಲ್ಲಿಗೆ ಎಲ್ಲರೂ ಒಟ್ಟಾಗಿ ಹೋಗಲು ಸಾಧ್ಯವಿಲ್ಲ. ನೀನು ಈ ಗಣಗಳೊಡನೆ ಚಂದ್ರಮೌಳೀಶ್ವರನ ಲಿಂಗವನ್ನು ದರ್ಶನಮಾಡಬೇಕಾಗಿದ್ದಲ್ಲಿ ಅಥವಾ ನಮಸ್ಕರಿಸಿ ಪೂಜಿಸಬೇಕಾದರೆ ಮೊದಲು ನಾನು ಹೋಗಿ ನೀನು

ಇತ್ಯುಕ್ತ್ವಾ ನಂದಿಕೇಶೋಽಥ ಗತ್ವಾ ನತ್ವಾ ಮಹೇಶ್ವರಂ ।
ಸ್ತುತ್ವಾ ಪ್ರಾಂಜಲಿರಾಹೇತ್ಥಂ ಮದಾಗಮನಮೀಶ್ವರೇ ॥೨೩॥

ದೇವ ದೇವ ಮಹಾದೇವ ಸರ್ವಜ್ಞ ಶಶಿಶೇಖರ ।
ದ್ರಷ್ಟುಂ ಶ್ರೀಚಂದ್ರಮೌಳೀಶಂ ನಂತುಂ ಸಂಪೂಜಿತುಂ ಗಣಾಃ ॥೨೪॥

ಸ್ತೋತುಂ ಸ್ಕಂದಾದಯೋ ದ್ವಾರಿ ಗಜಾಸ್ಯಾದ್ಯಾಶ್ಚ ಸಂಸ್ಥಿತಾಃ ।
ಸೋಮಾದ್ರ್ರಾವ್ಯತೀಪಾತಯುಕ್ತಾಯಾಂ ಭೂತಾಯಾಂ ಗಣನಾಯಕಾಃ ॥೨೫॥

ತವ ಪಾದಾಂಬುಜದ್ವಂದ್ವಂ ದ್ರಷ್ಟುಮಿಚ್ಛಂತಿ ಶಂಕರಂ ।
ಆಜ್ಞಾಪಯ ಮಹಾದೇವ ದ್ರಷ್ಟುಂ ಲಿಂಗಂ ತವ ಪ್ರಭೋ ॥೨೬॥

ಇತಿ ತದ್ಗಿರಮಾಕರ್ಣ್ಯ ಮಹಾದೇವೋ ಮಹೇಶ್ವರಃ ।
ಉವಾಚ ತಂ ಮಹಾದೇವೋ ನಂದಿಕೇಶಂ ಪುರಃ ಸ್ಥಿತಂ ॥೨೭॥

---



ಬಂದಿರುವ ವಿಷಯವನ್ನು ವಿಜ್ಞಾಪಿಸಿ ಬರುವೆನೆಂದು ಹೇಳಿ, ನಂದಿಕೇಶ್ವರನು ಮಹೇಶನ ಬಳಿಗೈದಿ ವಿನಯದಿಂದ ಪ್ರಣಾಮಮಾಡಿ ಕೈಮುಗಿದು ಸ್ತುತಿಸಿ ನಾನು ಬಂದಿರುವ ವಿಷಯವನ್ನು ಹೀಗೆ ಮಹೇಶ್ವರನಿಗೆ ಅರುಹಿದನು. ॥೨೧-೨೨-೨೩॥

ದೇವಾದಿದೇವನಾದ ಮಹೇಶನೆ, ಸರ್ವಜ್ಞನಾದ್ದ ಚಂದ್ರಶೇಖರನೇ, ಚಂದ್ರಮೌಳೀಶ್ವರನೆನಿಸಿದ ಶಿವಲಿಂಗವನ್ನು ದರ್ಶನಮಾಡಿ ನಮಸ್ಕರಿಸಿ ಪೂಜೆಮಾಡುವ ಉದ್ದೇಶದಿಂದ ಇಲ್ಲಿಗೆ ಬಂದು ಸ್ಕಂದ, ಗಜವದನಾದಿ ಸಕಲ ಗಣಶ್ರೇಷ್ಠರು ಬಾಗಿಲಿನಲ್ಲಿ ಬಂದು ನಿಂತಿರುವರು. ಈ ದಿವಸ ಸೋಮವಾರ, ಆರಿದ್ರಾನಕ್ಷತ್ರ, ವ್ಯತೀಪಾತಗಳಿಂದ ಕೂಡಿದ ಚತುರ್ದಶೀ ತಿಥಿಯಾಗಿರುವುದರಿಂದ ಗಣಾಧಿಪತಿಗಳೆಲ್ಲರೂ ನಿನ್ನ ಪಾದಕಮಲಯುಗ್ಮವನ್ನು ದರ್ಶನಮಾಡಲು ಬಯಸುತ್ತಿರುವರು. ಶಂಕರನೆ, ದೇವತೋತ್ತಮನಾದ ಪ್ರಭುವೇ, ನಿನ್ನ ದಿವ್ಯಲಿಂಗ ವನ್ನು ಸಂದರ್ಶನಮಾಡಲು ಅವರಿಗೆ ಅಪ್ಪಣೆಕೊಡೆಂದು ನಂದಿಕೇಶ್ವರನು ಪ್ರಾರ್ಥಿಸಲು, ಆಗ ಮಹಾದೇವನು ಅವನ ಮಾತುಗಳನ್ನು ಕೇಳಿ ಮುಂದೆ ನಿಂತಿರುವ ನಂದಿಕೇಶನಿಗೆ ಹೀಗೆ ಅಪ್ಪಣೆಮಾಡಿದನು. ॥೨೪-೨೫-೨೬-೨೭॥

॥ ಈಶ್ವರ ಉವಾಚ ॥

ಪ್ರವೇಶ್ಯತಾಂ ಗಣಶ್ರೇಷ್ಠಾಃ ಸ್ಕಂದವಿಘ್ನೇಶ್ವರಾದಯಃ ।
ಪೂಜಯಂತು ಸಪರ್ಯಾಭಿರ್ಲಿಂಗಂ ಮೇ ಗಣಪೋತ್ತಮ ॥೨೮॥

ಚಂದ್ರಮೌಳೀಶ್ವರಂ ಹ್ಯೇತತ್ಸುರಾದರ್ಶಂ ಗಣೋತ್ತಮಾಃ ।
ಪಶ್ಯಂತು ಗಣಪಾಃ ಸರ್ವೇ ಪೂಜಯಂತು ಸಪರ್ಯಯಾ ॥೨೯॥

ಇತ್ಯುಕ್ತೋ ನಂದಿಕೇಶೋಽಥ ತದಾಸ್ಮಾನಪ್ರವೇಶಯತ್ ।
ಗತ್ವಾ ಗಣಾವಯಂ ಸರ್ವೇ ತತ್ರ ನತ್ವಾ ಮಹೇಶ್ವರಂ ॥೩೦॥

ದೇವೀಂ ಚ ನತ್ವಾ ಗತ್ವಾಥ ಸಾಂತರ್ಗೃಹಗತಂ ವಿಭೋಃ ।
ಗಜಾಸ್ಯಶ್ಚಾಪ್ಯಹಂ ವಿಪ್ರ ಭಸ್ಮರುದ್ರಾಕ್ಷಭೂಷಣಾಃ ॥೩೧॥

ಗತ್ವಾ ಶ್ರೀಚಂದ್ರಮೌಳೀಶಂ ಪೂಜಯಂತೋ ವ್ಯವಸ್ಥಿತಾಃ ॥೩೨॥

---

"ಎಲೈ ನಂದಿಕೇಶನೆ, ಕುಮಾರಸ್ವಾಮಿ, ವಿಘ್ನೇಶ್ವರನೇ ಮೊದಲಾದ ಗಣಾಧಿಪರೆಲ್ಲರನ್ನೂ ತಡೆಯದೆ ಒಳಗೆ ಬಿಡು. ಗಣಾಧಿಪನೆ, ಆ ಗಣಪತಿಗಳು ಸಕಲ ದೇವತೆಗಳಿಂದಲೂ ನೋಡಲಸಾಧ್ಯವಾದ ಈ ಚಂದ್ರಮೌಳೀಶ್ವರಲಿಂಗವನ್ನು ದರ್ಶನಮಾಡಿ ಪವಿತ್ರವಾದ ಈದಿನದಲ್ಲಿ ಎಲ್ಲರೂ ಪೂಜೆಮಾಡಲಿ. ॥೨೮-೨೯॥

ಎಂದು ಪರಮೇಶ್ವರನಿಂದ ಆಜ್ಞಾಪಿಸಲ್ಪಟ್ಟ ನಂದಿಕೇಶ್ವರನು, ಅನಂತರ ನಮ್ಮನ್ನು ಒಳಕ್ಕೆ ಬಿಟ್ಟನು. ಆಗ ಗಣಗಳೊಡಗೂಡಿದ ನಾವೆಲ್ಲರೂ ಒಳಹೊಕ್ಕು ಮಹೇಶ್ವರನಿಗೆ ನಮಸ್ಕಾರಮಾಡಿ, ದೇವಿಗೂ ನಮಿಸಿ, ಅನಂತರ ಅಂತರ್ಗೃಹ ಲ್ಲಿರುವ ದೇವಪೂಜ್ಯವಾದ ಚಂದ್ರಮೌಳೀಶ್ವರಲಿಂಗಕ್ಕೆ ನಾನೂ ಮತ್ತು ಗಣಾಧಿ ಪನೂ ಇತರ ಗಣಗಳೊಡನೆ ಭಸ್ಮರುದ್ರಾಕ್ಷಾಲಂಕೃತರಾಗಿ ಪೂಜೆಮಾಡಲು ಸಿದ್ಧ ರಾದೆವು. ॥೩೦-೩೧-೩೨॥

ಚಂದ್ರನಂತೆ ಮನೋಹರವಾದ ಕಾಂತಿಯುಳ್ಳ, ಗಡಿಗೆಗಳಲ್ಲಿ ತುಂಬಿದ ಹಸು ವಿನ ಹಾಲು, ಮೊಸರು, ತುಪ್ಪ ಮುಂತಾದ ಪಂಚಾಮೃತದ್ರವ್ಯಗಳಿಂದಲೂ, ದಿವ್ಯ ಚಂದನ, ಚಂದ್ರಖಂಡ ಮೊದಲಾದ ಸುಗಂಧಗಳಿಂದಲೂ, ಅಭಿಷೇಕ ಮತ್ತು ಲೇಪ ನಾದಿಗಳನ್ನು ಮಾಡಿ, ಬಿಲ್ವ, ತಾವರೆ, ಪಾರಿಜಾತ, ಹೊಸ ಕನ್ನೈದಿಲೆಹೂಗಳಿಂದ ಅಲಂಕರಿಸಿ ಧೂಪ, ದೀಪ, ನೈವೇದ್ಯಾದಿಗಳಿಂದಲೂ, ಸ್ತೋತ್ರದಿಂದಲೂ, ಕರತಾಡನ,

ಗವ್ಯೈಃ ಪಂಚಾಮೃತಾದ್ಯೈಃ ಶಶಿನಿಭಸುಘಟ್ಟೈರ್ದಿವ್ಯಪಾಟೀರಚಂದ್ರ-
ಸಾರೈಶ್ಚ ಸುಗಂಧೈರ್ಯರ್ಕ್ಷಕರ್ದಮ್ಯೈಃ (?) ॥೩೩॥

ಬಿಲ್ವಪಂಕಜಮಂದಾರ ನವನೀಲೋತ್ಪಲಾಂಬುಜೈಃ ।
ಧೂಪೈರ್ದೀಪೈಶ್ಚ ನೈವೇದ್ಯೈಃಸ್ತವೈಶ್ಚ ಕರತಾಡನೈಃ ॥೩೪॥

ನೀರಾಜನೈರ್ವೀಜನೈಶ್ಚ ಚಾಮರಚ್ಛತ್ರದಾಪನೈಃ ।
ಪ್ರದಕ್ಷಿಣನಮಸ್ಕಾರೈಃ ಶತರುದ್ರೀಯ ಸಂಸ್ತವೈಃ ॥೩೫॥

ರುದ್ರಾಣೀಗಣವೇಣೂನಾಂ ಸಂರಾವೈರ್ನೃತ್ತದರ್ಶನೈಃ ।
ಮೃದಂಗಮುರಜಾಢಕ್ಕಾಶಂಖದುಂದುಭಿವಾದನೈಃ ॥೩೬॥

ಏವಂ ಚತುರ್ಷು ಯಾಮೇಷು ಭೂತಾಯಾಮರ್ಚ್ಯ ಶಂಕರಂ ।
ಗಿರಿಜಾಂ ನಂದಿಭೃಂಗ್ಯಾದ್ಯಾ ವಯಂ ತತ್ರ ಮಹೇಶ್ವರಂ ॥೩೭॥

ಯಾಮಿನೀರಮಣೋತ್ತಂಸಂ ಕಾಮಿನೀಶೋಭಿತಾಂಗಕಂ ।
ಕ್ಷಣಪ್ರಾಯಾಂ ಮೇನಿರೇಽಥ ಕ್ಷಣದಾಂ ಗಣಪುಂಗವಾಃ ॥೩೮॥

ಚಂದ್ರಮೌಳೀಶ್ವರೇ ಲಿಂಗೇ ಗಣೈಃ ಪೂಜಾಂ ಕೃತಾಂ ಹರಃ ।
ವೀಕ್ಷನ್ಸಿಂಹಾಸನವರೇ ದೇವ್ಯಾಃತಿಷ್ಠತ್ಸ ಹರ್ಷತಃ ॥೩೯॥

---

ಪ್ರದಕ್ಷಿಣೆ, ನಮಸ್ಕಾರ, ಶತರುದ್ರೀಯಮಂತ್ರಸ್ತವ ಇವುಗಳಿಂದುಪಚರಿಸಿ, ಅನಂತರ ರುದ್ರಾಣೀದೇವತೆಗಳ ವೇಣುವಾದನ ಮತ್ತು ನಾಟ್ಯಪ್ರದರ್ಶನಗಳಿಂದಲೂ, ಮೃದಂಗ, ಮುರಜ, ಭೇರಿ, ಢಕ್ಕಾ, ಶಂಖ ಮತ್ತು ನಗಾರಿವಾದ್ಯಗಳಿಂದಲೂ ಆ ಮಹೇಶ್ವರಲಿಂಗವನ್ನು ಸೇವಿಸಿದೆವು. ||೩೩-೩೪-೩೫-೩೬||

ಹೀಗೆ ನಾಲ್ಕು ಜಾವಗಳಲ್ಲಿಯೂ ನಂದಿಭೃಂಗಿಗಳಾದಿಯಾದ ನಾವೆಲ್ಲರೂ ಆ ಪವಿತ್ರವಾದ ಚತುರ್ದಶಿಯದಿನ ಗಿರಿಜಾಸಮೇತನಾದ ಶಂಕರನನ್ನು ಪೂಜಿಸಿ, ಚಂದ್ರಶಿರೋಭೂಷಣನಾಗಿ ದೇವಿಯಿಂದ ಶೋಭಿಸುವ ಅವಯವವುಳ್ಳ ಆ ಮಹಾದೇವನ ಧ್ಯಾನ ಸೇವೆಯಿಂದಲೇ ಆ ರಾತ್ರಿಯನ್ನು ಒಂದುಕ್ಷಣಕಾಲದಂತೆ ಕಳೆದೆವು. ||೩೭-೩೮||

ಹೀಗೆ ಚಂದ್ರಮೌಳೀಶ್ವರಲಿಂಗದಲ್ಲಿ, ನಾನು ಸ್ಕಂದನೇ ಮೊದಲಾದ ಗಣಪ ಶ್ರೇಷ್ಠರಿಂದ ಮಾಡಲ್ಪಟ್ಟ ಪೂಜೆಯನ್ನು ನೋಡುತ್ತಾ, ಪರಮೇಶ್ವರನು ಪಾರ್ವತಿ

ಪಯಂ ಸ್ತವಾಮ ದೇವೇಶಂ ಚಂದ್ರಮೌಲೀಶ್ವರಂ ತದಾ ।
ತತ್ಸ್ತುತಿಂ ಶೃಣು ವಕ್ಷ್ಯಾಮಿ ಸಮಾಹಿತಮನಾ ಮುನೇ ॥೪೦॥

॥ ಗಣಾ ಊಚುಃ ॥

ಯಸ್ಮಿನ್ಜಗತ್ಸರ್ವಮಿದಂ ವಿಭಾತಿ
ಯಶ್ಚಾಪ್ಯನನ್ಯಃ ಸಕಲಪ್ರಪಂಚಾತ್ ।
ತಿಲೇಷು ತೈಲೋಪಮಮಾಸ್ಥಿತಂ ತ್ವಾಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೧॥

ಅಣೋರಣೀಯಾನ್ಮಹತೋ ಮಹೀಯಾ-
ನಾತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ ।
ತ್ವಾಂ ಸರ್ವಭೂತಸ್ಥಿತಮಾತ್ಮರೂಪಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೨॥

---

ಯೊಡನೆ ಶ್ರೇಷ್ಠವಾದ ಸಿಂಹಾಸನದ ಮೇಲೆ ಸಂತೋಷದಿಂದ ಮಂಡಿಸಿದ್ದನು. ಆಗ ಚಂದ್ರಮೌಳೀಶ್ವರನಾದ ದೇವತೋತ್ತಮನನ್ನು ನಾವು ಈ ರೀತಿ ಸ್ತೋತ್ರ ಮಾಡಿದೆವು. ಎಲೈ ಜೈಗೀಷವ್ಯಮುನಿಯೆ, ಆ ಸ್ತೋತ್ರವನ್ನು ಹೇಳುತ್ತೇನೆ ಸಾವಧಾನಚಿತ್ತದಿಂದ ಲಾಲಿಸೆಂದು ಸ್ಕಂದನು ಜೈಗೀಷವ್ಯನಿಗೆ ಹೀಗೆ ನುಡಿದನು. ॥೩೯-೪೦॥

"ಸಕಲ ಪ್ರಪಂಚವೂ ಯಾವನಲ್ಲಿ ಪ್ರಕಾಶಿಸುತ್ತಿರುವುದೋ, ಯಾವನು ನಿಜವಾಗಿಯೂ ಸರ್ವಪ್ರಪಂಚರೂಪಿಯಾದ್ದರಿಂದ ಸಕಲ ಪ್ರಪಂಚಕ್ಕಿಂತಲೂ ಬೇರೆಯವನಲ್ಲವೋ, ಎಳ್ಳಿನಲ್ಲಿರುವ ಎಣ್ಣೆಯಂತೆ ಈ ಸಕಲ ಚರಾಚರಾತ್ಮಕವಾದ ಪ್ರಪಂಚದಲ್ಲೂ ಅವ್ಯಕ್ತವಾಗಿ ಅಡಕವಾಗಿರುವ ಚಂದ್ರಮೌಳೀಶ್ವರನಾದ ಅಂಥ ನಿನ್ನನ್ನು ಸದಾ ಆಶ್ರಯಿಸುವೆವು. ॥೪೧॥

ಪರಮಾತ್ಮನು ಲೋಕದಲ್ಲಿ ಸಣ್ಣಪದಾರ್ಥವೆನಿಸಿದ ಪರಮಾಣುವಿಗಿಂತಲೂ ಸೂಕ್ಷ್ಮರೂಪದಲ್ಲಿರುವನು. ಅತಿಬೃಹತ್ತೆನಿಸಿದ ಆಕಾಶಾದಿಗಳಿಗಿಂತಲೂ ಅಧಿಕ ಪ್ರಮಾಣದಿಂದ ದೊಡ್ಡವನೆನಿಸಿರುವನು. ಇಂತಹ ಪರಮಾತ್ಮನಾಗಿ ಸರ್ವಪ್ರಾಣಿಗಳ ದಹರಾಕಾಶದಲ್ಲಿ ನೆಲಸಿರುವ ಚಂದ್ರಮೌಳೀಶ್ವರನೆನಿಸಿದ ನಿನ್ನನ್ನು ನಾವು ಸದಾ ಆಶ್ರಯಿಸುವೆವು. ॥೪೨॥

೪

ಯಃ ಸರ್ವಸಾಕ್ಷೀ ತಮಸಃ ಪರಸ್ತಾ-
ದ್ವಿಭಾತಿ ಸರ್ವಂ ಕಿಲ ಯಸ್ಯ ಭಾಸಾ ।
ತ್ವಮಾಗಮಾಂತೈರಪಿ ದುರ್ನಿರೂಪಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೩॥

ಪ್ರಮಾಣವಿಜ್ಞಾಯ ಶಿವಂ ಕದಾಚಿ-
ದ್ದುಃಖಸ್ಯ ನಾಂತಂ ಸಮುಪೈತಿ ಧೀರಃ ।
ತ್ವಾಂ ಸಚ್ಚಿದಾನಂದಮಯಂ ಪ್ರಶಾಂತಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೪॥

ಅಜಂ ಪುರಾಣಂ ಪುರುಷಂ ಮಹಾಂತ-
ಮನಶ್ವರಂ ವಾಙ್ಮನಸೋಽತಿದೂರಂ ।
ಜ್ಞಾನಾತ್ಮನಾಂ ಹೃದ್ಯವಭಾಸಮಾನಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೫॥

---

ಸಕಲ ಜಗತ್ತಿನಲ್ಲಿಯೂ ಸರ್ವವ್ಯಾಪಿಯಾಗಿ ಅಡಗಿ ಯಾವನು ಎಲ್ಲವನ್ನೂ ಸದಾ ನೋಡುತ್ತಿರುವನೋ, ಯಾವನು ಅಜ್ಞಾನಾದಿಗಳಿಗೆ ಬಹುದೂರನಾಗಿರುವನೋ ಯಾರ ಪ್ರಕಾಶದಿಂದ ಈ ಜಗತ್ತೆಲ್ಲವೂ ಬೆಳಗುತ್ತಿರುವುದೋ ಯಾರ ಸ್ವರೂಪವು ವೇದಾಂತಗಳಿಂದಲೂ ತಿಳಿಯಲಸಾಧ್ಯವಾಗಿರುವುದೋ, ಅಂತಹ ಶ್ರೀ ಚಂದ್ರ ಮೌಳೀಶ್ವರನಾದ ನಿನ್ನನ್ನು ಆಶ್ರಯಿಸುತ್ತೇವೆ. ಸಕಲ ಪ್ರಪಂಚವೂ ನಿನ್ನಧೀನವಾಗಿರುವುದರಿಂದ ನಾವೂ ನಿನಗೆ ಆಶ್ರಿತರೇ ಆಗಿರುವೆವು. ॥೪೩॥

ಯಾವಾಗಲೂ ಜ್ಞಾನಿಯಾದ ಮಾನವನು ನಿತ್ಯಶುದ್ಧಸಿದ್ಧಸ್ವರೂಪನೆನಿಸಿದ ಶಿವನ ಸ್ವರೂಪವನ್ನರಿಯದೇ ಎಂದಿಗೂ ದುಃಖದ ಅಂತವನ್ನು ಕಾಣಲಾರನು. ಸಚ್ಚಿದಾನಂದಸ್ವರೂಪನೂ, (ಸತ್ಯಜ್ಞಾನಾನಂದಸ್ವರೂಪನೂ) ಶಾಂತಸ್ವಭಾವವುಳ್ಳವನೂ ಚಂದ್ರಮೌಳೀಶ್ವರನೂ ಆದ ನಿನ್ನನ್ನು ನಾವು ಸರ್ವದಾ ಸೇವೆಮಾಡಿ ಧ್ಯಾನಿಸುತ್ತೇವೆ. ॥೪೪॥

ಉತ್ಪತ್ತಿರಹಿತನೂ, ಪುರಾಣಪುರುಷನೂ, ನಾಶವಿಲ್ಲದವನೂ, ವಾಕ್ಕು ಮತ್ತು ಮನಸ್ಸುಗಳಿಗೆ ಗೋಚರನಾಗದೆ ಕೇವಲ ಜ್ಞಾನದಿಂದ ಮಾತ್ರ ಊಹಿಸಲ್ಪ

ವದಂತ್ಯಮೀ ಯತ್ಪದಮೇವ ವೇದಾಃ
ಜ್ಞಾತೇ ತು ಯಸ್ಮಿನ್ಸಕಲಂ ವಿಬುದ್ಧಂ ।
ತ್ವಾಂ ಪ್ರತ್ಯಗಾತ್ಮಾನ ಮಚಿಂತ್ಯಶಕ್ತಿಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೬॥

ಯಂ ನಿರ್ವಿಕಲ್ಪೇನ ಸಮಾಧಿನೈವ
ತಪಸ್ವಿನಶ್ಚೇತಸಿ ವೀತರಾಗಾಃ ।
ಧ್ಯಾಯಂತಿ ತೇಜೋಮಯಮದ್ಭುತಂ ತ್ವಾಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೭॥

ತ್ರಿಲೋಚನಂ ಚಂದ್ರಕಲಾವತಂಸಂ
ಗಂಗಾತರಂಗೋಲ್ಲಸದುತ್ತಮಾಂಗಂ ।
ಸ್ಮೇರಾಸ್ಯಮಿಷ್ಟಪ್ರದಮಷ್ಟಮೂರ್ತಿಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೮॥

---

ಡುವವನೂ, ಜ್ಞಾನಿಗಳ ಮನಸ್ಸಿನಲ್ಲಿ ಮಾತ್ರ ನೈಜರೂಪದಿಂದ ಪ್ರಕಾಶಿಸುವವನೂ ಆದ ಶ್ರೀ ಚಂದ್ರಮೌಳೀಶ್ವರನನ್ನು ಆಶ್ರಯಿಸುತ್ತೇವೆ. ॥೪೫॥

ಯಾವ ಸ್ಥಾನವನ್ನೇ ಮೋಕ್ಷವೆಂದು ವೇದಗಳು ಸರ್ವದಾ ಸಾರುತ್ತಿರುವುವೋ, ಯಾವ ಒಂದು ವಸ್ತುವಿನ ತಿಳಿವಳಿಕೆಯಿಂದ ಸಮಸ್ತವೂ ಗೋಚರಿಸುತ್ತಿರುವುದೋ, ಯಾವ ದೇವನು ಬಹಿರಿಂದ್ರಿಯಗಳಿಗೆ ಗೋಚರನಾಗದೆ, ಜ್ಞಾನ ಚಕ್ಷುಸ್ಸಿಗೆ ಮಾತ್ರ ವಿಷಯನಾಗುವನೋ, ಅಂತಹ ಅಸಾಧ್ಯವಾದ ಶಕ್ತಿಯುಳ್ಳ ಶ್ರೀಚಂದ್ರಮೌಳೀಶ್ವರನಾದ ನಿನ್ನನ್ನು ನಾವು ಸರ್ವದಾ ಆಶ್ರಯಿಸುತ್ತೇವೆ. ॥೪೬॥

ನಿಷ್ಕಲ್ಮಷಚಿತ್ತರಾದ ತಪಸ್ವಿಗಳು ನಿರ್ವಿಕಲ್ಪಕಸಮಾಧಿಯಿಂದಲೇ ಯಾರನ್ನು ಸಾಕ್ಷಾತ್ಕರಿಸಿಕೊಳ್ಳುವರೋ, ಯಾರು ನಿಜವಾಗಿ ತೇಜೋಮಯನೂ ಅದ್ಭುತ ಶಕ್ತಿಯುಳ್ಳವನೂ ಆಗಿರುವನೋ, ಅಂತಹ ಚಂದ್ರಮೌಳೀಶ್ವರನಾದ ನಿನ್ನನ್ನು ಸದಾ ಆಶ್ರಯಿಸುತ್ತೇವೆ. ಮಹಾದೇವನೇ, ನೀನು ನಿಜವಾಗಿ ನಿರ್ಗುಣನೂ, ನಿರಾಕಾರನೂ, ನಿರ್ವಿಕಲ್ಪನೂ ಆಗಿದ್ದರೂ, ಉಪಾಧಿಭೇದದಿಂದ ಸಗುಣನೂ, ಸಾಕಾರನೂ, ಸವಿಕಲ್ಪನೂ ಆಗಿರುವೆ. ॥೪೭॥

ಸೂರ್ಯಚಂದ್ರಾಗ್ನಿರೂಪವಾದ ಮೂರು ಕಣ್ಣುಗಳುಳ್ಳವನೂ, ಅರ್ಧಚಂದ್ರನನ್ನೇ ಶಿರೋಭೂಷಣವನ್ನಾಗಿ ಉಳ್ಳವನೂ ಗಂಗಾನದಿಯ ಅಲೆಗಳಿಂದ ಶೋಭಿಸುತ್ತಿರುವ

ಅಪಾರಸಚ್ಚಿತ್ಸುಖವಾರಿರಾಶಿಂ
ಅನಾದಿಮಧ್ಯಾಂತಮನಂತರೂಪಂ ।
ತ್ರಿಲೋಚನಂ ನೀಲಗಲಂ ಪ್ರಶಾಂತಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೪೯॥

ಕೈಲಾಸಶೈಲೇಂದ್ರಶಿರಸ್ತಟೇಷು
ನಗೇಂದ್ರಪುತ್ರ್ಯಾ ಸಹ ಸಂವಸಂತಂ ।
ವಿಭೂತಿರುದ್ರಾಕ್ಷವಿಭೂಷಿತಾಂಗಂ
ಶ್ರೀಚಂದ್ರಮೌಳೀಶ್ವರಮಾಶ್ರಯಾಮಃ ॥೫೦॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಗಣಾನಂದವಚೋನುವೀಚೀ-
ಮಾಧ್ವೀಝರೀಭಾರತರೋರುಹರ್ಷಃ ।

---

ತಲೆಯುಳ್ಳವನೂ, ಮಂದಹಾಸದಿಂದ ಪ್ರಸನ್ನವಾದ ಮುಖವುಳ್ಳವನೂ, ಭಕ್ತರ ಇಷ್ಟಾರ್ಥವನ್ನು ಸಲ್ಲಿಸುವವನೂ, ಅಷ್ಟಮೂರ್ತಿಯೂ (ಪೃಥಿವಿ, ನೀರು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನರೂಪಗಳಾದ ಎಂಟು ಮೂರ್ತಿಗಳುಳ್ಳವನು) ಆದ ಚಂದ್ರಮೌಳೀಶ್ವರನನ್ನು ಸರ್ವದಾ ಧ್ಯಾನಿಸುತ್ತೇವೆ. ॥೪೮॥

ಅಪರಿಮಿತವಾದ ಸತ್ ಮತ್ತು ಚಿದ್ರೂಪಗಳಾದ ದುಃಖರಹಿತಗಳಾದ ಸುಖಗಳಿಗೆ ಸಮುದ್ರದಂತಿರುವವನೂ, ಆದಿಮಧ್ಯಾಂತಶೂನ್ಯನೂ, ಮೂರು ಕಣ್ಣುಗಳುಳ್ಳವನೂ, ನೀಲಕಂಠನೂ, ಶಾಂತಸ್ವಭಾವವುಳ್ಳವನೂ, ಆದ ಶ್ರೀಚಂದ್ರಮೌಳೀಶ್ವರ ಸ್ವಾಮಿಯನ್ನು ಸದಾ ಸೇವಿಸುತ್ತೇವೆ. ॥೪೯॥

ಅತ್ಯಂತ ಶ್ರೇಷ್ಠವಾದ ಕೈಲಾಸಪರ್ವತದ ಶಿಖರಭಾಗಗಳಲ್ಲಿ ಪರ್ವತರಾಜ ಕುಮಾರಿಯೊಡನೆ ಆನಂದದಿಂದ ವಾಸಮಾಡುವವನೂ, ವಿಭೂತಿ, ರುದ್ರಾಕ್ಷಗಳಿಂದ ಲಂಕೃತವಾದ ದೇಹವುಳ್ಳವನೂ ಆದ ಶ್ರೀಚಂದ್ರಮೌಳೀಶ್ವರನನ್ನು ಸರ್ವದಾ ಆಶ್ರಯಿಸುತ್ತೇವೆ." ॥೫೦॥

ಈ ರೀತಿಯಾಗಿ ಗಣಾಧಿಪರ ಆನಂದಪ್ರದವಾದ ವಾಕ್ಪ್ರವಾಹದ ಮಧುರವಾದ ಅಲೆಗಳ ಭಾರದಿಂದ ಹೆಚ್ಚು ಸಂತೋಷ ಹೊಂದಿದ, ಭಕ್ತರ ಪಾಪನಾಶಕನಾದ

ಹರಸ್ತದಾ ತಾಂ ಗಿರಿರಾಜಪುತ್ರೀಂ
ಧನ್ಯಾಂ ಸವಿತ್ರೀಂ ಜಗತಾಂ ಮಹೇಶಃ ॥೫೧॥

ತದಂತರೇ ಸಾ ಪ್ರಣತಾ ಮಹೇಶ-
ಪಾದಾಂಬುಜಂ ಸ್ವಾಂಜಲಿಪದ್ಮಕೋಶೈಃ ।
ಅಭ್ಯರ್ಚಯನ್ತ್ಯಾಪ್ರಣತಾಥ ನತ್ವಾ
ಮಹೇಶ್ವರಂ ಸಾನುನಯಾದ್ಬಭಾಣ ॥೫೨॥

ಇತ್ಥಂ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಶ್ರೀಚಂದ್ರಮೌಳೀಶ್ವರ ಸ್ತೋತ್ರವಿವರಣಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಮಹೇಶನು ತನ್ನ ಪಕ್ಕದಲ್ಲಿಯೇ ಕುಳಿತಿದ್ದ ಜಗತ್ಸೃಷ್ಟಿಕರ್ತಳೂ ಧನ್ಯಳೂ ಜಗನ್ಮಾತೆಯೂ ಆದ ಗಿರಿಜೆಯನ್ನು ಆಗ ಕಟಾಕ್ಷದಿಂದ ನೋಡಿದನು. ॥೫೧॥

ಹಾಗೆ ಜಗತ್ಪತಿಯ ದೃಷ್ಟಿಪಾತಕ್ಕೆ ಆಶ್ರಯಳಾದ ಆ ಪಾರ್ವತಿಯು ತನ್ನ ತಾವರೆಯ ಮೊಗ್ಗಿನಂತಿರುವ ಕೈಗಳನ್ನು ಜೋಡಿಸಿ, ಮಹೇಶ್ವರನ ಪಾದಕಮಲಕ್ಕೆ ನಮಸ್ಕಾರಮಾಡಿದಳು. ಹಾಗೆಯೇ ಮಹೇಶ್ವರನಿಗೆ ಪೂಜೆಮಾಡುತ್ತಾ ನಮಸ್ಕಾರ ಮಾಡಿ ದೇವಿಯು ಅನುನಯದಿಂದ ಮುಂದೆ ಹೇಳುವಂತೆ ಮಾತನಾಡಿದಳೆಂದು ಜೈಗೀಷವ್ಯಮಹರ್ಷಿಗೆ ಸ್ಕಂದಸ್ವಾಮಿಯು ಹೇಳಿದನು. ॥೫೨॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಶ್ರೀಚಂದ್ರಮೌಳೀಶ್ವರನ ಸ್ತೋತ್ರವಿವರಣೆಯೆಂಬ ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

### ದಶಮಾಂಶಪೂರ್ವಾರ್ಧೇ

## ಚತುಸ್ತ್ರಿಂಶೋಽಧ್ಯಾಯಃ

॥ ಶ್ರೀದೇವ್ಯುವಾಚ ॥

ದೇವದೇವ ಮಹಾದೇವ ಕರುಣಾವರುಣಾಲಯ ।
ಶರಣಂ ತೇ ಪ್ರಪನ್ನಾಹಂ ಕಾರಣಂ ಶರಣಂ ಸತಾಂ ॥೧॥

ಯಥಾವಿಧಾನಂ ಮೇ ಬ್ರೂಹಿ ಮಹಾಗೋಪ್ಯಮಪಿ ಪ್ರಭೋ ।
ಯದಿ ತೇ ಕರುಣಾ ಚಿತ್ತೇ ಮಯಿ ಶಂಭೋರುಣದ್ಧಿ ಚೇತ್ ॥೨॥

ವಿಸ್ತರಾತ್ತಸ್ಯ ಮಂತ್ರಸ್ಯಪ್ರಭಾವಂ ಕಥಯಾಧುನಾ ।
ನಾತಿಸಂಗ್ರಹವಿಸ್ತಾರನಿಸ್ತಾರಾಯ ಕೃಪಾಕರ ॥೩॥

---

## ಮೂವತ್ತನಾಲ್ಕನೆಯ ಅಧ್ಯಾಯ

ದೇವಾದಿದೇವನಾದ ಮಹೇಶನೇ, ದಯಾಸಾಗರನೆ, ಸಾಧುಗಳಿಗೆ ರಕ್ಷಕನಾದ ನಿನ್ನನ್ನು ನಾನು ಯಾವಾಗಲೂ ಮರೆಹೊಕ್ಕಿರುವೆನು. ಪ್ರಭುವೆ, ಅತ್ಯಂತ ರಹಸ್ಯವಾಗಿದ್ದರೂ ಕೂಡ ಪವಿತ್ರವಾದ ಶಿವಪಂಚಾಕ್ಷರಮಂತ್ರಮಹಿಮೆಯನ್ನೂ ಅದರ ಜಪವಿಧಾನವನ್ನೂ ನನಗೆ ಹೇಳು ; ಶಂಭುವೆ, ನಿನಗೆ ನನ್ನ ಮೇಲೆ ದಯೆಯಿರುವುದಾದರೆ ವಿಸ್ತಾರವಾಗಿರುವ ಆ ಮಂತ್ರದ ಪ್ರಭಾವವನ್ನು ಹೆಚ್ಚು ಸಂಗ್ರಹ ಅಥವಾ ಅತಿ ವಿಸ್ತಾರಗಳಿಲ್ಲದಂತೆ ಭಕ್ತರಿಗೆ ಮೋಕ್ಷವನ್ನು ಕರುಣಿಸಲೋಸುಗ ದಯಾರ್ಣವನಾದ ನೀನು ನನಗೆ ಉಪದೇಶಿಸು ಎಂದು ಪಾರ್ವತಿಯು ಮಹಾದೇವನನ್ನು ಪ್ರಶ್ನಿಸಿದಳು. ॥೧-೨-೩॥

ಇತ್ಥಂ ಗಿರಿಜಯಾ ಪೃಷ್ಟಸ್ತುಷ್ಟಸ್ತಾಂ ಪ್ರಾಹ ಶಂಕರಃ ।
ಅಂಭೋರುಹಾಕ್ಷೀಮಂಬಾಂ ತಾಮಭಿವೀಕ್ಷ್ಯ ಹಸನ್ನರಃ ॥೪॥

॥ ಶ್ರೀ ಈಶ್ವರ ಉವಾಚ ॥

ಪಂಚಾಕ್ಷರಸ್ಯ ಮಾಹಾತ್ಮ್ಯಂ ಕಲ್ಪಕೋಟಿಶತೈರಪಿ ।
ನ ಶಕ್ಯಂ ವಿಸ್ತರಾದ್ವಕ್ತುಂ ತಸ್ಮಾತ್ಸಂಕ್ಷೇಪತಃ ಶೃಣು ॥೫॥

ವೇದೇ ಶಿವಾಗಮೇ ಚಾಯಮುಭಯತ್ರ ಷಡಕ್ಷರಃ ।
ಮಂತ್ರಃ ಸ್ಥಿತಃ ಸದಾ ಮುಖ್ಯಃ ಲೋಕೇ ಪಂಚಾಕ್ಷರಃ ಸ್ಮೃತಃ ೬॥

ಸರ್ವಮಂತ್ರಾಧಿಕಶ್ಚಾಯಮೋಂಕಾರಾದ್ಯಃ ಷಡಕ್ಷರಃ ।
ಸರ್ವೇಷಾಂ ಶಿವಭಕ್ತಾನಾಮಶೇಷಾರ್ಥಪ್ರಸಾಧಕಃ ॥೭॥

ತದಲ್ಪಾಕ್ಷರಮರ್ಥಾಢ್ಯಂ ವೇದಸಾರಂ ವಿಮುಕ್ತಿದಂ ।
ಆಜ್ಞಾಸಿದ್ಧಮಸಂದಿಗ್ಧಂ ವಾಕ್ಯಮೇತಚ್ಛಿವಾತ್ಮಕಂ ॥೮॥

---

ಹೀಗೆ ಪರ್ವತರಾಜಕುಮಾರಿಯು ಭಕ್ತಿ ಮತ್ತು ಸಂತೋಷದಿಂದ ಪ್ರಶ್ನಿಸಲು ಅದರಿಂದ ಸಂತುಷ್ಟನಾದ ಶಂಕರನು ತಾವರೆಗಣ್ಣುಳ್ಳ ಆ ಜಗದಂಬಿಕೆಯನ್ನು ನೋಡಿ ನಗುತ್ತಾ ಇಂತೆಂದನು. ॥೪॥

ದೇವಿಯೇ ಕೇಳು, ಈ ಪಂಚಾಕ್ಷರಮಂತ್ರಮಹಿಮೆಯನ್ನು ನೂರುಕೋಟಿ ಕಲ್ಪಗಳಾದರೂ ವಿಸ್ತಾರವಾಗಿ ವರ್ಣಿಸಲು ಸಾಧ್ಯವಿಲ್ಲವಾದ್ದರಿಂದ ಈಗ ಸಂಕ್ಷೇಪವಾಗಿ ಹೇಳುವೆನು ಕೇಳು. ವೇದ ಮತ್ತು ಶೈವಾಗಮಗಳೆರಡರಲ್ಲಿಯೂ ಈ ಮಂತ್ರವು ಆರಕ್ಷರಗಳುಳ್ಳದ್ದೆಂದು ಹೇಳಿದ್ದರೂ ಲೋಕದಲ್ಲಿ ಮಾತ್ರ ಈ ಮಂತ್ರವು ಯಾವಾಗಲೂ ಐದಕ್ಷರಗಳಿಂದ ಕೂಡಿರುವುದೆಂದು ಹೇಳಲ್ಪಟ್ಟಿದೆ. ॥೫-೬॥

ಓಂಕಾರಪೂರ್ವಕವಾದ 'ನಮಃ ಶಿವಾಯ' ಎಂಬ ಈ ಷಡಕ್ಷರಮಂತ್ರವು ಎಲ್ಲಾ ಮಂತ್ರಗಳಿಗಿಂತಲೂ ಶ್ರೇಷ್ಠವೆನಿಸಿರುವುದು. ಸಮಸ್ತ ಶಾಂಭವರಿಗೂ ಸಕಲ ಪ್ರಯೋಜನಗಳನ್ನೂ ಒದಗಿಸಿಕೊಡಬಲ್ಲುದು. ಸ್ವಲ್ಪ ಸಂಖ್ಯೆಯ ಅಕ್ಷರಗಳಿಂದ ಕೂಡಿ ಅಪಾರಪ್ರಯೋಜನಪ್ರದವಾಗಿ ವೇದಸಾರವೂ, ಮೋಕ್ಷಪ್ರದವೂ, ಆಜ್ಞಾಮಾತ್ರದಿಂದ ಸಕಲ ಕಾರ್ಯಸಿದ್ಧಿಯನ್ನು ಸಂದೇಹವಿಲ್ಲದೇ ಉಂಟುಮಾಡಿಕೊಡುವುದೂ ಆದ ಈ ಮಂತ್ರವು ಶಿವಸ್ವರೂಪವೇ ಆಗಿರುವುದು. ॥೭-೮॥

ನಾನಾಸಿದ್ಧಿಯುತಂ ದಿವ್ಯಂ ಲೋಕಚಿತ್ತಾನುರಂಜನಂ ।
ಸುನಿಶ್ಚಿತಾರ್ಥಗಂಭೀರಂ ವಾಕ್ಯಂ ತತ್ಪರಮೇಶ್ವರಂ ॥೯॥

ಮಂತ್ರಂ ಸುಖಮುಖೋಚ್ಚಾರ್ಯಮಶೇಷಾರ್ಥಪ್ರಸಿದ್ಧಯೇ ।
ಪ್ರಾಹೋಂ ನಮಃ ಶಿವಾಯೇತಿ ಸರ್ವಜ್ಞಃ ಸರ್ವದೇಹಿನಾಂ ॥೧೦॥

ತದ್ಬೀಜಂ ಸರ್ವವಿದ್ಯಾನಾಂ ಮಂತ್ರಮಾದ್ಯಂ ಷಡಕ್ಷರಂ ।
ಅತಿಸೂಕ್ಷ್ಮಂ ಮಹಾರ್ಥಂ ಚ ಜ್ಞೇಯಂ ತದ್ವಟಬೀಜವತ್ ॥೧೧॥

ದೇವೋ ಗುಣತ್ರಯಾತೀತಃ ಸರ್ವಜ್ಞಃ ಸರ್ವಕೃತ್ಪ್ರಭುಃ ।
ಓಮಿತ್ಯೇಕಾಕ್ಷರೇ ಮಂತ್ರೇ ಸ್ಥಿತಃ ಸರ್ವಗತಃ ಶಿವಃ ॥೧೨॥

ಈಶಾನಾದ್ಯಾನಿ ಸೂಕ್ಷ್ಮಾಣಿ ಬ್ರಹ್ಮಾಣ್ಯೇಕಾಕ್ಷರಾಣಿ ಚ ।
ಮಂತ್ರೋಂ ನಮಃ ಶಿವಾಯೇತಿ ಸುಸ್ಥಿತಾನಿ ಯಥಾಕ್ರಮಂ ॥೧೩॥

---

ಅನೇಕ ಸಿದ್ಧಿಗಳಿಂದ ಯುಕ್ತವೂ, ದಿವ್ಯವೂ, ಜನಗಳ ಮನಸ್ಸನ್ನು ರಂಜನೆ ಮಾಡುವುದೂ, ಸಂಕಲ್ಪಿಸಿಕೊಂಡ ಅಭೀಷ್ಟವನ್ನು ಗಂಭೀರವಾಗಿ ನಡೆಸಿಕೊಡುವುದೂ, ಪರಮೇಶ್ವರಸ್ವರೂಪವೂ ಸುಖವಾಗಿ ಉಚ್ಚರಿಸಲು ಸಾಧ್ಯವೂ ಆಗಿರುವ ಈ ' ಓಂ ನಮಃ ಶಿವಾಯ ' ಎಂಬ ಮಂತ್ರವನ್ನು ಸರ್ವಜ್ಞನಾದ ನಾನು(ಮಹಾದೇವನು) ಸಮಸ್ತ ಭಕ್ತರ ಮನೋರಥಸಿದ್ಧಿಗೂ ಸಕಲ ಪ್ರಾಣಿಗಳ ಉದ್ಧಾರಕ್ಕಾಗಿಯೂ ಹೇಳಿರುವೆನು. ॥೯-೧೦॥

ಆ ಷಡಕ್ಷರಮಂತ್ರವು ಸಕಲ ವಿದ್ಯೆಗಳಿಗೂ ಆದಿಯೂ ಮೂಲಕಾರಣವೂ ಆಗಿದೆ. ಆಲದ ಬೀಜದಂತೆ ಅತಿ ಸೂಕ್ಷ್ಮವಾಗಿದ್ದರೂ ಬಹ್ವರ್ಥಪ್ರತಿಪಾದಕವಾದದ್ದು. ಸತ್ವ ರಜ ಸ್ತಮೋಗುಣಗಳನ್ನು ಮೀರಿ, ಸರ್ವಜ್ಞನೂ, ಸಕಲ ಜಗತ್ಸೃಷ್ಟಿ ಕರ್ತನೂ, ಪ್ರಭುವೂ, ಸರ್ವವ್ಯಾಪಿಯೂ ಆದ ಪರಶಿವನು ' ಓಮ್ ' ಎಂಬ ಪ್ರಣವಾಕ್ಷರದ ಮಂತ್ರದಲ್ಲಿ ಸರ್ವದಾ ನೆಲಸಿರುವನು. ॥೧೧-೧೨॥

ಈಶಾನಸ್ಸರ್ವವಿದ್ಯಾನಾಂ ಮೊದಲಾದ ಸೂಕ್ಷ್ಮವಾದ ಪಂಚಬ್ರಹ್ಮಮಂತ್ರಗಳೂ ಸಹ ' ಓಂ ನಮಃ ಶಿವಾಯ ' ಎಂಬ (ಮಂತ್ರದಲ್ಲಿ) ಪರಬ್ರಹ್ಮನಲ್ಲಿ ಕ್ರಮವಾಗಿ ನೆಲಸಿರುವುವು. ಷಡಕ್ಷರಮಂತ್ರದಲ್ಲಿ ಪೃಥಿವ್ಯಪ್ತೇಜೋವಾಯುರಾಕಾಶರೂಪ

ಮಂತ್ರೇ ಷಡಕ್ಷರೇ ಸೂಕ್ಷ್ಮಃ ಪಂಚಬ್ರಹ್ಮತನುಃ ಶಿವಃ ।
ವಾಚ್ಯವಾಚಕಭಾವೇನ ಸ್ಥಿತಃ ಸಾಕ್ಷಾತ್ಸ್ವಭಾವತಃ ॥೧೪॥

ವಾಚ್ಯಃ ಶಿವಃ ಪ್ರಮೇಯಾತ್ಮಾ ಮಂತ್ರಸ್ತದ್ವಾಚಕಃ ಸ್ಮೃತಃ ।
ವಾಚ್ಯವಾಚಕಭಾವೋಽಯಮನಾದಿಃ ಸುಸ್ಥಿತಸ್ತಯೋಃ ॥೧೫॥

ಯಥಾನಾದಿಪ್ರವೃತ್ತೋಽಯಂ ಘೋರಃ ಸಂಸಾರಸಾಗರಃ ।
ಶಿವೋಽಪಿ ಹಿ ತಥಾನಾದಿಃ ಸಂಸಾರಾನ್ಮೋಚಕಃ ಸ್ಥಿತಃ ॥೧೬॥

ವ್ಯಾಧೀನಾಂ ಭೇಷಜಂ ಯದ್ವತ್ಪ್ರತಿಪಕ್ಷಃ ಸ್ವಭಾವತಃ ।
ತದ್ವತ್ಸಂಸಾರದೋಷಾಣಾಂ ಪ್ರತಿಪಕ್ಷಸ್ಥಿತಃ ಶಿವಃ ॥೧೭॥

ಅಸತ್ಯಸ್ಮಿನ್ಜಗನ್ನಾಥೇ ತಮೋಭೂತಮಿದಂ ಭವೇತ್ ।
ಆದಿತ್ಯೇನ ಯಥಾಹೀನಂ ನಿರಾಲೋಕಮಿದಂ ಜಗತ್ ॥೧೮॥

---

ವಾದ ದೇಹಗಳುಳ್ಳ ಪರಶಿವನು ಸೂಕ್ಷ್ಮನಾಗಿ ವಾಚ್ಯವಾಚಕಭಾವದಿಂದ ಸ್ವಭಾವವಾಗಿಯೇ ಇದರಲ್ಲಿ ಸಾಕ್ಷಾತ್ತಾಗಿ ನೆಲಸಿರುವನು. ॥೧೩-೧೪॥

ಪ್ರಮೇಯ (ಜ್ಞಾನ) ಸ್ವರೂಪನಾದ ಶಿವನೇ ವಾಚ್ಯನು (ಮಂತ್ರಬೋಧ್ಯಾರ್ಥಕನು) ಮಂತ್ರವು ಈ ಅರ್ಥವನ್ನು ತಿಳಿಸುವ ವಾಚಕಶಬ್ದವಾಗಿರುವುದು. ಇವೆರಡಕ್ಕೂ ಅನಾದಿಯಾದ ವಾಚ್ಯವಾಚಕಭಾವವೇರ್ಪಟ್ಟಿರುವುದು. ಈ ಭಯಂಕರವಾದ ಸಂಸಾರಾರ್ಣವವು ಅನಾದಿಯಾಗಿ 'ಪ್ರವೃತ್ತವಾಗಿರುವಂತೆ ಈ ಸಂಸಾರದಿಂದ ಜೀವರಾಶಿಗಳನ್ನುದ್ಧಾರಮಾಡುವ ಶಿವನೂ ಅನಾದಿಯಾಗಿಯೇ ಕಾಣುವನು. ॥೧೫-೧೬॥

ರೋಗಗಳಿಗೆಲ್ಲಾ ಸ್ವಭಾವವಾಗಿಯೇ ಔಷಧಿಯು ಪ್ರತಿಪಕ್ಷವಾಗಿರುವಂತೆ ಈ ಸಾಂಸಾರಿಕದೋಷಗಳಿಗೆಲ್ಲಾ ಶಿವನು ಪ್ರತಿಪಕ್ಷನಾಗಿದ್ದಾನೆ. ಸೂರ್ಯನಿಲ್ಲದ ಜಗತ್ತು ಬೆಳಕಿಲ್ಲದೆ ಕತ್ತಲಾಗಿರುವಂತೆ ಈ ಜಗದೊಡೆಯನಿಲ್ಲದೆ ಇದ್ದರೆ ಈ ಪ್ರಪಂಚವೆಲ್ಲವೂ ಅಜ್ಞಾನಮಯವಾಗಿರುತ್ತಿತ್ತು. ॥೧೭-೧೮॥

ಅಭಾವಾದೀಶ್ವರಸ್ಯೇಯಂ ಜಗತ್ಸೃಷ್ಟಿಃ ಕಥಂ ಭವೇತ್ ।
ಅಚೇತನತ್ವಾತ್ಪ್ರಕೃತೇರಜ್ಞತ್ವಾದೀಶ್ವರಸ್ಯ ಚ ॥೧೯॥

ಪ್ರಧಾನಪರಮಾಣ್ವಾದಿ ಯಾವತ್ಕಿಂಚಿದಚೇತನಂ ।
ಮತ್ತತ್ಕರ್ತೃ ಸ್ವಯಂ ದೃಷ್ಟಂ ಬುದ್ಧಿಮತ್ಕಾರಣಂ ವಿನಾ ॥೨೦॥

ಧರ್ಮೋ ಧರ್ಮೋಪದೇಶಶ್ಚ ಬಂಧಮೋಕ್ಷವಿಚಾರಣಾ ।
ನ ಸಾರ್ವಜ್ಞಂ ವಿನಾ ಪುಂಸಾಂ ಆದಿಸರ್ಗೇ ಪ್ರಸಿದ್ಧ್ಯತಿ ॥೨೧॥

ವೈದ್ಯಂ ವಿನಾ ನಿರಾನಂದಾಃ ಕ್ಲಿಶ್ಯಂತೇ ರೋಗಿಣೋ ಯಥಾ ।
ಶಿವಂ ವಿನಾ ನಿರಾನಂದಂ ಕ್ಲಿಶ್ಯತೇ ಹಿ ಜಗತ್ತಥಾ ॥೨೨॥

ತಸ್ಮಾದನಾದಿಃ ಸರ್ವಜ್ಞಃ ಪರಿಪೂರ್ಣಃ ಸದಾಶಿವಃ ।
ಅಸ್ತಿ ನಾಥಃ ಪರಿತ್ರಾತಾ ಪುಂಸಾಂ ಸಂಸಾರಬಂಧನಾತ್ ॥೨೩॥

ಆದಿಮಧ್ಯಾಂತನಿರ್ಮುಕ್ತಃ ಸ್ವಭಾವವಿಮಲಃ ಪ್ರಭುಃ ।
ಸರ್ವಜ್ಞಃ ಪರಿಪೂರ್ಣಶ್ಚ ಶಿವೋ ಜ್ಞೇಯಃ ಶಿವಾಗಮೇ ॥೨೪॥

---

ಪ್ರಕೃತಿಯೆಲ್ಲವೂ ಅಚೇತನವಾಗಿ ಜಡಸ್ವರೂಪವಾಗಿರುವುದರಿಂದ ಈಶ್ವರ ನಿಲ್ಲದೆ ಪ್ರಪಂಚಸೃಷ್ಟಿಯು ಹೇಗಾದೀತು ? ಪ್ರಧಾನ, ಪರಮಾಣು ಮುಂತಾದ ಅಚೇತನಪದಾರ್ಥಗಳೆಲ್ಲವೂ ಬುದ್ಧಿವಿಶಿಷ್ಟವಾದ ಕರ್ತೃರೂಪಕಾರಣವಿಲ್ಲದೇ ಇರುವುದು ಜಗತ್ತಿನಲ್ಲಿ ಕಾಣುವುದೇ ಇಲ್ಲ. ॥೧೯-೨೦॥

ಧರ್ಮ, ಧರ್ಮವನ್ನು ಉಪದೇಶಮಾಡುವಿಕೆ, ಜನನಮರಣರೂಪವಾದ ಸಂಸಾರಬಂಧನ, ಮೋಕ್ಷ, ಇವುಗಳ ವಿಚಾರವು ಸರ್ವಜ್ಞವ್ಯಕ್ತಿಯೊಂದಿಲ್ಲದೇ ಪ್ರಪಂಚದ ಆದಿಸೃಷ್ಟಿಯಲ್ಲಿ ಮಾನವರಿಗೆ ಎಂದಿಗೂ ಸಿದ್ಧಿಸುವುದಿಲ್ಲ. ವೈದ್ಯನಿಲ್ಲದಿದ್ದಲ್ಲಿ ರೋಗಿಗಳು ಆನಂದವಿಲ್ಲದೇ ಕ್ಲೇಶಪಡುವಂತೆ, ಶಿವನಿಲ್ಲದ ಈ ಪ್ರಪಂಚವೆಲ್ಲವೂ ಆನಂದರಹಿತವಾಗಿ ದುಃಖಕ್ಕೊಳಗಾಗುತ್ತದೆ. ಆದ್ದರಿಂದ ಅನಾದಿಯೂ, ಸರ್ವಜ್ಞನೂ, ಪೂರ್ಣಸ್ವರೂಪನೂ, ಮಾನವರನ್ನು ಈ ಸಂಸಾರಬಂಧನದಿಂದ ಕಾಪಾಡುವವನೂ ಆದ ಸದಾಶಿವನಾಮಕನಾದ ಸ್ವಾಮಿಯೊಬ್ಬನಿರುವನು. ॥೨೨-೨೩॥

ಶಿವಾಗಮಶಾಸ್ತ್ರದಲ್ಲಿ ಹೇಳಿರುವಂತೆ ಆದಿಮಧ್ಯಾಂತರಹಿತನೂ, ಸ್ವಭಾವವಾಗಿ ನಿರ್ಮಲನೂ, ಸರ್ವಜ್ಞನೂ, ಪರಿಪೂರ್ಣನೂ ಆದ ಶಿವನು ಸರ್ವಸಮರ್ಥನೆಂದು

ತಸ್ಯಾಭಿಧಾನಮಂತ್ರೋಽಯಂ ಅಭಿಧೇಯಸ್ತತಃ ಸ್ಮೃತಃ ।
ಅಭಿಧಾನಾಭಿಧೇಯತ್ವಾನ್ಮಂತ್ರಾರ್ಥಃ ಪರಮಃ ಶಿವಃ ॥೨೫॥

ಏತಾವದ್ಧಿ ಶಿವಜ್ಞಾನಂ ಏತಾವದ್ಧಿ ಪರಂ ಪದಂ ।
ತದೋಂ ನಮಃ ಶಿವಾಯೇತಿ ಶಿವವಾಕ್ಯಂ ಷಡಕ್ಷರಂ ॥೨೬॥

ವಿಧಿವಾಕ್ಯಮಿದಂ ಶೈವಂ ನಾರ್ಥವಾದಃ ಶಿವಾತ್ಮಕಂ ।
ಯಃ ಸರ್ವಜ್ಞಃ ಸುಸಂಪೂರ್ಣಃ ಸ್ವಭಾವವಿಮಲಃ ಶಿವಃ ॥೨೭॥

ಲೋಕಾನುಗ್ರಹಕರ್ತಾ ಯಃ ಸ ಮೃಷಾರ್ಥಃ ಕಥಂ ಭವೇತ್ ।
ಯದ್ಯಥಾವಸ್ಥಿತೋ ವಸ್ತು ಗುಣದೋಷೈಃ ಸ್ವಭಾವತಃ ॥೨೮॥

ಯಾವತ್ಫಲಂ ಚ ಯತ್ಪುಣ್ಯಂ ಸರ್ವಜ್ಞಸ್ತಂ ತಥಾವದೇತ್ ।
ರಾಗಾಜ್ಞಾನಾದಿಭಿರ್ದೋಷೈರ್ಗ್ರಸ್ತತ್ವಾದನೃತಂ ವದೇತ್ ॥೨೯॥

---

ತಿಳಿಯಬೇಕು. ಈ ಪಂಚಾಕ್ಷರ ಮಂತ್ರವು ಅಂತಹ ಶಿವನನ್ನು ತಿಳಿಸುವ ಮಂತ್ರವಾಗಿದೆ. ಇದರಿಂದಲೇ ಶಿವನು ವ್ಯಕ್ತವಾಗುವನು. ಆ ಪರಶಿವನೇ ಹೀಗೆ ಅಭಿಧಾನ, ಅಭಿಧೇಯರೂಪದಿಂದ ತೋರುವನು. ಈ ಮಂತ್ರದ ಅರ್ಥವೇ ಪರಶಿವನೆಂದು ಭಾವಿಸಬೇಕು. ॥೨೪-೨೫॥

'ಓಂ ನಮಃ ಶಿವಾಯ' ಎಂಬ ಷಡಕ್ಷರಪ್ರತಿಪಾದ್ಯವಾದ ಮಂತ್ರಾರ್ಥವೇ ಶಿವಜ್ಞಾನವು. ಇದೇ ಪರಮಪದವೆನಿಸಿದ ಮೋಕ್ಷಪ್ರಾಪ್ತಿಸಾಧನವು. ಇದು ವಿಧಿವಾಕ್ಯವು. ಶಿವಾತ್ಮಕವಾದ ಈ ಶಿವಮಂತ್ರವನ್ನು ಅರ್ಥವಾದವೆಂದು ಭಾವಿಸಬಾರದು. ಸರ್ವಜ್ಞನೂ, ಪೂರ್ಣರೂಪನೂ, ಸ್ವಭಾವಶುದ್ಧನೂ ಆದ ಪರಶಿವನು ; ॥೨೬-೨೭॥

ಲೋಕಗಳ ನಿಜವಾದ ರಕ್ಷಕನಾಗಿರುವಾಗ ಸುಳ್ಳರ್ಥವುಳ್ಳವನು ಹೇಗೆ ಆದಾನು? ಯಾವ ವಸ್ತುವಾದರೂ ಸ್ವಭಾವವಾಗಿ ಗುಣದೋಷಗಳಿಂದ ಯುಕ್ತವಾಗಿರುವುದರಿಂದ ತತ್ತದನುಗುಣವಾದ ಪುಣ್ಯಪಾಪರೂಪವಾದ ಫಲವನ್ನು ಅದು ಹೊಂದುತ್ತದೆ. ಸರ್ವಜ್ಞನು ಮಾತ್ರ ಅದನ್ನರಿತು ಫಲಾಫಲಗಳನ್ನು ನಿರ್ಣಯಿಸುವನು. ರಾಗ, (ಇಚ್ಛೆ) ಅಜ್ಞಾನವೇಮುಂತಾದ ದೋಷಗಳಿಂದ ಪೂರ್ಣವಾಗಿರುವವನು, ಸುಳ್ಳಾಡುವನು. ಈ ರಾಗದ್ವೇಷಾದಿಗಳು ಈಶ್ವರನಲ್ಲಿಲ್ಲವಾದುದರಿಂದ ಅವನು ಹೇಗೆ ಮಿಥ್ಯಾವಾದಿಯಾದಾನು? ॥೨೮-೨೯॥

ತೇ ಚೇಶ್ವರೇ ನ ವಿದ್ಯಂತೇ ಬ್ರೂಯಾತ್ಸ ಕಥಮನ್ಯಥಾ ।
ಅಜ್ಞಾತಾಶೇಷದೋಷೇಣ ಸರ್ವಜ್ಞೇನ ಶಿವೇನ ಯತ್ ॥೩೦॥

ಪ್ರಣೀತಮಮಲಂ ವಾಕ್ಯಂ ತತ್ಪ್ರಮಾಣಂ ನ ಸಂಶಯಃ ।
ತಸ್ಮಾದೀಶ್ವರವಾಕ್ಯಾನಿ ಶ್ರದ್ಧೇಯಾನಿ ವಿಪಶ್ಚಿತಾ ॥೩೧॥

ಯಥಾರ್ಥಂ ಪುಣ್ಯಪಾಪೇಷು ತದಶ್ರದ್ಧೋ ವ್ರಜತ್ಯಧಃ ।
ಸ್ವರ್ಗಾಪವರ್ಗಸಿದ್ಧ್ಯರ್ಥಂ ಭಾಷಿತಂ ಯತ್ಸುಶೋಭನಂ ॥೩೨॥

ವಾಕ್ಯಂ ಮುನಿವರೈಃ ಶಾಂತೈಸ್ತದ್ವಿಜ್ಞೇಯಂ ಸುಭಾಷಿತಂ ।
ರಾಗದ್ವೇಷಾತ್ಮಕಂ ಕ್ರೋಧ ಕಾಮತೃಷ್ಣಾನುಸಾರಿ ಯತ್ ॥೩೩॥

ವಾಕ್ಯಂ ನಿರಯಹೇತುತ್ವಾತ್ತದ್ದುರ್ಭಾಷಿತ ಮುಚ್ಯತೇ ।
ಸಂಸ್ಕೃತೇನಾಪಿ ಕಿಂ ತೇನ ಮೃದುನಾ ಲಾಲಿತೇನ ವಾ ॥೩೪॥

ಅವಿದ್ಯಾರಾಗವಾಕ್ಯೇನ ಸಂಸಾರಕ್ಲೇಶಹೇತುನಾ ।
ಯಚ್ಛ್ರುತ್ವಾ ಜಾಯತೇಽಶ್ರದ್ಧಾರಾಗಾದೀನಾಂ ಚ ಸಂಕ್ಷಯಃ ॥೩೫॥

---

ಯಾವ ದೋಷಕ್ಕೂ ಎಡೆಯೇ ಇಲ್ಲದ ಸರ್ವಜ್ಞನಾದ ಶಂಕರನಿಂದ ನಿರ್ಮಿತವಾದ ಪವಿತ್ರವಾದ ವಾಕ್ಯವು ಪ್ರಮಾಣವೆಂಬುದರಲ್ಲಿ ಸಂಶಯವೇ ಇಲ್ಲ. ಆದ್ದರಿಂದ ವಿದ್ವಾಂಸನಾದವನು ಈಶ್ವರನ ವಾಕ್ಯಗಳನ್ನು ನಂಬಬೇಕು. ಪುಣ್ಯಪಾಪಗಳಲ್ಲಿ ನಿಜವಾಗಿ ನಂಬಿಕೆಯಿಡದವನು ನರಕ ಹೊಂದುವುದರಲ್ಲಿ ಸಂದೇಹವಿಲ್ಲ. ॥೩೦-೩೧॥

ಸ್ವರ್ಗ ಮೋಕ್ಷಗಳ ಸಿದ್ಧಿಗಾಗಿ ಶಾಂತರಾದ ಮುನಿಪುಂಗವರು ಅನುಭವದಿಂದ ಆಡಿರುವ ಮಂಗಳಕರವಾದ ವಾಕ್ಯವನ್ನೇ ಸುಭಾಷಿತವೆಂದು ತಿಳಿಯಬೇಕು. ಕೋಪ, ಕಾಮ, ತೃಷ್ಣಾ (ಅತ್ಯಾಸೆ) ಇವುಗಳಿಗನುಸಾರವಾಗಿ ರಾಗದ್ವೇಷಸ್ವರೂಪವಾಗಿರುವ ವಾಕ್ಯವು ನರಕಕಾರಣವಾಗಿರುವುದರಿಂದ ಅದು ದುರ್ಭಾಷಿತವೆನಿಸುವುದು. ॥೩೨-೩೩॥

ಸಂಸಾರಕ್ಲೇಶಗಳಿಗೆ ಕಾರಣವಾದ ಅಜ್ಞಾನವುಳ್ಳವರಿಗೆ, ರಾಗಪೂರ್ಣವಾದ ವಾಕ್ಯವು ಮೃದುವೂ, ಲಲಿತವೂ, ಸುಸಂಸ್ಕೃತವೂ ಆಗಿದ್ದರೂ ಅದರಿಂದೇನು ಪ್ರಯೋಜನ; ಶ್ರವಣಮಾಡಿದ ಮಾತ್ರದಿಂದ ಅಪನಂಬಿಕೆ, ರಾಗ, ದ್ವೇಷವೇ ಮೊದಲಾದವುಗಳ ನಾಶವಾಗುವ ವಾಕ್ಯವು ವಿರೂಪವೇ ಆಗಿದ್ದರೂ ಅದು ತುಂಬಾ

ವಿರೂಪಮಪಿ ತದ್ವಾಕ್ಯಂ ವಿಜ್ಞೇಯಮತಿಶೋಭನಂ ।
ಬಹುತ್ವೇನಾಪಿ ಮಂತ್ರಾಣಾಂ ಸರ್ವಜ್ಞೇನ ಶಿವೇನ ಯತ್ ॥೩೬॥

ಪ್ರಣೀತಮಮಲಂ ಮಂತ್ರಂ ನ ತೇನ ಸದೃಶಂ ಕ್ವಚಿತ್ ।
ಸಪ್ತಕೋಟಿಮಹಾಮಂತ್ರೈರುಪಮಂತ್ರೈರನೇಕಧಾ ॥೩೭॥

ಮಂತ್ರಃ ಷಡಕ್ಷರೋ ಭಿನ್ನಃ ಸೂತ್ರವೃತ್ತ್ಯಾತ್ಮನಾ ಯಥಾ ।
ಶಿವಜ್ಞಾನಾನಿ ಯಾವಂತಿ ವಿದ್ಯಾಸ್ಥಾನಾನಿ ಯಾನಿ ಚ ॥೩೮॥

ಷಡಕ್ಷರಸ್ಯ ಮಂತ್ರಸ್ಯ ತಾನಿ ಭಾಷ್ಯಂ ಸಮಾಸತಃ ।
ಕಿಂ ತಸ್ಯ ಬಹುಭಿರ್ಮಂತ್ರೈಃ ಶಾಸ್ತ್ರೈರ್ವಾ ಬಹುವಿಸ್ತರೈಃ ॥೩೯॥

ಯಸ್ಯೋಂ ನಮಃ ಶಿವಾಯೇತಿ ಮಂತ್ರೋಽಯಂ ಹೃದಿ ಸುಸ್ಥಿರಃ ।
ತೇನಾಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಂ ॥
ಯೇನೋಂ ನಮಃ ಶಿವಾಯೇತಿ ಮಂತ್ರಾಭ್ಯಾಂ ಸುಸ್ಥಿರೀಕೃತಃ ॥೪೦॥

ನಮಸ್ಕಾರಾದಿಸಂಯುಕ್ತಃ ಶಿವಾಯೇತ್ಯಕ್ಷರತ್ರಯಂ ।
ಜಿಹ್ವಾಗ್ರೇ ವರ್ತತೇ ಯಸ್ಯ ಸಫಲಂ ತಸ್ಯ ಜೀವಿತಂ ॥೪೧॥

---

ಶುಭಕರವೇ ಎಂದು ತಿಳಿಯಬೇಕು. ಮಂತ್ರಗಳು ಅಪಾರವಾಗಿದ್ದರೂ ಸರ್ವಜ್ಞನಾದ ಶಿವನಿಂದ ನಿರ್ಮಿತವಾದ ನಿರ್ಮಲವಾದ ವಾಕ್ಯಕ್ಕೆ ಸಮನಾದುದು ಲೋಕದಲ್ಲಿ ಎಲ್ಲಿಯೂ ಯಾವುದೂ ಇಲ್ಲವೇ ಇಲ್ಲ. ॥೩೫-೩೬॥

ಏಳುಕೋಟಿ ಮಹಾಮಂತ್ರಗಳು ಮತ್ತು ಇನ್ನೂ ಅನೇಕ ಉಪಮಂತ್ರಗಳಿಗಿಂತಲೂ ಈ ಷಡಕ್ಷರಮಂತ್ರವು ಬೇರೆಯಾದದ್ದು. ಇದು, ಸೂತ್ರ ಮತ್ತು ವೃತ್ತಿರೂಪವಾಗಿ ಶಿವವಿಷಯಕಜ್ಞಾನವನ್ನುಂಟುಮಾಡುವ ಮಂತ್ರಗಳೆಷ್ಟಿರುವುವೋ ವಿದ್ಯಾಸ್ಥಾನಪಡೆದ ಅವೆಲ್ಲವೂ ಈ ಷಡಕ್ಷರಮಂತ್ರದ ಸಂಕ್ಷೇಪವಾದ ಭಾಷ್ಯಗಳಾಗಿರುವುವು. ॥೩೭-೩೮॥

ಅನೇಕ ಮಂತ್ರಗಳಿಂದಲೂ ಮತ್ತು ಅತಿವಿಸ್ತಾರವಾದ ಶಾಸ್ತ್ರಗಳಿಂದಲೂ ತಾನೇ ಏನು ಪ್ರಯೋಜನ! ಯಾರ ಹೃದಯದಲ್ಲಿ 'ಓಂ ನಮಃ ಶಿವಾಯ' ಎಂಬ ಮಂತ್ರವು ಅರ್ಥವತ್ತಾಗಿ ದೃಢವಾಗಿ ನೆಲಸಿರುವುದೋ ಅವನೇ ಸಕಲವನ್ನೂ ತಿಳಿದವನು; ಅವನಿಂದಲೇ ಎಲ್ಲವೂ ಆಚರಿಸಲ್ಪಟ್ಟಿತೆಂಬುದಾಗಿ ಭಾವಿಸಬೇಕು. 'ಓಂ

ಅಂತ್ಯಜೋಽವಾಧಮೋ ವಾಪಿ ಮೂರ್ಖೋ ವಾ ಪಂಡಿತೋಽಪಿ ವಾ ।
ಪಂಚಾಕ್ಷರಜಪೇ ನಿಷ್ಠೋ ಮುಚ್ಯತೇ ಪಾಪಬಂಧನಾತ್ ॥೪೨॥

ಇತ್ಯುಕ್ತಂ ಪರಮೇಶೇನ ದೇವ್ಯಾ ಪೃಷ್ಟೇನ ಶೂಲಿನಾ ।
ಹಿತಾಯ ಸರ್ವಮರ್ತ್ಯಾನಾಂ ಶಿಷ್ಯಜಾನಾಂ ವಿಶೇಷತಃ ॥೪೩॥

॥ ಗೌರ್ಯುವಾಚ ॥

ಕಲೌ ಕಲುಷಿತೇ ಕಾಲೇ ದುರ್ನಯೇ ದುರತಿಕ್ರಮೇ ।
ಅಪುಣ್ಯತಮಸಾಛನ್ನೇ ಲೋಕೇ ಧರ್ಮಪರಾಙ್ಮುಖೇ ॥೪೪॥

ಕ್ಷೀಣವರ್ಣಾಶ್ರಮಾಚಾರೇ ಸಂಕರೇ ಸಮುಪಸ್ಥಿತೇ ।
ಸರ್ವಾಧಿಕಾರೇ ಸಂದಿಗ್ಧೇ ನಿಶ್ಚಿತೇ ವಾ ವಿಪರ್ಯಯೇ ॥೪೫॥

ಸದುಪದೇಶೇ ಪಿಹಿತೇ ಗುರುಶಿಷ್ಯಕ್ರಮೇ ಗತೇ ।
ಕೇನೋಪಾಯೇನ ಮುಚ್ಯಂತೇ ಭಕ್ತಾಸ್ತವ ಮಹೇಶ್ವರ ॥೪೬॥

---

ನಮಃ ಶಿವಾಯ ' ಎಂಬ ಮಂತ್ರದಿಂದ ಸ್ಥಿರಮನಸ್ಕನಾಗಿ ನಮಸ್ಕಾರಾರ್ಥವಾಚಕವಾದ ನಮಃ ಶಬ್ದಪೂರ್ವಕವಾಗಿರುವ ' ಶಿವಾಯ ' ಎಂಬ ಮೂರಕ್ಷರವು ಯಾರ ನಾಲಿಗೆಯ ತುದಿಯಲ್ಲಿರುವುದೋ ಅವನ ಜನ್ಮವು ಸಾರ್ಥಕವೆಂದು ತಿಳಿ. ॥೩೯-೪೦-೪೧॥

ಅಂತ್ಯಕುಲದಲ್ಲಿ ಹುಟ್ಟಿದವನಾಗಲೀ, ಅಧಮ, ಮೂಢ ಅಥವಾ ಪಂಡಿತನೇ ಆಗಲಿ ಶಿವಪಂಚಾಕ್ಷರಮಂತ್ರಜಪನಿರತನಾದರೆ ಅವನು ಸಕಲಪಾಪಗಳ ಕಟ್ಟುಗಳಿಂದಲೂ ಬಿಡುಗಡೆಹೊಂದುವನು, ಎಂದು ಪಾರ್ವತಿಯಿಂದ ಪ್ರಶ್ನೆಮಾಡಲ್ಪಟ್ಟ ಮಹೇಶನು, ಕಲಿಯುಗದ ಜನರಿಗಾಗಿಯೂ ಸಕಲರ ಹಿತಕ್ಕೋಸ್ಕರವೂ ಹೀಗೆ ನಿರೂಪಿಸಿರುವನೆಂದು ಜೈಗೀಷವ್ಯಾದಿಗಳಿಗೆ ಸ್ಕಂದನು ಹೇಳಿದನು. ॥೪೨-೪೩॥

ಪಾಪಭೂಯಿಷ್ಠವಾದ ಈ ಕಲಿಯುಗದಲ್ಲಿ ದುರ್ನಡತೆಗಳು ಮಿತಿಮೀರಿಹೋಗಿ ಜನಗಳೆಲ್ಲರೂ ಪಾಪರೂಪವಾದಅಜ್ಞಾನದಿಂದ ಆವೃತರಾಗಿ ಧರ್ಮಮಾರ್ಗಪರಾಙ್ಮುಖರಾಗಿ, ವರ್ಣ, ಆಶ್ರಮಗಳೆಲ್ಲವೂ ಕ್ಷಯವಾಗಿ, ಸಂಕರಜಾತಿಗಳೇರ್ಪಟ್ಟು, ಸಮಸ್ತ ಅಧಿಕಾರವೂ ಸಂಶಯಾಸ್ಪದವಾಗಿ, ನಿಶ್ಚಯ ಜ್ಞಾನವಿಲ್ಲದೆ ಅಥವಾ ವಿಪರೀತವಾಗಿ

॥ ಶಿವ ಉವಾಚ ॥

ಆಶ್ರಿತ್ಯ ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಮಮ ।
ಭಕ್ತ್ಯಾ ಚ ಭಾವಿತಾತ್ಮಾನೋ ಮುಚ್ಯಂತೇ ಕಲಿಜಾ ನರಾಃ ॥೪೭॥

ಮನೋವಾಕ್ಕಾಯಜೈರ್ದೋಷೈರ್ವಕ್ತುಂ ಸ್ಮರ್ತುಮಗೋಚರೈಃ ।
ದೂಷಿತಾನಾಂ ಕೃತಘ್ನಾನಾಂ ನಿರ್ದಯಾನಾಂ ಖಲಾತ್ಮನಾಂ ॥೪೮॥

ಲುಬ್ಧಾನಾಂ ವಕ್ರಮನಸಾಮಪಿ ಮತ್ಪ್ರವಣಾತ್ಮನಾಂ ।
ಮಮ ಪಂಚಾಕ್ಷರೀ ವಿದ್ಯಾ ಸಂಸಾರಭಯತಾರಿಣೀ ॥೪೯॥

ಮಯ್ಯೇವಮಸಕೃದ್ದೇವ ಪ್ರತಿಜ್ಞಾತಂ ಧರಾತಲೇ ।
ಪತಿತೋ ವಾ ವಿಮುಚ್ಯೇತ ಮದ್ಭಕ್ತೋ ವಿದ್ಯಯಾನಯಾ ॥೫೦॥

---

ರುತ್ತಾ ಒಳ್ಳೆಯ ಉಪದೇಶಕ್ರಮವು ಹೋಗಿ ಗುರುಶಿಷ್ಯಸೇವಾದಿಗಳ ಕ್ರಮವೇ ಹಾಳಾಗಿರುವ ಸಮಯದಲ್ಲಿ, ಮಹೇಶ್ವರನೆ! ಭಕ್ತರು ಯಾವ ಉಪಾಯದಿಂದ ಮುಕ್ತಿಪಡೆಯುವರೆಂದು ಪುನಃ ಪಾರ್ವತಿಯು ಮಹಾದೇವನನ್ನು ಪ್ರಾರ್ಥಿಸಿದಳು. ||೪೪-೪೫-೪೬||

ದೇವಿ! ಮನೋಹರವೂ ಪರಮವಿದ್ಯೆಯೂ ಆದ ಈ ನನ್ನ ಪಂಚಾಕ್ಷರೀ ಮಂತ್ರವನ್ನು ಆಶ್ರಯಿಸಿ ಭಕ್ತಿಪೂರ್ಣಮನಸ್ಕರಾದ ಕಲಿಯುಗದ ಮಾನವರು ಮುಕ್ತಿಪಡೆಯುತ್ತಾರೆ. ಬಾಯಿಂದ ಹೇಳಲು ಅಥವಾ ಸ್ಮರಣೆಮಾಡಲು ಅಸಾಧ್ಯವಾಗಿರುವ ಮನಸ್ಸು, ವಾಕ್ಕು, ಮತ್ತು ಕಾರ್ಯರೂಪವಾದ ತ್ರಿಕರಣದೋಷಗಳಿಂದ ದೂಷಿತರಾಗಿರುವವರೂ, ಉಪಕಾರಸ್ಮರಣೆಯಿಲ್ಲದವರೂ, ದಯಾಹೀನರೂ, ದುಷ್ಟಸ್ವಭಾವದವರೂ ಸಹ ಈ ಮಂತ್ರಪುರಶ್ಚರಣೆಯಿಂದ ಮುಕ್ತರಾಗುವರು. ||೪೭-೪೮||

ಅತ್ಯಂತ ಲುಬ್ಧರಾದವರೂ, ವಕ್ರಬುದ್ಧಿಯುಳ್ಳವರೂ ಸಹ ನನ್ನಲ್ಲಿ ನೆಟ್ಟ ಮನಸ್ಸುಳ್ಳವರಾಗಿದ್ದರೆ ಈ ನನ್ನ ಪಂಚಾಕ್ಷರೀಮಂತ್ರವಿದ್ಯೆಯು ಅವರ ಸಾಂಸಾರಿಕ ಸರ್ವ ಭೀತಿಯನ್ನೂ ನಾಶಪಡಿಸುವುದು. ದೇವಿ! ಈ ಭೂಮಂಡಲದಲ್ಲಿರುವವವರಿಗೆ ನಾನು ಅನೇಕಬಾರಿ ಹೀಗೆ ಪ್ರತಿಜ್ಞೆಮಾಡಿರುವೆನು. ಪತಿತನೇ ಆಗಿದ್ದರೂ ಸಹ ನನ್ನ ಭಕ್ತನಾದವನು ಈ ಪಂಚಾಕ್ಷರೀ ವಿದ್ಯೆಯಿಂದ ಮುಕ್ತನಾಗುವನು. ||೪೯-೫೦||

ವಿದ್ಯಾಂ ಹೃದ್ಯಾಮವಿದ್ಯಾಂ ನಿಜಹತಿ ಧಿಗತಾ ಗದ್ಯಪದ್ಯಾಕ್ಷರಾಂ ತಾಂ
ಉತ್ಪಿದ್ಯೈತಾಮವಿದ್ಯಾಂ ಹೃದಿ ಕುಟಿಲತಮೋ ರೋಗವೈದ್ಯಾಂ ಜಪೇದ್ಯಃ।
ಮುಕ್ತಿಂ ಪ್ರಾಪ್ಯೈವ ಸದ್ಯಃ ಶತಗುಣಫಲದಾಂ ಪರ್ಣಶದ್ಯಪ್ರಸಾದಾ
ದ್ದುರ್ಭಿದ್ಯಂ ತ್ವಘಮಾದ್ಯಜನ್ಮಮರಣಂ ಸದ್ಯೈವ ಭೇದ್ಯಂ ಭವೇತ್ ॥೫೧॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಪಂಚಾಕ್ಷರೀ
ಮಹಿಮಾನುವರ್ಣನೇ ಚತುಸ್ತ್ರಿಂಶೋಽಧ್ಯಾಯಃ

---

ಹೃದ್ಗತವಾದ ಈ ಪಂಚಾಕ್ಷರೀ ವಿದ್ಯೆಯು ಮಾನವರ ಅಜ್ಞಾನವನ್ನು ನಾಶ ಮಾಡುವುದು. ಬುದ್ಧಿಗತವಾದ ಈ ವಿದ್ಯೆಯು ಗದ್ಯ ಮತ್ತು ಪದ್ಯರೂಪವಾದ ಅಕ್ಷರ ಸಮೂಹವನ್ನೆಲ್ಲಾ ಹೊಡೆದೋಡಿಸುತ್ತದೆ. ಹೃದಯದಲ್ಲಿ ಅತಿ ಕುಟಿಲವಾಗಿ ನೆಲ ಸಿರುವ ಅಜ್ಞಾನರೂಪವಾದ ರೋಗಕ್ಕೆ ವೈದ್ಯನಂತಿರುವ ಈ ಪಂಚಾಕ್ಷರೀ ವಿದ್ಯೆ ಯನ್ನು ಜಪಮಾಡುವವನು ಮಹೇಶ್ವರನ ಅನುಗ್ರಹದಿಂದ ಜನನಮರಣರೂಪ ವಾದ ಈ ಮಾನವಜನ್ಮಸುಖಕ್ಕಿಂತಲೂ ಸಾವಿರಾರು ಪಾಲು ಮಿಗಿಲೆನಿಸಿದ ಮುಕ್ತಿ ಯನ್ನು ಪಡೆದು, ಪುನಃ ಪಾಪಗಳಿಗೆ ಅಭೇದ್ಯನಾಗುವನು, ಎಂದು ಜೈಗೀಷವ್ಯಾದಿ ಗಳಿಗೆ ಕುಮಾರಸ್ವಾಮಿಯು ನಿರೂಪಿಸಿದನು. ॥೫೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ಪಂಚಾಕ್ಷರೀಮಂತ್ರದ ಮಹಿಮಾವರ್ಣನೆಯೆಂಬ ಮೂವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಅಥ ಪಂಚತ್ರಿಂಶೋಽಧ್ಯಾಯಃ

॥ ಗೌರ್ಯುವಾಚ ॥

ಪುನಃ ಪಂಚಾಕ್ಷರಸ್ಯಾಸ್ಯ ಮಹಿಮಾನಂ ಮಹೇಶ್ವರ ।
ಅಧಿಕಾರಿವಿಭೇದೇನ ಪುರಶ್ಚರ್ತುಃ ಫಲಂ ವದ ॥೧॥

॥ ಈಶ್ವರ ಉವಾಚ ॥

ಷಡಕ್ಷರಂ ಪ್ರವಕ್ಷ್ಯಾಮಿ ಸಮಾಸೇನ ಗಿರೀಂದ್ರಜೇ ।
ಸದ್ಯಃ ಸಂಸಾರದುಃಖಾನಿ ವಿನಷ್ಟಾನಿ ಜಪಾಚ್ಛಿವೇ ॥೨॥

ಋಷಿರ್ಬ್ರಹ್ಮಾಸ್ಯ ಮಂತ್ರಸ್ಯ ಗಾಯತ್ರೀಛಂದ ಉಚ್ಯತೇ ।
ದೇವತಾಸ್ಯ ಶಿವಃ ಸಾಕ್ಷಾದಹಮೇವ ಮಹೇಶ್ವರಃ ॥೩॥

---

## ಮೂವತ್ತೈದನೆಯ ಅಧ್ಯಾಯವು

ಮಹೇಶ್ವರನೇ, ಪುನಃ ಈ ಪಂಚಾಕ್ಷರಮಂತ್ರಮಹಿಮೆಯನ್ನೂ ಅಧಿಕಾರಿಗಳ ವ್ಯತ್ಯಾಸದಿಂದ (ಅಂದರೆ ಬೇರೆ ಬೇರೆ ವರ್ಣದವರು) ಪುರಶ್ಚರಣೆಮಾಡುವುದರಿಂದ ಉಂಟಾಗುವ ಫಲವನ್ನೂ ಹೇಳೆಂದು ಗೌರಿಯು ಪ್ರಶ್ನೆಮಾಡಲು, ಆಗ ಈಶ್ವರನು ಎಲೌ ಪಾರ್ವತಿ, ಸಂಗ್ರಹವಾಗಿ ಷಡಕ್ಷರಮಂತ್ರಮಹಿಮೆಯನ್ನು ಈಗ ಹೇಳುವೆನು ಕೇಳೆಂದು ಹೀಗೆ ಹೇಳಲುಪಕ್ರಮಮಾಡಿದನು. ಮಂಗಳಾಂಗಿಯೇ, ತತ್ಕಾಲದಲ್ಲಿ ಈ ಷಡಕ್ಷರಮಂತ್ರಜಪದಿಂದ ಸಾಂಸಾರಿಕದುಃಖಗಳೆಲ್ಲವೂ ನಾಶವಾಗುವುವು. ॥೧-೨॥

ಈ ಮಂತ್ರಕ್ಕೆ ಬ್ರಹ್ಮನೇ ಋಷಿ; ಗಾಯತ್ರೀ ಛಂದಸ್ಸು; ಜಗನ್ಮಂಗಳಕರನಾಗಿ ಮಹೇಶ್ವರನೆನಿಸಿದ ನಾನೇ ಸಾಕ್ಷಾದ್ದೇವತೆಯಾಗಿರುವೆನು ; ಭುವನೇಶ್ವ

ಶಕ್ತಿರ್ಮಹೇಶ್ವರೀ ತ್ವಂ ಚ ಭುವನೇಶಾಕ್ಷರೀಭವೇಃ ।
ಬೀಜಂ ಮಾಯಾತ್ಮಕಂ ಪ್ರೋಕ್ತಂ ರುದ್ರಃ ಸಂಕಲ್ಪವಿಗ್ರಹಃ ॥೪॥

ಸೋಽಹಂ ತನ್ಮಯ ಏವಂ ಸ್ಯಾನ್ಮಂತ್ರಮಧ್ಯಸ್ಥಿತಃ ಸದಾ ।
ಅಂಗುಷ್ಠಾದಿಕನಿಷ್ಠಾಂತಂ ವಿನ್ಯಸೇದಕ್ಷರಕ್ರಮಾತ್ ॥೫॥

ಮಸ್ತಕೇ ಚ ಲಲಾಟೇ ಚ ಹೃದಿ ನಾಭೌ ಪದದ್ವಯೇ ।
ಪುನಃ ಪಂಚಾಕ್ಷರೇಣೈವ ನ್ಯಸೇತ್ಸ್ವಸ್ಯ ತನುಂ ಪರಂ ॥೬॥

ಪ್ರಣವಂ ಪ್ರಥಮಂ ವಿಂದ್ಯಾದ್ದ್ವಿತೀಯಂ ತು ನಕಾರಕಂ ।
ಮಕಾರಂ ತತ್ಪರಂ ದೇವಿ ಶಿಕಾರಂ ತು ತತಃ ಪರಂ ॥೭॥

ವಕಾರಂ ಪಂಚಮಂ ವಿದ್ಯಾದ್ಯಕಾರಂ ಷಷ್ಠಮುಚ್ಯತೇ ।
ಏವಂ ಷಡಕ್ಷರಂ ದೇವಿ ಶ್ರೀರುದ್ರಪದಮಧ್ಯಗಂ ॥೮॥

---

ರಿಯೂ, ನಾಶರಹಿತಳೂ ಆಗಿ ಮಹೇಶ್ವರಿಯೆನಿಸಿದ ನೀನೇ ಇದರ ಶಕ್ತಿಯು; ಮಾಯಾತ್ಮಕವೇ ಬೀಜವು. ರುದ್ರನು ಸಂಕಲ್ಪವಿಗ್ರಹನೆನಿಸಿರುವನು. ॥೩-೪॥

ನಾನು ಮಂತ್ರಮಧ್ಯದಲ್ಲಿ ನೆಲಸಿ ಆ ಮಂತ್ರಮಯನಾಗಿದ್ದೇನೆ. ಶಿವ ಪಂಚಾಕ್ಷರಮಂತ್ರವೇ ಶಿವಸ್ವರೂಪವೆಂದು ತಿಳಿ. ಹೆಬ್ಬೆರಳಿನಿಂದ (ಅಂಗುಷ್ಠದಿಂದ) ಕಿರುಬೆರಳವರೆಗೂ ಅಕ್ಷರಕ್ರಮವನ್ನನುಸರಿಸಿ ಮೊದಲು ಕರನ್ಯಾಸಮಾಡಬೇಕು. ಅನಂತರ ತಲೆ, ಹಣೆ, ಹೃದಯ, ಹೊಕ್ಕಳು ಮತ್ತು ಎರಡುಕಾಲು ಇವುಗಳಲ್ಲಿಯೂ ಪುನಃ 'ನಮಃ ಶಿವಾಯ' ಎಂಬ ಪಂಚಾಕ್ಷರಮಂತ್ರದ ಅಕ್ಷರಗಳಿಂದಲೇ ತನ್ನ ಶರೀರದಲ್ಲಿ ಷಡಂಗನ್ಯಾಸಮಾಡಬೇಕು. ॥೫-೬॥

ಶಿವಪಂಚಾಕ್ಷರೀಮಂತ್ರದಲ್ಲಿ ಓಂಕಾರವು ಮೊದಲನೆಯದು ; ಎರಡನೆಯದು ನಕಾರವು ; ಮುಂದಿನದು ಅಂದರೆ ಮೂರನೆಯದು ಮಕಾರವು ; ದೇವಿ! ನಾಲ್ಕನೆಯದು ಶಿಕಾರವು (ಶಿ ಎಂಬ ಅಕ್ಷರವು) ; ವಕಾರವು ಐದನೆಯದು ; ಯಕಾರವು ಆರನೆಯದಾಗಿರುವುದು ; ದೇವಿ! ಹೀಗೆ ಶ್ರೀರುದ್ರಾಧ್ಯಾಯದ ಪದ ಮಧ್ಯಗತವಾದ ಮಂತ್ರದಲ್ಲಿ ಆರಕ್ಷರಗಳಿರುವುವು. ಗಿರಿಜೆಯೇ ಕೇಳು, ಹೆಂಗಸರು, ಮತ್ತು ಶೂದ್ರರಿಗೆ ಈ ಮಂತ್ರವು ಓಂಕಾರವನ್ನುಳಿದು, 'ಶಿವಾಯ ನಮಃ' ಎಂಬಿಷ್ಟು ಮಾತ್ರ ನಮಶ್ಶಬ್ದಾಂತವಾಗಿ ಉಚ್ಚಾರಣೆಮಾಡಲು ಯೋಗ್ಯವಾಗುವುದು. ಬ್ರಾಹ್ಮಣ,

ಸ್ತ್ರೀಶೂದ್ರಾಣಾಂ ನಮೋಽಂತೋಽಯಂ ಪ್ರಭವೇತ ಮನುಃ ಶಿವೇ ।
ಬ್ರಹ್ಮಕ್ಷತ್ರವಿಶಾಮೇಷಾ ಜಪ್ಯೋಽನುಕ್ರಮತೋ ಮನುಃ ॥೯॥

ಬ್ರಹ್ಮಚಾರೀ ಗೃಹಸ್ಥಾನಾಂ ವರ್ಣಿನಾಂ ವನವಾಸಿನಾಂ ।
ಸಂನ್ಯಾಸಿನಾಂ ಸಪ್ರಣವಮಾದ್ಯಂತೇಷು ವಿಧೀಯತೇ ॥೧೦॥

ನ ಕೇವಲಂ ಗೃಹಸ್ಥಾನಾಂ ತ್ವದ್ಬೀಜೇನ ಯುತೋ ಮನುಃ ।
ಧನಧಾನ್ಯಸಮೃದ್ಧಿಶ್ಚ ಪುತ್ರಪೌತ್ರಾದಿಸಂಪದಃ ॥೧೧॥

ತ್ವದ್ಬೀಜೇನ ಯುತೋ ದದ್ಯಾದ್ಗೃಹಿಣಾಂ ಜಾಪಿನಾಂ ಮನುಃ ।
ವರ್ಣೀ ಜಪೇತ್ಸಹಸ್ರಂ ಹಿ ಗೃಹಸ್ಥಸ್ತ್ರಿಸಹಸ್ರಕಂ ॥೧೨॥

ವನವಾಸೀ ಸಹಸ್ರಾಣಾಂ ದಶಕಂ ಪ್ರಜಪೇದ್ದಿನೇ ।
ಸಂನ್ಯಾಸೀ ಪಂಚಸಾಹಸ್ರಂ ಪ್ರಣವಾದ್ಯಂ ಜಪೇನ್ಮನುಂ ॥೧೩॥

---

ಕ್ಷತ್ರಿಯ ಮತ್ತು ವೈಶ್ಯರೆಂಬ ಮೂರುವರ್ಣದವರೂ ಈ ಮಂತ್ರವನ್ನು ಪ್ರಣವ ಸಮೇತವಾಗಿ ಉಚ್ಚಾರಮಾಡಬಹುದು. ॥೭-೮-೯॥

ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ಮೂರು ವರ್ಣದವರಲ್ಲಿ ವನವಾಸಿಗಳಾದ ಬ್ರಹ್ಮಚಾರಿ, ಗೃಹಸ್ಥ, ಸಂನ್ಯಾಸಿ ಇವರೆಲ್ಲರಿಗೂ ಪ್ರಣವಮಂತ್ರವನ್ನು ಆದ್ಯಂತದಲ್ಲಿಟ್ಟು "ಓಂ ನಮಃ ಶಿವಾಯ ಓಂ" ಎಂದು ಈ ಶಿವಪಂಚಾಕ್ಷರೀಮಂತ್ರವನ್ನುಚ್ಚರಿಸಬೇಕು. ಸಂನ್ಯಾಸಿಗಳಾದರೋ ವನದಲ್ಲಿರಲಿ, ನಗರದಲ್ಲಿರಲಿ ಅವರು ಮೊದಲು ಮತ್ತು ಕೊನೆ ಎರಡು ಕಡೆಯಲ್ಲಿಯೂ (ಅಂದರೆ 'ಓಂ ನಮಃ ಶಿವಾಯ ಓಂ' ಎಂಬುದಾಗಿ) ಓಂಕಾರಗಳನ್ನು ಸೇರಿಸಿ ಜಪಮಾಡಬೇಕು. ದೇವಿಯೇ ಕೇಳು, ನಿನ್ನ ಬೀಜಾಕ್ಷರದಿಂದ ಅಂದರೆ ಪ್ರಕೃತ್ಯಾತ್ಮಕವಾದ ಪ್ರಣವಮಂತ್ರದಿಂದ ಯುಕ್ತವಾದ ಈ ಮಂತ್ರವು ಜಪಮಾಡುವ ಗೃಹಸ್ಥರಿಗೆ ಮಾತ್ರ ಧನ, ಧಾನ್ಯ ಸಮೃದ್ಧಿ, ಪುತ್ರಪೌತ್ರಾದಿ ಸಂಪತ್ತುಗಳನ್ನು ಉಂಟುಮಾಡುವುದೆಂದು ಭಾವಿಸಬೇಡ. ಇದನ್ನು ಜಪಿಸುವ ಆಶ್ರಮಧರ್ಮನಿರತರೆಲ್ಲರಿಗೂ ಇದು ಶುಭವನ್ನುಂಟುಮಾಡುವುದು. ॥೧೦-೧೧॥

ಸಾಮಾನ್ಯ ನಿಯಮದಿಂದ ಬ್ರಹ್ಮಚಾರಿಯು ಸಾವಿರ ಸಂಖ್ಯೆಯಲ್ಲಿ ಪಂಚಾಕ್ಷರಿಯನ್ನು ಜಪಿಸಬೇಕು. ಗೃಹಸ್ಥನು ಮೂರುಸಾವಿರ, ವಾನಪ್ರಸ್ಥಾಶ್ರಮಿಯು

ನ ಗಾಯತ್ರ್ಯಾಧಿಕಂ ಜಾಪ್ಯಮೇತತ್ಪಂಚಾಕ್ಷರಂ ಮನುಮ್ ।
ಸ್ತ್ರೀಭಿಃ ಶೂದ್ರೈಶ್ಚ ನಿಯತಂ ಶತಮಷ್ಟೋತ್ತರಂ ಜಪೇತ್ ॥೧೪॥

ಯಥಾ ಬ್ರಾಹ್ಮಣಜಾಪ್ಯಂ ಸ್ಯಾತ್ತಥಾ ವಿಟ್ಛೂದ್ರಯೋರಪಿ ।
ಮಂತ್ರೇಣಾನೇನ ಮಲ್ಲಿಂಗೇ ಕೇವಲೇನ ಚ ಸೇಚಯೇತ್ ॥೧೫॥

ಸ ಏವ ಪೂಜಕೋ ಮಾನ್ಯೋ ಮಮ ದೇವಿ ಪ್ರಸಾದಭಾಕ್ ।
ಅನುದ್ಧೂಳಿತದೇಹೇನ ನ ಜಪ್ಯೋಽಯಂ ಮನುಃ ಶಿವೇ ॥೧೬॥

ತ್ರಿಪುಂಡ್ರೋಜ್ಝಿತಫಾಲೇನ ನ ಜಪ್ಯೋಽಯಂ ಮನುಃ ಶಿವೇ ।
ಅರುದ್ರಾಕ್ಷಧರೇಣಾಪಿ ನ ಜಪ್ಯೋಽಯಂ ಮನುಃ ಶಿವೇ ॥೧೭॥

ಊರ್ಧ್ವಪುಂಡ್ರಧರೇಣಾಯಂ ಜಪ್ಯೋಽಯಂ ಮನುಃ ಶಿವೇ ।
ನಾನ್ಯದೇವಾರ್ಚನಾಯೋಗ್ಯೋ ಮನುರೇಷ ಗಿರೀಂದ್ರಜೇ ॥೧೮॥

---

ಹತ್ತುಸಾವಿರ ಮತ್ತು ಸನ್ಯಾಸಿಯು ಐದುಸಾವಿರ ಈ ರೀತಿ ಓಂಕಾರಾದಿಯಾದ ಶಿವಪಂಚಾಕ್ಷರಮಂತ್ರವನ್ನು ಜಪಮಾಡಬೇಕು. ಆದರೆ ದ್ವಿಜರಾದವರು ಗಾಯತ್ರೀ ಮಂತ್ರಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಈ ಪಂಚಾಕ್ಷರಮಂತ್ರಜಪಮಾಡಬಾರದು. ಸ್ತ್ರೀಯರೂ, ಶೂದ್ರರೂ ನಿಯಮವಾಗಿ ದಿನವೂ ನೂರೆಂಟು ಸಂಖ್ಯೆಯಲ್ಲಿ ಮಾತ್ರ ಜಪಮಾಡಬೇಕು. ||೧೨-೧೩-೧೪||

ಬ್ರಾಹ್ಮಣನ ಜಪವಿಧಿಯಂತೆಯೇ ವೈಶ್ಯ ಮತ್ತು ಶೂದ್ರರಿಗೂ ಈ ಮಂತ್ರದ ಜಪವಿಧಿಯು ಹೇಳಲ್ಪಟ್ಟಿದೆ. ಕೇವಲ ಈ ಪಂಚಾಕ್ಷರಮಂತ್ರದಿಂದಲೇ ನನ್ನ ಶಿವಲಿಂಗಕ್ಕೆ ಅಭಿಷೇಕಮಾಡಬಹುದು. ದೇವಿ, ಈ ಮಂತ್ರದಿಂದ ಶಿವಲಿಂಗಕ್ಕೆ ಅಭಿಷೇಕ ಮಾಡುವವನೇ ನನ್ನ ಅನುಗ್ರಹಕ್ಕೆ ಭಾಗಿಯಾಗುವ ಧನ್ಯನಾದ ಪೂಜಕನೆನಿಸುವನು. ಗಿರಿಜೆ, ಆದರೆ ಶರೀರಕ್ಕೆ ಭಸ್ಮೋದ್ಧೂಳನ ಮಾಡಿಕೊಳ್ಳದೇ ಈ ಪಂಚಾಕ್ಷರೀಮಂತ್ರವನ್ನು ಮಾತ್ರ ಜಪಮಾಡಬಾರದು. ||೧೫-೧೬||

ಹಣೆಯಲ್ಲಿ ಭಸ್ಮತ್ರಿಪುಂಡ್ರವಿಲ್ಲದೆ, ಅಂಗಗಳಿಗೆ ರುದ್ರಾಕ್ಷಗಳನ್ನು ಧರಿಸದೇ ಇರುವವನೂ, ಊರ್ಧ್ವಪುಂಡ್ರಗಳನ್ನು ಹಚ್ಚಿಕೊಂಡಿರುವವನೂ, ಈ ಮಂತ್ರವನ್ನು ಖಂಡಿತವಾಗಿ ಜಪಮಾಡಬಾರದು. ಪರ್ವತರಾಜಕುಮಾರಿಯೇ ಕೇಳು, ಈ ಪಂಚಾಕ್ಷರ ಮಂತ್ರವು ಬೇರೊಂದು ದೇವತೆಯ ಪೂಜೆಗೆ ಪ್ರಯೋಜನವಾಗಲಾರದು. ||೧೭-೧೮||

ನದೀತೀರೇ ಗೃಹೇ ಗೋಷ್ಠೇ ವನೇ ಚಾಪಿ ಶಿವಾಲಯೇ ।
ಬಿಲ್ವಮೂಲೇ ವಿಶೇಷೇಣ ಪುರಶ್ಚರ್ಯಾದಿಸಿದ್ಧಿದಃ ॥೧೯॥

ಮೃಗವ್ಯಾಘ್ರಾಜಿನಾಚ್ಛೈಲೇ ಚಾಸ್ಯಾಸೀತ ಕುಶೋತ್ತರೇ ।
ನ ಭೂಮೌ ನ ಚ ಪಾಷಾಣೇ ನ ಕಾಷ್ಠೇ ಚಾಪ್ಯಮಾಚರೇತ್ ॥೨೦॥

ಮಂತ್ರಃ ಸಾಂಗಃ ಸಮಾಖ್ಯಾತೋ ಜಪಾಸನವಿಧಿಕ್ರಮೈಃ ।
ದೇಶಕಾಲವಿಶೇಷೋಽತ್ರ ಕಥ್ಯತೇ ಗಿರಿಜೇಽಧುನಾ ॥೨೧॥

ಅಷ್ಟಮ್ಯಾಂ ಚ ಚತುರ್ದಶ್ಯಾಂ ಪರ್ವಣೋರುಭಯೋರಪಿ ।
ಗ್ರಹಣೇ ಸೋಮಸೂರ್ಯೋಕ್ತೇ ವಿಷುವಾಯನಯೋರಪಿ ॥೨೨॥

ಸೋಮವಾರೇ ಪ್ರದೋಷೇ ಚ ಸಾಯಂಪ್ರಾತಃ ಪರಾಹ್ಣಯೋಃ ।
ನಿತ್ಯಾದಪ್ಯಧಿಕಂ ಕುರ್ಯಾಜ್ಜಪಂ ಪಂಚಾಕ್ಷರಸ್ಯ ಚ ॥೨೩॥

---

ಹೊಳೆಯ ದಡ, ಮನೆ, ಹಸುವಿನ ಕೊಟ್ಟಿಗೆ, ಕಾಡು ಅಥವಾ ಶಿವದೇವಾಲಯ, ವಿಶೇಷವಾಗಿ ಬಿಲ್ವವೃಕ್ಷಮೂಲ, ಈ ಸ್ಥಳಗಳಲ್ಲಿ ಶಿವಪಂಚಾಕ್ಷರಮಂತ್ರವನ್ನು ಜಪಮಾಡುವುದರಿಂದ ಆ ಮಂತ್ರದ ಸಿದ್ಧಿಯುಂಟಾಗುವುದು. ಜಿಂಕೆ, ಹುಲಿ ಇವುಗಳ ಚರ್ಮಗಳ ಮೇಲೂ, ರೇಷ್ಮೆಮಡಿ ಅಥವಾ ದರ್ಭಾಸನದ ಮೇಲಾದರೂ ಕುಳಿತು ಜಪಮಾಡಬಹುದು. ನೆಲ, ಕಲ್ಲು ಮತ್ತು ಕಟ್ಟಿಗೆಗಳ ಮೇಲೆ ಕುಳಿತು ಎಂದಿಗೂ ಈ ಮಂತ್ರ ಜಪಮಾಡಬಾರದು. ॥೧೯-೨೦॥

ಎಲೌ ಗಿರಿರಾಜಕುಮಾರಿಯೇ, ಈ ಮಂತ್ರದ ಜಪ, ಆಸನಗಳ ವಿಧಿಗಳ ಕ್ರಮವರಿತು ಸಾಂಗವಾಗಿ ಈ ಮಂತ್ರವನ್ನು ಈಗ ನಿನಗೆ ವಿವರಿಸಿದೆನು. ಇನ್ನು ಮುಂದೆ ದೇಶ, ಆಚರಣೆಗೆ ತಕ್ಕಕಾಲ ಮುಂತಾದ ವಿಶೇಷಗಳನ್ನು ಹೇಳುತ್ತೇನೆ ಕೇಳು. ಅಷ್ಟಮೀ, ಚತುರ್ದಶೀ, ಪೂರ್ಣಿಮಾ ಮೇಷ ತುಲಾ ಸಂಕ್ರಮಣಕಾಲ ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳು, (ಮಕರ, ಕರ್ಕಾಟಕ ಸಂಕ್ರಮಣ ಕಾಲ) ಸೋಮವಾರ, ಪ್ರದೋಷದ ದಿನ, ಈ ದಿನಗಳಲ್ಲಿ ಬೆಳಗ್ಗೆ ಮತ್ತು ಹಗಲಿನ ಕೊನೆ ಮುಂತಾದ ಕಾಲಗಳಲ್ಲಿ ಈ ಪಂಚಾಕ್ಷರಜಪಮಾಡುವವನು ನಿತ್ಯಕ್ಕಿಂತಲೂ ಹೆಚ್ಚಿನ ಫಲವನ್ನೈದುವನು. ॥೨೧-೨೨-೨೩॥

ಫಲಂ ಶತಗುಣಂ ಪ್ರೋಕ್ತಂ ಗಿರಿಜೇಽತ್ರ ಮಯಾಧುನಾ ।
ಮನೋರರ್ಥಂ ತಥಾಮೇಽದ್ಯ ನಮೋಯುಕ್ತೋ ವಿಶೇಷತಃ ॥೨೪॥

ಅಹಂ ವಾಚ್ಯೋ ಮಹಾದೇವಸ್ತಸ್ಯಾರ್ಥೋಽಯಂ ಸನಾತನಃ ।
ಧ್ಯಾನಾಂಗನ್ಯಾಸಭೇದಾಶ್ಚ ಬಹವೋಽಸ್ಯ ಮನೋಃ ಶಿವೇ ॥೨೫॥

ನಿಗಮಾಗಮಭೇದೇನ ವದಂತಿ ಮುನಯೋಽದ್ರಿಜೇ ।
ಮಂತ್ರಾರ್ಥಃ ಕಥಿತಃ ಕೃತ್ಸ್ನಃ ಪುರಶ್ಚರ್ಯಾಂ ಶೃಣುಷ್ವಮೇ ॥೨೬॥

ಆಚಾರ್ಯಮುಖತೋ ಮಂತ್ರಂ ಜಪೇತ್ಸರ್ವಂ ಸಮಾಹಿತಃ ।
ಯಥಾಶಕ್ತಿ ಧನಂ ತಸ್ಮೈಪ್ರದತ್ವಾತದನುಜ್ಞಯಾ ॥೨೭॥

ಸ್ನಾನಂ ತ್ರಿಷವಣಂ ಕೃತ್ವಾ ಭಸ್ಮನಾ ಶಾಕಭೋಜನಃ ।
ಫಲಮೂಲಾಶನೋ ವಾಪಿ ಹವಿಷ್ಯಾಶೀ ಯಥಾಬಲಂ ॥೨೮॥

---

ದೇವಿಯೇ ಲಾಲಿಸು, ಇಂತಹ ಕಾಲಗಳಲ್ಲಿ ಜಪಮಾಡುವುದರಿಂದ ನಿತ್ಯಕ್ಕಿಂತಲೂ ನೂರರಷ್ಟು ಹೆಚ್ಚಿನ ಫಲವುಂಟೆಂದು ನಾನು ಹೇಳಿರುವೆನು. ವಿಶೇಷವಾಗಿ ಆ ಮಂತ್ರಾರ್ಥವೇ ನಮಃ ಶಬ್ದಯುಕ್ತನಾದ ನಾನಾಗಿರುವೆನು. ಅದರ ಅರ್ಥರೂಪನೂ ಸನಾತನನೂ ಆದ ನಾನೇ ಆ ಮಂತ್ರದಿಂದ ಪ್ರತಿಪಾದ್ಯನಾದವನು. ದೇವಿ! ಈ ಮಂತ್ರಕ್ಕೆ ಧ್ಯಾನ, ಅಂಗನ್ಯಾಸ, ಕರನ್ಯಾಸಗಳಲ್ಲಿ ಇನ್ನೂ ಅನೇಕ ಭೇದಗಳಿರುವುವು. ॥೨೪-೨೫॥

ಪಾರ್ವತಿಯೇ, ನಿಗಮ ಮತ್ತು ಆಗಮಭೇದಗಳಿಂದ ಮುನಿಗಳು ಇದರಲ್ಲಿ ಹಲವು ಬಗೆಯನ್ನು ಉಪದೇಶಿಸುವರು. ಸಂಪೂರ್ಣವಾಗಿ ಈ ಮಂತ್ರದ ಅರ್ಥವನ್ನೆಲ್ಲಾ ನಿನಗೆ ಈಗ ಹೇಳಿದೆನು. ಇನ್ನು ಅದನ್ನು ಪುರಶ್ಚರಣೆಮಾಡುವ ಕ್ರಮವನ್ನರುಹುವೆನು ಕೇಳು; ಪುರಶ್ಚರಣೆ ಮಾಡುವವನು, ಮೊದಲು ತನ್ನ ಶಕ್ತಿಯನ್ನು ಮಿರಾದಂತೆ ಆಚಾರ್ಯನಿಗೆ ಧನವನ್ನು ಕೊಟ್ಟು, ಅವನ ಅನುಮತಿಯನ್ನು ಪಡೆದು ಅವನ ಮುಖದಿಂದ ಮಂತ್ರವನ್ನೆಲ್ಲಾ ಉಪದೇಶಹೊಂದಿ ಅನಂತರ ಸಾವಧಾನವಾಗಿ ಕುಳಿತು ಜಪಮಾಡಬೇಕು. ॥೨೬-೨೭॥

ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಜಲಸ್ನಾನ ಮತ್ತು ಭಸ್ಮಸ್ನಾನಮಾಡಿ, ತರಕಾರಿ, ಸೊಪ್ಪು, ಹಣ್ಣು, ಗೆಡ್ಡೆಗೆಣಸುಗಳು ಅಥವಾ ಶಕ್ತ್ಯನು

ಪರ್ವತಾಗ್ರೇ ನದೀತೀರೇ ಸಾಗರಾಂತೇ ಶಿವಾಲಯೇ ।
ವನೇ ವಾ ನಿರ್ಭಯೇ ಶುದ್ಧೇ ಪ್ರಾಙ್ಮುಖೋದಙ್ಮುಖಃ ಶುಚಿಃ ॥೨೯॥

ಬಿಲ್ವಮೂಲೇ ಗೃಹೇ ಗೋಷ್ಠೇ ಭಸ್ಮಚ್ಛನ್ನಾಸನೋ ಭವೇತ್ ।
ಪ್ರಾಣಾಯಾಮತ್ರಯಂ ಕೃತ್ವಾ ಛಂದರ್ಷಿಜ್ಞೋಽಸ್ಯ ದೈವವಿತ್ ॥೩೦॥

ಶಕ್ತಿಂ ಬೀಜಂ ದೇವತಾಂ ಚ ಮಂತ್ರಾಂಗೇಷು ಯಥಾ ಮನುಂ ।
ಕರನ್ಯಾಸಂ ಪುನಃ ಕೃತ್ವಾ ತಥಾಂಗನ್ಯಾಸಮೇವ ಚ ॥೩೧॥

ಪಂಚಾಂಗಮಪಿ ವಿನ್ಯಸ್ಯ ಗುರುಂ ಮಾಮಭಿವೀಕ್ಷ್ಯ ಚ ।
ಲಿಂಗೇ ವಾ ಸ್ಥಂಡಿಲೇ ದೇವಿ ಸೋಮಸೂರ್ಯಾಗ್ನಿಮಂಡಲೇ ॥೩೨॥

ವಿದ್ಯುಲ್ಲೇಖೇವ ಕಲ್ಯಾಣಂ ಜ್ವಲಂತಂ ವಿಶ್ವರೂಪಿಣಂ ।
ಶಿವಂ ಧ್ಯಾತ್ವಾ ಜಪೇನ್ಮಂತ್ರಂ ಲಕ್ಷಾಣಾಂ ಪಂಚಕಂ ಶಿವೇ ॥೩೩॥

ಪ್ರಣವಾದ್ಯಂ ನಮೋಽಂತಂ ಚ ಗಿರಿಜೇ ಜಪಮಾಚರೇತ್ ॥೩೪॥

---

ಸಾರವಾಗಿ ಹವಿಸ್ಸುಗಳನ್ನು ಮಾತ್ರ ತಿನ್ನುತ್ತಾ, ಪರ್ವತಶಿಖರ, ಹೊಳೆಯ ದಡ, ಸಾಗರದ ದಡ, ಶಿವದೇವಾಲಯ, ಅಥವಾ ನಿರ್ಭಯವೂ, ಪರಿಶುದ್ಧವೂ ಆದ ಕಾಡು, ಇವುಗಳಲ್ಲಿಯಾಗಲಿ ಪವಿತ್ರವಾದ ಬಿಲ್ವವೃಕ್ಷದ ಬುಡ, ಹಸುವಿನ ಕೊಟ್ಟಿಗೆ, ಮನೆ, ಇವುಗಳಲ್ಲಿಯಾಗಲಿ ಭಸ್ಮಲೇಪನಮಾಡಿಕೊಂಡು, ಶುಚೀಭೂತನಾಗಿ, ಪೂರ್ವ ಅಥವಾ ಉತ್ತರದಿಗಭಿಮುಖವಾಗಿ ಕುಳಿತುಕೊಂಡು ಆಚಾರ್ಯರಿಂದ ಉಪದಿಷ್ಟವಾದ ರೀತಿಯಲ್ಲಿ ಈ ಮಂತ್ರವನ್ನು ಜಪಿಸಬೇಕು. ॥೨೯॥

ಈ ಮಂತ್ರದ ಋಷಿ, ದೇವತಾ, ಛಂದಸ್ಸುಗಳನ್ನು ತಿಳಿದ ಮಂತ್ರಜ್ಞನು ಮೊದಲು ಮೂರು ಪ್ರಾಣಾಯಾಮಗಳನ್ನು ಮಾಡಿ, ಶಕ್ತಿ, ಬೀಜ, ದೇವತೆ ಇವುಗಳನ್ನು ಪಠಿಸಿ, ಅಂಗಗಳಲ್ಲಿ ಸರಿಯಾಗಿ ಮಂತ್ರಕ್ಕನುಗುಣವಾಗಿ ಅಂಗನ್ಯಾಸ ಮಾಡಿ, ಅನಂತರ ಕರನ್ಯಾಸ, ಪುನಃ ಅಂಗನ್ಯಾಸಗಳನ್ನೆಸಗಿ ಐದು ಅಂಗಗಳಲ್ಲಿ ನ್ಯಾಸಮಾಡಿದ ತರುವಾಯ ಈ ಮಂತ್ರಕ್ಕೆ ಮೂಲಗುರುವಾದ ನನ್ನನ್ನು ಧ್ಯಾನಿಸುತ್ತಾ, ನನ್ನ ಆಕಾರವನ್ನು ಲಿಂಗದಲ್ಲಿಯಾಗಲೀ, ಸ್ಥಂಡಿಲದಲ್ಲಿಯಾಗಲಿ ಚಂದ್ರ, ಸೂರ್ಯ ಮತ್ತು ಅಗ್ನಿಮಂಡಲಗಳಲ್ಲಾಗಲಿ, ಮಿಂಚಿನಬಳ್ಳಿಯಂತೆ ಪ್ರಜ್ವಲಿಸುತ್ತಾ ಜಗದ್ರೂಪಿಯೂ ಮಂಗಳಪ್ರದನೂ ಆದ ಶಿವನೆನಿಸಿದ ನನ್ನನ್ನು ಅನುಸಂಧಾನ

ವಂದೇ ಹರಂ ವರದಶೂಲಕಪಾಲಹಸ್ತಂ
ಸಾಭೀತಿಮದ್ರಿಸುತಯೋಜ್ವಲದೇಹಕಾಂತಿಂ ।
ವಾಮೋರುಪೀಠಗತಯಾ ನಿಜವಾಮಹಸ್ತ
ನ್ಯಸ್ತಾರುಣೋತ್ಪಲಯುಜಾ ಪರಿಣದ್ಧದೇಹಂ ॥೩೫॥

ಶಾಂತಂ ಪದ್ಮಾಸನಸ್ಥಂ ಶಶಧರಮುಕುಟಂ ಪಂಚವಕ್ತ್ರಂ ತ್ರಿಣೇತ್ರಂ
ನಾಗಂ ಪಾಶಂ ಚ ಘಂಟಾಂ ಪ್ರಳಯಹುತವಹಂ ಸಾಂಕುಶಂ ವಾಮಭಾಗೇ
ನಾನಾಲಂಕಾರದೀಪ್ತಂ ಸ್ಫಟಿಕಮಣಿನಿಭಂ ದಕ್ಷಭಾಗೇ ವಹಂತಂ
ಶೂಲಂ ವಜ್ರಂ ಚ ಖಡ್ಗಂ ಪರಶುಮಭಯದಂ ಪಾರ್ವತೀಶಂ ನಮಾಮಿ
॥೩೬॥

---

ಮಾಡುತ್ತಾ ಐದುಲಕ್ಷಮಂತ್ರಗಳನ್ನು ಜಪಮಾಡಬೇಕು. ॥೨೯-೩೦-೩೧-೩೨-೩೩-೩೪॥

ಜಪಾದಿಯಲ್ಲಿ ನನ್ನ ಆಕಾರವನ್ನು ಈ ರೀತಿ ಧ್ಯಾನಿಸಬೇಕು. ವರದಮುದ್ರೆ, ತ್ರಿಶೂಲ, ಕಪಾಲ ಮತ್ತು ಅಭಯಮುದ್ರೆ, ಹೀಗೆ ಆಯುಧಮುದ್ರೆಗಳನ್ನು ನಾಲ್ಕು ತೋಳುಗಳಲ್ಲಿಯೂ ಧರಿಸಿರುವವನೂ, ಪರ್ವತರಾಜಕುಮಾರಿಯ ಸಾಹಚರ್ಯದಿಂದ ಉಜ್ವಲವಾದ ಶರೀರಕಾಂತಿಯುಳ್ಳವನೂ, ಎಡದೊಡೆಯೆಂಬ ಪೀಠದಲ್ಲಿ ಕುಳಿತು ತನ್ನ ಎಡಗೈಯಿಂದ ಕೆಂದಾವರೆಯನ್ನು ಹಿಡಿದಿರುವ ಜಗದಂಬಿಕೆಯಿಂದ ವ್ಯಾಪ್ತ ವಾದ ದೇಹವುಳ್ಳವನೂ ಆದ ಶಿವನಿಗೆ ನಮಸ್ಕರಿಸುತ್ತೇನೆ ಎಂದು ಪಂಚಾಕ್ಷರ ಜಪಾರಂಭದಲ್ಲಿ ಧ್ಯಾನಮಾಡಬೇಕು. ॥೩೫॥

ಶಾಂತಮೂರ್ತಿಯೂ, ಪದ್ಮಾಸನದಲ್ಲಿ ಕುಳಿತಿರುವವನೂ ಚಂದ್ರಕಿರೀಟ ಧಾರಿಯೂ, ಐದುಮುಖಗಳುಳ್ಳವನೂ, ಮೂರುಕಣ್ಣುಗಳುಳ್ಳವನೂ, ಎಡಭಾಗದಲ್ಲಿ ಸರ್ಪ, ಪಾಶ, ಘಂಟೆ, ಪ್ರಳಯಕಾಲದಗ್ನಿ ಮತ್ತು ಅಂಕುಶಗಳನ್ನೂ, ದಕ್ಷಿಣಭಾಗದಲ್ಲಿ ಅಂದರೆ ಬಲಭಾಗದಲ್ಲಿ ನಾನಾವಿಧವಾದ ಅಲಂಕಾರಗಳಿಂದ ಪ್ರಜ್ವಲಿಸುತ್ತಾ, ಸ್ಫಟಿಕ ಮಣಿಯಂತೆ ಪ್ರಕಾಶಿಸುವವನೂ, ಶೂಲ, ವಜ್ರಾಯುಧ, ಕತ್ತಿ, ಕೊಡಲಿ ಮತ್ತು ಅಭಯಮುದ್ರೆಗಳನ್ನು ಧರಿಸಿರುವವನೂ, ಪಾರ್ವತೀರಮಣನೂ ಆದ ಮಹಾದೇವ ನಿಗೆ ನಮಸ್ಕಾರಮಾಡುತ್ತೇನೆ ಎಂದು ಧ್ಯಾನಿಸಬೇಕು. ॥೩೬॥

ಮಂಗಲಾಯತನಂ ದೇವಂ ಯುವಾನಮತಿಸುಂದರಂ ।
ಧ್ಯಾಯೇತ್ಕಲ್ಪತರೋರ್ಮೂಲೇ ಸುಖಾಸೀನಂ ಸಹೋಮಯಾ ॥೩೭॥

ಏವಂ ಧ್ಯಾಯನ್ಜಪೇನ್ಮಂತ್ರಂ ಪಂಚಾಕ್ಷರಮತಂದ್ರಿತಃ ।
ತರ್ಪಯೇಲ್ಲಕ್ಷಮೇಕಂ ತು ಜುಹುಯಾಲ್ಲಕ್ಷಮೇವ ಹಿ ॥೩೮॥

ಆಜ್ಯೇನ ಪಯಸಾ ವಾಪಿ ಪಲಾಶಕುಸುಮೇನ ವಾ ।
ತತಃ ಸಿಧ್ಯತಿ ಮಂತ್ರೋಽಸ್ಯ ಭುಕ್ತಿಮುಕ್ತಿ ಫಲಪ್ರದಃ ॥೩೯॥

ತೈಲೇನ ಚಾಭಿಚಾರೇಷು ಅರ್ಕಾಣಾಂ ಸಮಿಧೋ ಹುನೇತ್ ।
ವಶ್ಯೇ ಕೌಸುಂಭಕುಸುಮೈರ್ಬಿಲ್ವಪತ್ರೈರ್ಧನಾಪ್ತಯೇ ॥೪೦॥

ಜ್ವರರೋಗಾದಿಶಾಂತ್ಯರ್ಥಮಶ್ವತ್ಥಸಮಿಧೋ ಹುನೇತ್ ।
ವಿದ್ವೇಷಣೇ ಮಾರಣೇ ಚ ಬೈಭೀತಿಕಕರಂಜಕೌ ॥೪೧॥

---

ಸರ್ವಾರ್ಥಪ್ರದವಾದ ಕಲ್ಪವೃಕ್ಷದ ಬುಡದಲ್ಲಿ ಜಗನ್ಮಾತೆಯಾದ ಪಾರ್ವತಿಯೊಡನೆ ಸುಖವಾಗಿ ಕುಳಿತಿರುವ ಕಲ್ಯಾಣನಿಲಯನೂ, ಯುವಕನೂ, ಅತಿ ಸುಂದರನೂ ಆದ ಮಹಾದೇವನನ್ನು ಜಪಾರಂಭದಲ್ಲಿ ಧ್ಯಾನಮಾಡಬೇಕು. ಹೀಗೆ ಶಿವಮೂರ್ತಿಯನ್ನು ಮನಸಾ ಧ್ಯಾನಮಾಡುತ್ತಾ, ಆಲಸ್ಯವಿಲ್ಲದೇ ಶಿವಪಂಚಾಕ್ಷರಮಂತ್ರವನ್ನು ಉಕ್ತ ಸಂಖ್ಯೆಯಲ್ಲಿ ಜಪಮಾಡಬೇಕು. ಜಪಾನಂತರ ಒಂದುಲಕ್ಷ ಬಾರಿ ತರ್ಪಣ ಮಾಡಬೇಕು. ತರ್ಪಣಾನಂತರ ತುಪ್ಪ, ಹಾಲು ಅಥವಾ ಮುತ್ತುಗದ ಹೂವಿನಿಂದ ಒಂದುಲಕ್ಷ ಹೋಮಮಾಡಬೇಕು. ಆಗ ಭೋಗ, ಮತ್ತು ಮೋಕ್ಷರೂಪವಾದ ಫಲವನ್ನುಂಟುಮಾಡುವ ಈ ಪಂಚಾಕ್ಷರ ಮಂತ್ರವು ಸಿದ್ಧಿಸುವುದು. ॥೩೭-೩೮-೩೯॥

ಅಭಿಚಾರಕೃತ್ಯಗಳನ್ನೆಸಗುವಾಗ ಅಂದರೆ ಶತ್ರುನಾಶಕರವಾದ ಕರ್ಮದಲ್ಲಿ ಸಿದ್ಧಿಯನ್ನು ಪಡೆಯಬೇಕಾದರೆ ಎಣ್ಣೆ ಮತ್ತು ಎಕ್ಕದ ಸಮಿತ್ತುಗಳಿಂದ ಹೋಮ ಮಾಡಬೇಕು. ವಶೀಕರಣ ಕರ್ಮದಲ್ಲಿ, ಅಂದರೆ ರಾಜವಶ್ಯ, ಸ್ತ್ರೀವಶ್ಯಾದಿಗಳಲ್ಲಿ ಕುಸುಮೆ ಹೂವುಗಳಿಂದಲೂ, ದ್ರವ್ಯಪ್ರಾಪ್ತೀಚ್ಛೆಯುಂಟಾದಾಗ ಬಿಲ್ವದಳಗಳಿಂದಲೂ ಜ್ವರ, ರೋಗ, ಮುಂತಾದವುಗಳ ನಿವಾರಣೆಯ ಸಮಯದಲ್ಲಿ ಅರಳೀ ಸಮಿತ್ತುಗಳಿಂದಲೂ, ದ್ವೇಷ, ಸಾಧನ ಮತ್ತು ಮಾರಣಕರ್ಮಗಳನ್ನೆಸಗುವಾಗ ವಿಭೀತಕ (ತಾರೆಹೂವು) ಮತ್ತು ಕರಂಜಕ (ಹೊಂಗೇಹೂವು) ವೃಕ್ಷಗಳ ಸಮಿತ್ತು ಮತ್ತು ಪುಷ್ಪಗಳಿಂದ ಹೋಮಮಾಡಬೇಕು. ॥೪೦-೪೧॥

ಉಚ್ಚಾಟನೇ ಚ ಶತ್ರೂಣಾಂ ಅಪಾಮಾರ್ಗೈರ್ಹುನೇತ್ತ್ರದಾ ।
ಪ್ರತ್ಯೇಕಮಷ್ಟಸಾಹಸ್ರಂ ಜುಹುಯಾಜ್ಜಾತವೇದಸಿ ॥೪೨॥

ನಿಂಬತೈಲೈಶ್ಚ ಏರಂಡೈರ್ಜುಹುಯಾದಾಭಿಚಾರಕೇ ।
ನಿತ್ಯಾದಪ್ಯಧಿಕಂ ಜಪ್ಯಂ ಜಪೇನ್ಮಂತ್ರಸ್ಯ ಸಿದ್ಧಯೇ ॥೪೩॥

ನಿತ್ಯಂ ದ್ವಾದಶಸಾಹಸ್ರಂ ಜಪೇದ್ಭಕ್ತ್ಯಾ ಸಮಾಹಿತಃ ।
ಸಮ್ಯಗ್ಜ್ಞಾನಂ ಸಮಾಸಾದ್ಯ ಮಯಿ ಲೀನೋ ಭವಿಷ್ಯತಿ ॥೪೪॥

ಲಕ್ಷಪಂಚಶತಂ ಜಪ್ತ್ವಾ ವೃತ್ರಾರೇಃ ಪದಮಾಪ್ನುಯಾತ್ ।
ಷಷ್ಟಿಲಕ್ಷಜಪೇನೈವ ಲಭತೇ ಬ್ರಹ್ಮಣಃ ಪದಂ ॥೪೫॥

ಅಶೀತಿಲಕ್ಷಂ ಜಪ್ತ್ವಾ ತು ನರೋ ವಿಷ್ಣುತ್ವಮಾಪ್ನುಯಾತ್ ।
ಲಕ್ಷಾಣಾಂ ತು ಶತಂ ಜಪ್ತ್ವಾ ಸಾಕ್ಷಾದ್ರುದ್ರತ್ವಮಾಪ್ನುಯಾತ್ ॥೪೬॥

---

ವೈರಿಗಳನ್ನು ಉಚ್ಚಾಟನೆಮಾಡುವಾಗ ಅಂದರೆ ದೇಶದಿಂದ ದೇಶಾಂತರಕ್ಕೆ ಓಡಿಸುವಾಗ ಅಪಾಮಾರ್ಗ (ಉತ್ತರಣೆ) ಕಡ್ಡಿಗಳಿಂದ ಹೋಮಮಾಡಬೇಕು. ಪ್ರತ್ಯೇಕ ಪ್ರತ್ಯೇಕವಾಗಿ ಅಂದರೆ ಶತ್ರುಸಂಖ್ಯಾನುಗುಣವಾಗಿ ಎಂಟುಸಾವಿರ ಹೋಮಗಳನ್ನು ಅಗ್ನಿಯಲ್ಲಿ ನಡೆಸಬೇಕು. ಆಭಿಚಾರಕ (ಮಾಟ ಮುಂತಾದ) ಕಾರ್ಯಗಳಲ್ಲಿ ಬೇವಿನೆಣ್ಣೆ, ಮತ್ತು ಹರಳೆಣ್ಣೆಗಳಿಂದ ಹೋಮಮಾಡಬೇಕು. ಮೇಲೆ ಹೇಳಿದ ಯಾವುದೇ ಕಾರ್ಯಸಿದ್ಧಿಗಾದರೂ ನಿತ್ಯಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿ ಈ ಮಂತ್ರವನ್ನು ಜಪಮಾಡಬೇಕು. ॥೪೨-೪೩॥

ಭಕ್ತಿಪೂರ್ವಕವಾಗಿ ನಿತ್ಯವೂ ಹನ್ನೆರಡುಸಾವಿರ ಪಂಚಾಕ್ಷರಮಂತ್ರಗಳನ್ನು ಜಪಿಸಬೇಕು. ಈ ರೀತಿ ಜಪಮಾಡಿದವನು ಸಂಪೂರ್ಣ ಜ್ಞಾನಪಡೆದು ಕೊನೆಗೆ ನನ್ನಲ್ಲಿ ಐಕ್ಯನಾಗುವನು. ಐವತ್ತುಲಕ್ಷ ಸಂಖ್ಯೆಯಿಂದ ಜಪಮಾಡಿದರೆ ಇಂದ್ರಪದವಿಯನ್ನೈದುವನು. ಅರುವತ್ತುಲಕ್ಷ ಮಂತ್ರಜಪದಿಂದ ಬ್ರಹ್ಮಪಟ್ಟವುಂಟಾಗುವುದು. ಎಂಬತ್ತುಲಕ್ಷ ಪಂಚಾಕ್ಷರಮಂತ್ರಜಪದಿಂದ ಮಾನವನು ವಿಷ್ಣುಪದವಿಯನ್ನೈದುವನು. ನೂರುಲಕ್ಷ ಅಥವಾ ಒಂದು ಕೋಟಿ ಶಿವಪಂಚಾಕ್ಷರಿಯನ್ನು ಜಪಮಾಡಿದರೆ ಸಾಕ್ಷಾದ್ರುದ್ರಪದವಿಯೇ ಲಭಿಸುವುದು. ॥೪೪-೪೫-೪೬॥

ಲಕ್ಷಂ ಜಪ್ತ್ವಾ ತಥಾಯುಷ್ಯಂ ದ್ವಿಲಕ್ಷಜಪತಃ ಸುತಾನ್ ।
ನಿಷ್ಕಾಮೋ ಲಕ್ಷದಶಕಂ ಜಪ್ತ್ವಾ ಸ್ಯೇತಾವಿಮುಕ್ತಕಂ ॥೪೭॥

ವಿನಿಯೋಗಃ ಸಮಾಖ್ಯಾತಸ್ತಜ್ಜಪೇ ಲಕ್ಷಣಂ ಶೃಣು ।
ವಿಧಿನೋಕ್ತೇನ ಮಾರ್ಗೇಣ ಮಂತ್ರಾಭ್ಯಾಸೋ ಜಪಃ ಸ್ಮೃತಃ॥೪೮॥

ಜಪಸ್ತು ತ್ರಿವಿಧಃ ಪ್ರೋಕ್ತೋ ವಾಚಿಕೋಪಾಂಶು ಮಾನಸಃ ।
ವಾಚಿಕೋಪಾಂಶುರುಚ್ಚೈಶ್ಚ ದ್ವಿವಿಧಃ ಪರಿಕೀರ್ತಿತಃ ॥೪೯॥

ಮಾನಸೋ ಮನನಧ್ಯಾನಭೇದದ್ವೈವಿಧ್ಯಮಾಸ್ಥಿತಃ ।
ಉಚ್ಚೈರ್ಜಪಾದುಪಾಂಶುಶ್ಚ ಸಹಸ್ರಗುಣಮುಚ್ಯತೇ ॥೫೦॥

ಮಾನಸಾಚ್ಚ ತಥಾ ಧ್ಯಾನಮನಂತಗುಣಮುಚ್ಯತೇ ।
ಉಮಾಸಹಾಯಂ ಮಾಂ ದೇವಂ ನೀಲಗ್ರೀವಂ ತ್ರಿಲೋಚನಂ॥೫೧॥

---

ಒಂದು ಲಕ್ಷ ಪಂಚಾಕ್ಷರಮಂತ್ರಜಪದಿಂದ ದೀರ್ಘಾಯುಷ್ಯವನ್ನೂ, ಎರಡು ಲಕ್ಷ ಜಪದಿಂದ ಯೋಗ್ಯರಾದ ಮಕ್ಕಳನ್ನೂ, ಯಾವ ಫಲಾಪೇಕ್ಷೆಯೂ ಇಲ್ಲದೇ ಹತ್ತುಲಕ್ಷ ಜಪಮಾಡುವವನು ಅವಿಮುಕ್ತಕ್ಷೇತ್ರವನ್ನೂ ಪಡೆಯುವರು. ದೇವಿ, ಇಲ್ಲಿಯವರೆಗೆ ಈ ಮಂತ್ರದ ವಿನಿಯೋಗವು ಹೇಳಲ್ಪಟ್ಟಿತು. ಇನ್ನು ಜಪಮಾಡುವ ಲಕ್ಷಣವನ್ನು ಹೇಳುತ್ತೇನೆ ಕೇಳು ; ವಿಧಿಪ್ರಕಾರ ಹೇಳಿರುವ ಮಾರ್ಗವನ್ನನುಸರಿಸಿ ಮಂತ್ರವನ್ನು ಅಭ್ಯಾಸಮಾಡುವುದೇ ಅಂದರೆ ಪುನಃ ಪುನಃ ಉಚ್ಚಾರಮಾಡುವುದೇ ಜಪವೆನಿಸುವುದು. ॥೪೭-೪೮॥

ಜಪವು, ವಾಚಿಕ, ಉಪಾಂಶು ಮತ್ತು ಮಾನಸಿಕವೆಂಬುದಾಗಿ ಮೂರು ವಿಧವಾಗಿರುವುದು. ವಾಚಿಕ, ಉಪಾಂಶು ಈ ಎರಡು ವಿಧದ ಜಪಗಳು ಮಂತ್ರವನ್ನು ಗಟ್ಟಿಯಾಗಿ ಮತ್ತು ಮೆಲ್ಲಗೆ ಈರೀತಿ ಉಚ್ಚರಿಸುವುದರಿಂದ ಎರಡು ಬಗೆಯಾಗಿದೆ. ಮಾನಸಜಪವೂ, ಮನನ ಮತ್ತು ಧ್ಯಾನರೂಪವಾದ ಎರಡು ಭೇದಗಳಿಂದ ಕೂಡಿದೆ. ಗಟ್ಟಿಯಾಗಿ ಜಪಮಾಡುವ ವಾಚಕರೂಪವಾದ ಜಪಕ್ಕಿಂತ, ಮೆಲ್ಲಗೆ ಉಚ್ಚರಿಸಿ ಮಾಡುವ ಉಪಾಂಶುರೂಪವಾದ ಜಪವು ಸಾವಿರಪಾಲು ಉತ್ತಮವೆನಿಸುತ್ತದೆ. ॥೪೯-೫೦॥

ಧ್ಯಾತ್ವಾ ಜಪೇತ್ತಥಾ ಮಂತ್ರಂ ಸ ಚಾನಂತಫಲಃ ಸ್ಮೃತಃ ।
ಅಥವಾ ಪ್ರಾಕೃತಂ ಭಾವಂ ಸ್ವೀಯಮುತ್ಸೃಜ್ಯ ದೇಹಕಂ ॥೫೨॥

ಶಿವೋಽಹಮಿತಿ ಸಂಚಿಂತ್ಯ ಸಾಧಯೇದಿದಮುತ್ತಮಂ ।
ಉಚ್ಚೈರ್ಜಪಸ್ತು ಸರ್ವೇಷಾಂ ಯಥೋಕ್ತಫಲದೋ ನೃಣಾಂ॥೫೩॥

ನೀಚೈಃ ಶ್ರುತೋ ನ ಚೇತ್ಸೋಽಪಿ ಚ್ಯುತಶ್ಚೇನ್ನಿಷ್ಫಲೋಭವೇತ್ ।
ಋಷಿಶ್ಛಂದೋ ದೈವತಂ ಚ ಧ್ಯಾಯನ್ಮಂತ್ರಂ ಜಪೇತ್ಸುಧೀಃ ॥೫೪॥

ದೀಪಸ್ತಂಭನರಚ್ಛಾಯಾ ಛಾಯಾ ಚಾಭ್ರಸ್ಯ ಸಂತಮಃ ।
ನ ಜಪೇತ ವಿಶುದ್ಧಾತ್ಮಾ ಶೂದ್ರಮ್ಲೇಚ್ಛಾಂತ್ಯಸನ್ನಿಧೌ ॥೫೫॥

---

ಉಪಾಂಶುಜಪಕ್ಕಿಂತಲೂ ಮಾನಸಿಕಧ್ಯಾನವು ಅಪರಿಮಿತಗುಣವೆನಿಸುವುದು. ಉಮಾರಮಣನೂ, ವಿಷಕಂಠನೂ, ಮುಕ್ಕಣ್ಣನೂ, ಮಹಾದೇವನೂ ಎನಿಸಿದ ನನ್ನನ್ನು ಧ್ಯಾನಮಾಡಿ ಹಿಂದೆ ಹೇಳಿದಂತೆ ಪಂಚಾಕ್ಷರಮಂತ್ರ ಜಪಮಾಡಿದರೆ ಅದು ಅನಂತ ಫಲಪ್ರದವಾದುದೆಂದು ಹೇಳಲ್ಪಟ್ಟಿದೆ. ಅಥವಾ ಪ್ರಾಕೃತವಾದ ತನ್ನ ದೇಹಭಾವನೆಯನ್ನೆಲ್ಲಾ ತ್ಯಾಗಮಾಡಿ 'ಶಿವೋಽಹಂ' (ನಾನೇ ಶಿವನಾಗಿದ್ದೇನೆಂದು) ಈ ಮಂತ್ರವನ್ನು ಸಾಧಿಸುವುದು ಅತ್ಯುತ್ತಮವಾದ ಮಾರ್ಗವಾಗಿರುವುದು. ಇದೇ ಮನನರೂಪವಾದ ಮಾನಸಿಕ ಜಪ. ॥೫೧-೫೨॥

ಎಲ್ಲ ಮಾನವರಿಗೂ ಕೇಳುವಂತೆ ಗಟ್ಟಿಯಾಗಿ ಜಪಮಾಡುವುದು ವಿಧ್ಯುಕ್ತ ಫಲಪ್ರದವಾಗಿರುವುದು ನಿಜ. ಆದರೆ ಅದು ನೀಚಜನರಿಗೆ ಕೇಳಿಸುವಂತಿರಬಾರದು ಹಾಗೆ ನೀಚರಿಗೆ ಶ್ರುತವಾದರೂ ಒಂದು ವೇಳೆ ಮಂತ್ರವೇನಾದರೂ ಸಂಖ್ಯೆಯಲ್ಲಿ ಬಿಟ್ಟುಹೋದರೆ ಆಗ ಆ ಮಂತ್ರಜಪವು ನಿಷ್ಪ್ರಯೋಜನವಾಗುವುದು. ಋಷಿ, ಛಂದಸ್ಸು, ದೇವತೆ ಮುಂತಾದವುಗಳನ್ನು ಮೊದಲು ಹೇಳಿ ವಿಧಿಜ್ಞನಾದವನು, ಅನಂತರ ಈ ಮಂತ್ರವನ್ನು ಜಪಮಾಡಬೇಕು. ದೀಪದಕಂಬ ಮತ್ತು ಮನುಜರು ಇವರ ನೆರಳುಗಳಲ್ಲಿಯೂ ಮೋಡದ ನೆರಳು, ಗಾಢಾಂಧಕಾರ ಇವುಗಳಲ್ಲಿಯೂ ಶೂದ್ರರು, ಮ್ಲೇಚ್ಛರು ಮತ್ತು ಪಂಚಮರ ಸಮಕ್ಷಮವೂ ಪರಿಶುದ್ಧಾಂತಃಕರಣನಾದ ಮಾನವನು ಈ ಪಂಚಾಕ್ಷರಮಂತ್ರವನ್ನು ಎಂದಿಗೂ ಜಪಿಸಬಾರದು. ॥೫೪-೫೫॥

ವಿಶೇಷೋಽಸ್ಯೈವ ವಿಧಿಃ ಪ್ರೋಕ್ತಃ ಷಡಕ್ಷರಜಪಸ್ಯ ಹಿ ।
ಉತ್ಪತ್ತಿಮಸ್ಯ ಮಂತ್ರಸ್ಯ ಪುನರನ್ಯಾಂ ನಿಬೋಧ ಮೇ ॥೫೭॥

॥ ಈಶ್ವರ ಉವಾಚ ॥

ಸುಗಮಂ ನಿಗಮಾಂತಗೋಚರಂ
ತ್ವಗಜಾರ್ಧಾಂಗಧರಾಗಮೋಕ್ತಸಾರಂ ।
ನಗಮೌಳಿಸುತೇ ನಗಾಧಿವಾಸ
ಪ್ರಿಯಮೇತಜ್ಜಪತಾಂ ನಚಾಘಸಂಘಃ ॥೫೭॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಶಿವಪಂಚಾಕ್ಷರೀಜಪಪುರಶ್ಚರಣಾದಿ ವಿಧಿನಿರ್ಣಯೋ ನಾಮ ಪಂಚತ್ರಿಂಶೋಽಧ್ಯಾಯಃ

---

ಗಿರಿಜೆಯೇ, ಈರೀತಿಯಾಗಿ ಈ ಷಡಕ್ಷರಮಂತ್ರದ ವಿಧಿಯನ್ನು ನಿನಗೆ ವಿಸ್ತಾರವಾಗಿ ಹೇಳಿರುತ್ತೇನೆ. ಇನ್ನು ಈ ಮಂತ್ರದ ಉತ್ಪತ್ತಿರೂಪವಾದ ಕಥೆಯನ್ನು ಈಗ ನನ್ನಿಂದ ನೀನು ತಿಳಿಯುವವಳಾಗು. ॥೫೬॥

ಪರ್ವತರಾಜಕುಮಾರಿಯೇ ಕೇಳು. ವೇದಾಂತಗೋಚರವೆನಿಸಿ ಪಾರ್ವತೀ ರಮಣನಾದ ನನ್ನ ಅರ್ಚನವಿಧಾನವನ್ನು ತಿಳಿಸುವ ಶೈವಾಗಮದಲ್ಲಿ ಹೇಳಿರುವ ಸಾರಮಂತ್ರವೂ, ಸುಲಭವಾಗಿ ಜ್ಞಾನಪ್ರದವೂ, ಶಿವನಿಗೆ ಪ್ರಿಯಕರವೂ ಆದ ಈ ಷಡಕ್ಷರಮಂತ್ರವನ್ನು ಜಪಿಸುವವರಿಗೆ ಪಾಪಸಂಬಂಧವೇ ಇಲ್ಲವೆಂದು ತಿಳಿಯೆಂದು ಶಿವನು ಪಾರ್ವತಿಗೆ ಹೇಳಿದುದನ್ನು ಸ್ಕಂದನು ಜೈಗೀಷವ್ಯಾದಿಗಳಿಗೆ ಹೇಳಿದನು. ॥೫೭॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ಶಿವಪಂಚಾಕ್ಷರೀಜಪ ಪುರಶ್ಚರಣೆಯೇ ಮೊದಲಾದ ವಿಧಿವರ್ಣನೆಯೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಷಟ್ತ್ರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಶಿವೇನೋಕ್ತಂ ಸಮಾಸೇನ ದೇವ್ಯೈ ದೇವೇಸ ಕೀರ್ತಿತಂ ।
ಶೃಣುಷ್ವ ಮುನಿಭಿಃ ಸಾರ್ಧಂ ಗಣೈಃ ಸುರಗಣೈಃ ಸಹ ॥೧॥

ಪುರಾ ಕಲ್ಪಾಂತರೇ ಶಂಭುಃ ಸೃಷ್ಟ್ಯುಪಾಯಮಚಿಂತಯತ್ ।
ಪಂಚಾನನಃ ಸ್ವಯಂ ಜಾತಃ ಮಾಯಯಾಸ್ವೀಕೃತವಿಗ್ರಹಃ ॥೨॥

ತೇಜೋರಾಶಿಃ ಸ್ವಪ್ರಕಾಶೋ ಸ್ವಭಾಸಾ ಭಾಸಯನ್ಜಗತ್ ।
ವದನಾನಿ ಮಹೇಶಸ್ಯ ಪ್ರಾದುರಾಸನ್ಸಮಂತತಃ ॥೩॥

---

## ಮೂವತ್ತಾರನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೆ, ದೇವಿಯ ಪ್ರಶ್ನೆಯಂತೆ ಪರಮೇಶ್ವರನು ಪಾರ್ವತಿಗೆ ಸಂಗ್ರಹವಾಗಿ ಹೇಳಿದ ಈ ವಿಷಯವನ್ನು ಇಲ್ಲಿ ನೆರೆದಿರುವ ರುದ್ರಗಣಗಳು ಮುನಿವರ್ಯರು ಮತ್ತು ದೇವಗಣಗಳೊಡನೆ ಕೂಡಿ ನೀನು ಸಾವಧಾನವಾಗಿ ಕೇಳು. ಹಿಂದೆ ಒಂದಾನೊಂದು ಕಲ್ಪದಲ್ಲಿ ಒಂದುಸಾರಿ ಶಂಭುವು ಪ್ರಪಂಚದ ಸೃಷ್ಟಿಯ ಉಪಾಯವನ್ನು ಚಿಂತಿಸಿ ಮಾಯೆಯಿಂದ ತಾನೇ ಐದುಮುಖವುಳ್ಳವನಾದನು. ಅಂದರೆ ಪಂಚಮುಖಾತ್ಮಕವಾದ ಒಂದು ಶರೀರವನ್ನು ಪಡೆದನು. ॥೧-೨॥

ತೇಜಸ್ಸಿಗೆ ರಾಶಿಯಾಗಿ ಆತ್ಮಪ್ರಕಾಶವುಳ್ಳವುಗಳಾಗಿ ತಮ್ಮ ತೇಜಸ್ಸಿನಿಂದ ಜಗತ್ತನ್ನೆಲ್ಲಾ ಬೆಳಗಿಸುತ್ತಾ ಆ ಮಹೇಶ್ವರನ ಐದು ಮುಖಗಳು ಎಲ್ಲಾ ಕಡೆಗಳ

ಪ್ರಾಕ್ಪ್ರತ್ಯಗ್ದಕ್ಷಿಣೋದೀಚಂ ಊರ್ಧ್ವಂ ವರ್ಣೈಶ್ಚ ಪಂಚಭಿಃ ।
ತ್ರ್ಯಕ್ಷಾಣಿ ಸೋಮಧಾಮೋದ್ಯಚ್ಛೇಖರಾಣಿ ಸಮಂತತಃ ॥೪॥

ತತ್ಪುರುಷಂ ಮುಖಂ ಸೌಮ್ಯಂ ಶುದ್ಧಬಿಂಬಸಮಪ್ರಭಂ ।
ಬಾಲೇಂದುಮುಕುಟಂ ತ್ರ್ಯಕ್ಷಂ ಸುಸ್ಮಿತಂ ಕರುಣಾಧಿಕಂ ॥೫॥

ವಿರಾಟ್ತತಃ ಪ್ರಾದುರಭೂನ್ನಕಾರಾತ್ಮಾ ಪ್ರಜಾಪತಿಃ ।
ಭೂರಭೂಚ್ಚ ತತೋ ವಿಶ್ವಪ್ರತಿಷ್ಠಾ ಶಾಶ್ವತೀ ತತಃ ॥೬॥

ಸ ಏಷ ಭಗವಾನ್ಬ್ರಹ್ಮಾ ಲೋಕಸರ್ಗ ಪಿತಾಮಹಃ ।
ಅಘೋರಂ ದಕ್ಷಿಣಂ ವಕ್ತ್ರಂ ಪ್ರಾದುರಾಸೀನ್ಮಹೇಶಿತುಃ ॥೭॥

ದಂಷ್ಟ್ರಾಕರಾಲಭ್ರುಕುಟೀ ನಿಟಿಲಾಕ್ಷೋ ಜ್ವಲತ್ಪ್ರಭಂ ।
ಇಂದ್ರನೀಲಸಮಾಕಾರಂ ತ್ರ್ಯಕ್ಷಂ ಬಾಲೇಂದುಭೂಷಣಂ ॥೮॥

---

ಲ್ಲಿಯೂ ಬೆಳಗುತ್ತಾ ಪ್ರತ್ಯಕ್ಷವಾದವು. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಮತ್ತೆ ಮೇಲೆ, ಈರೀತಿಯಾಗಿ ಐದುಬಗೆಯ ಸ್ಥಾನಗಳನ್ನು ಪಡೆದು ಐದು ರೀತಿಯ ಬಣ್ಣವುಳ್ಳವುಗಳಾಗಿ ಕಾಣಿಸಿಕೊಂಡವು. ಎಲ್ಲ ಮುಖಗಳಲ್ಲಿಯೂ ಮೂರು ಕಣ್ಣುಗಳೂ ಚಂದ್ರಧಾಮಯುಕ್ತವಾದ ಶಶಿಕಲೆಯೂ, ತೇಜೋಮಯವಾಗಿ ಕಂಡುಬಂದವು. ಆ ಪರಮಪುರುಷನ ಪೂರ್ವದಿಕ್ಕಿನ ತತ್ಪುರುಷವೆಂಬ ಮೂರ್ತಿಯ ಮುಖವು ಸೌಮ್ಯವಾಗಿಯೂ ಬಾಲಚಂದ್ರನಿಗೆ ಸಮನಾದ ಕಾಂತಿಯುಕ್ತವಾಗಿಯೂ ಶಶಿಕಲೆ, ರತ್ನಮಯವಾದ ಕಿರೀಟ, ಮೂರುಕಣ್ಣು ಇವುಗಳುಳ್ಳದ್ದಾಗಿ ಮಂದಹಾಸವನ್ನು ಬೀರುತ್ತಾ ದಯಾಯುಕ್ತವಾಗಿ ಕಂಡುಬಂದಿತು. ॥೩-೪-೫॥

ಆ ಮುಖದಿಂದಲೇ ನಕಾರಸ್ವರೂಪನಾದ ಅಖಂಡ ವಿರಾಡ್ರೂಪನಾದ ಪ್ರಜಾಪತಿಯು ಪ್ರತ್ಯಕ್ಷನಾದನು. ಅಂತಹ ವಿರಾಡ್ರೂಪದಿಂದಲೇ ಈ ಭೂಮಿಯು ಶಾಶ್ವತವಾಗಿ ಸೃಷ್ಟವಾಯಿತು. ಅನಂತರ ಸಕಲ ಲೋಕಗಳ ಸೃಷ್ಟಿಕರ್ತನೂ ಪಿತಾಮಹನೂ ಎನಿಸಿದ ಭಗವಂತನಾದ ಬ್ರಹ್ಮದೇವನು ಸೃಷ್ಟನಾದನು. ಅನಂತರ ಆ ಮಹೇಶ್ವರನ ಅಘೋರರೂಪವಾದ ದಕ್ಷಿಣದಿಕ್ಕಿನ ಮುಖವು ಅತಿ ಭಯಂಕರವಾಗಿ ಕಾಣಿಸಿಕೊಂಡಿತು. ॥೬-೭॥

ಆ ಮುಖವಾದರೋ ಕೋರದಾಡೆ, ವಕ್ರವಾದ ಮತ್ತು ಭಯಂಕರ ಹುಬ್ಬುಗಂಟಿನಿಂದ ಕೂಡಿದ ಹಣೆಗಣ್ಣುಗಳಿಂದ ಪ್ರಜ್ವಲಿಸಲು ಆರಂಭವಾಯಿತು. ಆ

ಸ್ವರಾಡಾಖ್ಯಸ್ತತೋ ರುದ್ರಃ ಶೂಲಹಸ್ತೋ ವಿನಿರ್ಗತಃ ।
ಮಕಾರವಾಚ್ಯೋ ಭಗವಾನ್ಜ್ಯೋತಿಷಾಮಯನಸ್ತದಾ ॥೯॥

ಸದ್ಯೋಜಾತಮುಖಂ ಶಂಭೋಃ ಶರದಂಭೋಜಸಚ್ಛವಿಃ ।
ದೀಪ್ತತ್ರಿನಯನಂ ಸೋಮಧಾಮಸಾಮಶಿಖಂ ಮುನೇ ॥೧೦॥

ಸಂರಾಡಾಖ್ಯಸ್ತತೋ ವಿಷ್ಣುಃ ಶಿಕಾರಾದುದ್ಬಭೂವ ಹ ।
ಆಪಸ್ತಸ್ಮಾತ್ಸಮುದ್ಭೂತಾಃ ಲೋಕಸರ್ಗೇ ಪುರಾ ಮುನೇ ॥೧೧॥

ವಾಮದೇವಮುಖಂ ಶಂಭೋಃ ಪ್ರಾದುರ್ಭೂತಂ ತದಾ ವಶಾತ್ ।
ಪದ್ಮರಾಗಸಮಪ್ರಖ್ಯಂ ಬಾಲೇಂದುಕೃತಶೇಖರಂ ॥೧೨॥

ತ್ರ್ಯಕ್ಷಂ ಪ್ರಸನ್ನವದನಂ ವಕಾರಾಖ್ಯಾದಪೀಶ್ವರಃ ।
ವಾಯುಃ ಪ್ರಾಣಶರೀರಾತ್ಮಾ ಜಪತಾಂ ಸಂಬಭೂವ ಹ ॥೧೩॥

---

ಮುಖವು ಇಂದ್ರನೀಲಮಣಿಗೆ ಸಮಾನವಾದ ಆಕಾರವುಳ್ಳದುದೂ, ಮೂರುಕಣ್ಣುಗಳುಳ್ಳದುದೂ ಬಾಲಚಂದ್ರನನ್ನು ಮುಡಿಯಲ್ಲಿ ಅಲಂಕರಿಸಿಕೊಂಡಿರುವುದೂ ಆಯಿತು ಅದರಿಂದಲೇ ಸ್ವರಾಟ್ ಸಂಜ್ಞಕನಾದ ರುದ್ರದೇವನು ತ್ರಿಶೂಲಪಾಣಿಯಾಗಿ ಹೊರಹೊರಟನು. ಆ ಭಗವಂತನು ಮಕಾರದಿಂದ ಗೋಚರನೂ ತೇಜಸ್ಸುಗಳಿಗೆ ಆಶ್ರಯನೂ ಆಗಿ ಕೇವಲ ಜ್ಯೋತೀರೂಪದಿಂದ ಗೋಚರನಾದನು. ||೮-೯||

ಶರದೃತುವಿನ ತಾವರೆಯಂತೆ ಕಾಂತಿಯುಳ್ಳ ಆ ಶಂಭುವಿನ ಸದ್ಯೋಜಾತ ಮುಖವು, ಸೋಮಸೂರ್ಯಾಗ್ನಿರೂಪವಾದ ಮೂರುಕಣ್ಣುಗಳಿಂದ ಪ್ರಜ್ವಲಿಸುತ್ತಾ ಅರ್ಧಚಂದ್ರಶಿರೋಭೂಷಣವಾಗಿ ಗೋಚರವಾಯಿತು. ಆದರಿಂದ ಸಂರಾಟ್ಸ್ವರೂಪನಾದ ವಿಷ್ಣುವು ಶಿಕಾರದಿಂದ ಉತ್ಪನ್ನನಾದನು. ಅಯ್ಯ ಜೈಗೀಷವ್ಯಮುನಿಯೆ? ಮೊದಲು ಪ್ರಪಂಚಸೃಷ್ಟಿಯಕಾಲದಲ್ಲಿ ಆ ವಿಷ್ಣುವಿನಿಂದ ಜಲರಾಶಿ ಸೃಷ್ಟವಾಯಿತು. ||೧೦-೧೧||

ಅನಂತರ ಆ ಶಂಕರನ ವಾಮದೇವನೆಂಬ ಮುಖವು ಗೋಚರವಾಯಿತು. ಅದು ಪದ್ಮರಾಗಮಣಿಗೆ ಸಮನಾದ ಕಾಂತಿಯುಳ್ಳದ್ದಾಗಿ ಬಾಲಚಂದ್ರಶೇಖರವೆನಿಸಿ, ಮುಕ್ಕಣ್ಣುಗಳುಳ್ಳದ್ದಾಗಿಯೂ, ನಿರ್ಮಲಮುಖಕಾಂತಿಯುಳ್ಳದ್ದಾಗಿಯೂ ಪ್ರಕಾಶಿತವಾಯಿತು. ವಕಾರರೂಪವಾದ ಆಮುಖದಿಂದ ಜಪಮಾಡುವವರ ಪ್ರಾಣ ಮತ್ತು

ಈಶಾನಾಖ್ಯಮುಖಂ ಶಂಭೋಃ ಸರ್ವಶರ್ವರೀನಾಥವತ್ ।
ತ್ರಿಲೋಚನಂ ಚಂದ್ರಚೂಡಮುದಭೂತ್ಸಾದಿದೈವತಂ ॥೧೪॥

ಸದಾಶಿವೋ ಯಕಾರಾಚ್ಚ ಪ್ರಾದುರ್ಭೂತೋ ಮಹೇಶ್ವರಾತ್ ।
ಪಂಚಬ್ರಹ್ಮಮಯಾಕಾರಾ ಮೂರ್ತಯೋಽಮೀ ಮಹೇಶಿತುಃ ॥೧೫॥

ತುರೀಯಾಚ್ಚ ತಥೋಂಕಾರಃ ಪ್ರಾದುರ್ಭೂತೋಽರ್ಥವಾಚಕಃ ।
ಪಂಚನಾದಾಖ್ಯರೂಪಾತ್ತೇ ಶಿವವಕ್ತ್ರಾದ್ವಿನಿರ್ಗತಾಃ ॥೧೬॥

ಜಗತಾಮುಪಕಾರಾಯ ಬ್ರಹ್ಮವಿಷ್ಣುಮಹೇಶ್ವರಾಃ ।
ಸದಾಶಿವಶ್ಚೇಶ್ವರಶ್ಚ ಪಂಚಬ್ರಹ್ಮಾಣ ಇತ್ಯಪಿ ॥೧೭॥

ಸೃಷ್ಟಿಸ್ಥಿತೌ ಚ ಸಂಹಾರತಿರೋಧಾನಾನುದರ್ಶಕಾಃ ।
ಪಂಚಾಕ್ಷರೋದ್ಭವಶ್ಚೇತ್ಥಂ ಉದಭೂದ್ಭವತೋ ಮುನೇ ॥೧೮॥

---

ಶರೀರರೂಪಿಯಾದ ವಾಯುವು ಈಶ್ವರಸಂಜ್ಞೆಯಿಂದ ಪ್ರಾದುರ್ಭವಿಸಿದನು. ॥೧೨-೧೩॥

ಆ ಶಂಭುವಿನ ಈಶಾನಸಂಜ್ಞಕವಾದ ಮುಖವು ಪೂರ್ಣಿಮಾಚಂದ್ರನಂತೆ ವಿರಾಜಿಸುತ್ತಾ, ಮೂರುಕಣ್ಣುಗಳು, ಚಂದ್ರಶಿಖೆಗಳುಳ್ಳದ್ದಾಗಿ ಆಕಾಶದೈವತೆಯೆನಿಸಿ ಉತ್ಪನ್ನವಾಯಿತು. ಆಮೇಲೆ ಮಹೇಶ್ವರಾಂಶವಾದ ಯಕಾರದಿಂದ ಸದಾ ಶಿವನು ಪ್ರಾದುರ್ಭವಿಸಿದನು. ಎಲೈ ಜೈಗೀಷವ್ಯನೆ! ಈರೀತಿ ಮಹೇಶ್ವರನದೇ ಪಂಚ ಬ್ರಹ್ಮಸ್ವರೂಪವಾದ ಈ ಆಕಾರಗಳು. ॥೧೪-೧೫॥

ಕೊನೆಯ ಮುಖದಿಂದ ಸರ್ವಾರ್ಥವಾಚಕವಾದ ಓಂಕಾರವು ಉದ್ಭವವಾಯಿತು. ಐದುನಾದರೂಪವಾದ ಶಿವನ ಮುಖದಿಂದ ಆ ಮೂರ್ತಿಗಳೆಲ್ಲರೂ ಉತ್ಪನ್ನರಾದರು. ಲೋಕೋಪಕಾರಕ್ಕೋಸ್ಕರ ಬ್ರಹ್ಮ, ವಿಷ್ಣು, ಮಹೇಶ್ವರ, ಸದಾಶಿವ ಮತ್ತು ಈಶ್ವರ ರೆನಿಸಿದ ಐದುಮಂದಿ ಬ್ರಹ್ಮರೂ, ಸೃಷ್ಟಿ, ಪಾಲನೆ, ಸಂಹಾರ, ತಿರೋಧಾನ ಮತ್ತು ಅನುದರ್ಶನರೂಪವಾದ ಕಾರ್ಯಗಳಲ್ಲಿ ನಿರತರಾದರು. ಅಯ್ಯ ಜೈಗೀಷವ್ಯ ಮುನಿಯೆ! ಆ ಮಹೇಶ್ವರನ ಪಂಚಾಕ್ಷರಮಂತ್ರದ ಉತ್ಪತ್ತಿಯು ಹೀಗೆ ಪಂಚಮುಖಗಳಿಂದಲೂ ಆಯಿತೆಂದು ತಿಳಿ. ॥೧೬-೧೭-೧೮॥

ಆ ಶಂಭುವಿನ ಮುಖಗಳಕ್ರಮವನ್ನನುಸರಿಸಿ, ಪೂರ್ವಮುಖವಾದ ತತ್ಪೂರುಷ ದಿಂದ ಕಮಲಸಂಭವನಾದ ಬ್ರಹ್ಮನು ಜನಿಸಿ, ಪ್ರಪಂಚಸೃಷ್ಟಿರೂಪವಾದ ಕಾರ್ಯದಲ್ಲಿ

ಮುಖಾದಿಕ್ರಮತೋ ಪೂರ್ವಂ ಶಂಭೋರಂಭೋಜಸಂಭವಃ ।
ನಿಯುಕ್ತಃ ಸೃಷ್ಟಿಕರಣೇ ಪಾಲನೇ ಚಾಂಬುಜೇಕ್ಷಣಃ ॥೧೯॥

ರುದ್ರಃ ಸಂಹರಣೇ ಯುಕ್ತೋ ನಿಯುಕ್ತಃ ಶೂಲಪಾಣಿನಾ ।
ತಿರೋಧಾನಸ್ಯ ಜಗತೋ ಈಶ್ವರೋ ವಿನಿಯೋಜಿತಃ ॥೨೦॥

ಸದಾಶಿವೋಽನುಗ್ರಹಣೇ ಜಗತೋಽಸ್ಯ ನಿಯೋಜಿತಃ ।
ಮಹಾದೇವೇನ ವಿಪ್ರೇಂದ್ರ ಭೂತಾದಿಕ್ರಮವರ್ಣಕೈಃ ॥೨೧॥

ಏತೇ ಹಿ ಪಶವಃ ಪ್ರೋಕ್ತಾಃ ಪತಿರೇಷಾಂ ಮಹೇಶ್ವರಃ ।
ಪ್ರಣವಸ್ಯಾರ್ಥ ಏವೇಹ ಅಯಂ ವರ್ಣಕ್ರಮೇಶ್ವರಾಃ ॥೨೨॥

ಪ್ರಕಾಶ್ಯಃ ಸರ್ವವರ್ಣಾನಾಂ ಶಿವ ಏವ ಮಹೇಶ್ವರಃ ।
ಪಂಚಾಕ್ಷರಮಿದಂ ಪ್ರೋಕ್ತಂ ಶತರುದ್ರೀಯ ಮಧ್ಯಗಂ ॥೨೩॥

---

ನಿಯಮಿಸಲ್ಪಟ್ಟನು. ಪಶ್ಚಿಮದಿಙ್ಮುಖವಾದ ಸದ್ಯೋಜಾತದಿಂದ ತಾವರೆಗಣ್ಣನಾದ ವಿಷ್ಣುವು ಜನಿಸಿ ಜಗದ್ರಕ್ಷಣಕಾರ್ಯದಲ್ಲಿ ನಿಯುಕ್ತನಾದನು. ದಕ್ಷಿಣದಿಙ್ಮುಖವಾದ ಅಘೋರದಿಂದ ರುದ್ರನು ಜನಿಸಿ ಶೂಲಪಾಣಿಯಾದ ಮಹೇಶ್ವರನಿಂದ ಪ್ರಪಂಚ ಸಂಹಾರರೂಪವಾದಕಾರ್ಯದಲ್ಲಿ ನಿಯಮಿತನಾದನು. ಉತ್ತರಾಭಿಮುಖವಾದ ವಾಮದೇವಮುಖದಿಂದ ಈಶ್ವರನು ಜನಿಸಿ, ಜಗತ್ತಿನ ತಿರೋಧಾನರೂಪಕಾರ್ಯದಲ್ಲಿ ನಿಯಮಿಸಲ್ಪಟ್ಟನು. ಊರ್ಧ್ವಮುಖವಾದ ಈಶಾನಮುಖದಿಂದ ಜನಿಸಿದ ಸದಾಶಿವನು ಜಗತ್ತಿಗೆಲ್ಲಾ ಅನುಗ್ರಹಮಾಡುವಕಾರ್ಯದಲ್ಲಿ ನಿಯಮಿಸಲ್ಪಟ್ಟನು. ಅಯ್ಯ ಬ್ರಾಹ್ಮಣೋತ್ತಮನೆ! ಆ ಮಹಾದೇವನು ಈರೀತಿ ಐದುಮೂರ್ತಿಗಳನ್ನೂ ಪೃಥಿವ್ಯಪ್ತೇಜೋವಾಯುರಾಕಾಶರೂಪವಾದ ಪಂಚಭೂತಗಳಿಂದ ಆಯಾವರ್ಣಾನುಗುಣವಾಗಿ ನಿರ್ಮಿಸಿದನು. ॥೧೯-೨೦-೨೧॥

ತತ್ಪುರುಷ, ಸದ್ಯೋಜಾತ, ಅಘೋರ, ವಾಮದೇವ ಮತ್ತು ಈಶಾನರೂಪವಾದ ಐದು ಮೂರ್ತಿಗಳೂ ಪಶುಗಳೆನಿಸುವರು. ಇವುಗಳ ಒಡೆಯನು ಆ ಮಹೇಶ್ವರನು. ಈ ಪ್ರಣವರಹಿತವಾದ ಪಂಚಾಕ್ಷರಿಯ ಅರ್ಥವೇ ಇದು. ಇದರಲ್ಲಿಯೇ ವರ್ಣಕ್ರಮಾನುಗುಣವಾಗಿ ಈಶ್ವರರು ಪ್ರಕಾಶಿಸಲ್ಪಡುವರು. ಸಕಲ ವರ್ಣಗಳಿಗೂ ಶಿವನೇ ಮಹೇಶ್ವರನು ಅಂದರೆ ಓಂಕಾರರೂಪನು. ಅಯ್ಯ ಜೈಗೀಷವ್ಯಮುನಿಯೆ! ಶತರುದ್ರೀಯಮಂತ್ರಮಧ್ಯಗತವಾದ ಈ ಪಂಚಾಕ್ಷರಮಂತ್ರವಿದ್ಯೆಯು ಈರೀತಿ ನಿನಗೆ ಹೇಳಲ್ಪಟ್ಟಿದೆ. ॥೨೨-೨೩॥

ವಾಮದೇವೋಽಸ್ಯ ಋಷಿರಾಟ್ಪಂಕ್ತಿಶ್ಛಂದಃ ಪ್ರಕೀರ್ತಿತಃ ।
ಸದಾಶಿವೋಽಸ್ಯ ದೇವೋ ಹಿ ಓಂ ಬೀಜಂ ಶಕ್ತಿ ನಂ ಮುನೇ ॥೨೪॥

ಬ್ರಹ್ಮಬೀಜಮಿದಂ ಮಂತ್ರಂ ಪ್ರೋಕ್ತಂ ವೈ ದ್ವಿಜಸತ್ತಮ ।
ಮಂಕೀಲಕಮಂತ್ರೇಣ ನ್ಯಾಸಮಸ್ಯ ಯಥಾಕ್ರಮಂ ॥೨೫॥

ಅಂಗುಲೀದೇಹವಕ್ತ್ರೇಷು ನ್ಯಸೇತ್ಪಂಚಾಕ್ಷರಂ ಮನುಂ ।
ಓಂ ನಂ ತತ್ಪುರುಷಾಯೇತಿ ಮಂ ಅಘೋರಂ ಪ್ರಚಕ್ಷತೇ ॥೨೬॥

ಶಿಂ ಸದ್ಯೋಜಾತಕಾಯೇತಿ ವಾಂ ವಾಮಾಯೇತಿ ಸಾ ಮುನೇ ।
ಯಂ ಈಶಾನಾಯ ಚೇತ್ಯೇವಂ ನಮೋಽಂತೇನ ನ್ಯಸೇತ್ಕ್ರಮಾತ್ ॥೨೭॥

ಅಂಗುಲೀಷು ಹೃದಿನ್ಯಾಸಂ ಕೃತ್ವಾಂಗೇಷು ಮುನೀಶ್ವರ ।
ಸರ್ವಜ್ಞಧಾಮ್ನೇ ಹೃದಯಂ ತೃಪ್ತಿಧಾಮ್ನೇ ಶಿರಸ್ತಥಾ ॥೨೮॥

---

ಈ ಪಂಚಾಕ್ಷರ ಮಂತ್ರಕ್ಕೆ ವಾಮದೇವನೇ ಋಷಿವರನು; ಶಕ್ತಿಯೆಂಬುದೇ ಛಂದಸ್ಸು; ಸದಾಶಿವನು ದೇವತೆ; ಓಂಕಾರವೇ ಬೀಜವು; ನಂಕಾರವು ಶಕ್ತಿ; ಅಯ್ಯ ಬ್ರಾಹ್ಮಣೋತ್ತಮನೆ, ಇದು ಬ್ರಹ್ಮಬೀಜಯುಕ್ತವಾದ ಮಂತ್ರವೆಂದು ಹೇಳಲ್ಪಟ್ಟಿದೆ. 'ಮಂ ಕೀಲಕಂ' ಎಂಬ ಮಂತ್ರವನ್ನುಚ್ಚರಿಸಿ ಅದಕ್ಕೆ ಕ್ರಮವಾಗಿ ಅಂಗನ್ಯಾಸಮಾಡಿ, ಬೆರಳು, ಶರೀರ, ಮುಖಗಳಲ್ಲಿ ನ್ಯಾಸಪೂರ್ವಕವಾಗಿ ಪಂಚಾಕ್ಷರ ಮಂತ್ರವನ್ನು ಜಪಿಸಬೇಕು. ॥೨೪-೨೫॥

ಓಂ ನಂ ತತ್ಪುರುಷಾಯ ನಮಃ ಅಂಗುಷ್ಠಾಭ್ಯಾಂ ನಮಃ; ಓಂ ಮಂ ಅಘೋರಾಯ ನಮಃ ತರ್ಜನೀಭ್ಯಾಂ ನಮಃ; ಓಂ ಶಿಂ ಸದ್ಯೋಜಾತಾಯ ನಮಃ ಮಧ್ಯಮಾಭ್ಯಾಂ ನಮಃ; ಓಂ ವಾಂ ವಾಮದೇವಾಯ ನಮಃ; ಅನಾಮಿಕಾಭ್ಯಾಂ ನಮಃ. ಯಂ ಈಶಾನಾಯ ಕನಿಷ್ಠಿಕಾಭ್ಯಾಂ ನಮಃ ಓಂ ಮಹೇಶಾಯ ನಮಃ ಕರತಲ ಕರಪೃಷ್ಠಾಭ್ಯಾಂ ನಮಃ ಎಂದು ಕರನ್ಯಾಸಮಾಡಬೇಕು. ಅಯ್ಯ ಮುನಿವರ್ಯನೆ, ಅನಂತರ ಓಂ ನಂ ಸರ್ವಜ್ಞಧಾಮ್ನೇ ನಮಃ ಹೃದಯಾಯ ನಮಃ; ಓಂ ಮಂ ತೃಪ್ತಿಧಾಮ್ನೇ ನಮಃ ಶಿರಸೇ ಸ್ವಾಹಾ; ಓಂ ಶಿಂ ಅನಾದಿಧಾಮ್ನೇ ನಮಃ ಶಿಖಾಯೈವಷಟ್; ಓಂ ವಾಂ ಸ್ವತಂತ್ರಾಯ ನಮಃ ಕವಚಾಯ ಹುಂ; ಓಂ ಯಂ ಅಲುಪ್ತಶಕ್ತಿಧಾಮ್ನೇ ನಮಃ ನೇತ್ರತ್ರಯಾಯ,ವಷಟ್ ಓಂ ನಮಃ ಅನಂತಶಕ್ತಯೇ ನಮಃ ಅಸ್ತ್ರಾಯ ಫಟ್" ಹೀಗೆ ಅಂಗನ್ಯಾಸವನ್ನು ಮಾಡಬೇಕು.॥೨೬-೨೭-೨೮-೨೯॥

ಶಿಖಾಮನಾದಿಧಾಮ್ನೇ ಚ ಕವಚೇಚ ಸ್ವತಂತ್ರಕಂ ।
ಅಲುಪ್ತಶಕ್ತಿಧಾಮ್ನೇ ಚ ಓಮನಂತಂ ಚ ಶಕ್ತಿ ಚ ॥೨೯॥

ಅಸ್ತ್ರಾಯ ಫಡಿತ್ಯೇವಮಂಗನ್ಯಾಸಂ ಚರೇತ್ಕ್ರಮಾತ್ ।
ಅಸ್ತ್ರಮಂತ್ರೇಣ ದಿಗ್ಬಂಧಂ ಕೃತ್ವಾ ಮೂಲೇನ ರೋಧಯೇತ್ ॥೩೦॥

ಪ್ರಜ್ಞಾನಘನಮಾನಂದಂ ಕಲ್ಯಾಣಂ ಶಿವಮವ್ಯಯಂ ।
ಧ್ಯಾಯೇದಹಮಿತಿ ಸ್ವಃಸ್ಥೋ ಸ್ವಸ್ಥಾನ್ಯಕ್ಷಾಣಿ ಧಾರಯೇತ್ ॥೩೧॥

ಧ್ಯಾಯೇದೇವಂ ವಿರೂಪಾಕ್ಷಂ ಷಡಕ್ಷರವಿಧೌ ಮುನೇ ॥೩೨॥

॥ ಧ್ಯಾನಂ ॥

ಬಿಭ್ರದ್ದೋರ್ಭಿಃ ಕುಠಾರಂ ಮೃಗಮಭಯಕರಂ ಸುಪ್ರ
ಸನ್ನೋ ಮಹೇಶಃ ಸರ್ವಾಲಂಕಾರದೀಪ್ತೋ ಸರಸಿಜನಿಲಯೋ
ವ್ಯಾಘ್ರಚರ್ಮೋತ್ತರೀಯಃ । ಧ್ಯೇಯೋ ಮುಕ್ತಾಪರಾಗಾ
ಮೃತ ರಸಕಲಿತಾದ್ರಿಪ್ರಭಾಂ ಪಂಚವಕ್ತ್ರೇ । ತ್ರ್ಯಕ್ಷಃ ಕೋಟೀರ
ಕೋಟೀಘಟಿತಹಿಮರುಚಿರ್ವರ್ತುಲೋತ್ತುಂಗಮೌಳಿಃ ॥೩೩॥

---

ಮುನಿಯೆ, ಹಿಂದೆ ಹೇಳಿದ ಅಸ್ತ್ರಮಂತ್ರದಿಂದ ದಿಗ್ಬಂಧನಮಾಡಿ, ಮೂಲ ಮಂತ್ರದಿಂದ ನಿರೋಧನಮಾಡಬೇಕು. ಜ್ಞಾನಮಯನೂ, ಜ್ಞಾನಪ್ರಕಾಶನೂ, ಆನಂದಮಯನೂ, ಕಲ್ಯಾಣಗುಣಪರಿಪೂರ್ಣನೂ, ಜಗನ್ಮಂಗಳಕರನೂ, ನಾಶ ರಹಿತನೂ, ಆದ ಶಿವನನ್ನು 'ಶಿವೋಽಹಂ' ಎಂಬ ಭಾವನೆಯಿಂದ ಸ್ವಸ್ಥಚಿತ್ತನಾಗಿ ಧ್ಯಾನಮಾಡಬೇಕು. ಸ್ಪಷ್ಟವಾಗಿ ಪಂಚಾಕ್ಷರ ಮಂತ್ರಾಕ್ಷರಗಳನ್ನು ಉಚ್ಚರಿಸ ಬೇಕು. ಈ ಷಡಕ್ಷರಮಂತ್ರವಿಧಿಯಲ್ಲಿ ಮುಕ್ಕಣ್ಣನಾದ ಮಹಾದೇವನನ್ನು ಮುಂದೆ ಹೇಳುವಂತೆ ಧ್ಯಾನಮಾಡಬೇಕು. ॥೩೦-೩೧-೩೨॥

ನಾಲ್ಕು ಕೈಗಳಲ್ಲಿಯೂ ಕ್ರಮವಾಗಿ ಕೊಡಲಿ, ಜಿಂಕೆ, ಅಭಯ ಮತ್ತು ಪ್ರಸನ್ನ ಮುದ್ರೆಗಳನ್ನು ತೋರ್ಪಡಿಸುತ್ತಾ ಪ್ರಸನ್ನಚಿತ್ತನಾಗಿರುವ ಮಹೇಶ್ವರನು ಸಕಲ ಅಲಂಕಾರಗಳಿಂದಲೂ ಪ್ರಜ್ವಲಿಸುತ್ತಾ ಕಮಲಾವಾಸನಾಗಿ, ಹುಲಿಯ ಚರ್ಮವನ್ನೇ ಉತ್ತರೀಯವನ್ನಾಗಿ ಧರಿಸಿರುವನು. ಐದು ಮುಖಗಳಲ್ಲಿಯೂ ಮುತ್ತು, ಪರಾಗ, ಅಮೃತರಸವೇ ಮೊದಲಾದವುಗಳ ಪ್ರಭೆಯು ತೋರುತ್ತಿರುವುದು. ಐದು ಮುಖ

ಏವಂ ಧ್ಯಾತ್ವಾ ಬಹಿಃ ಪೀಠೇ ಸಮಾರಾಧ್ಯೈವಮೇವ ಹಿ ।
ನಾಮ ಜ್ಯೇಷ್ಠಾ ಚ ರೌದ್ರೀ ಚ ಕಾಲೀ ಕಲವಿಕಾರಿಣೀ ॥೩೪॥

ಬಲಾವಿಕರಿಣೀ ಚೇತಿ ಬಲಪ್ರಮಥನೀ ತಥಾ ।
ದಮನೀ ಸರ್ವಭೂತಾನಾಂ ತಥಾ ವಿಪ್ರಮನೋನ್ಮನೀ ॥೩೫॥

ಪೀಠಾನಾಂ ಶಕ್ತಯಃ ಸರ್ವಾ ನವ ವೈ ಮುನಿಸತ್ತಮ ।
ಸಂಪೂಜ್ಯಾವರಣೇ ಪೂಜಾ ಪೂರ್ವಪಶ್ಚಾದುದೀಚ್ಯಕೇ ॥೩೬॥

ಪೂರ್ವೇ ಚ ಮೂರ್ತಯಃ ಪೂಜ್ಯಾಃ ಪಂಚಬ್ರಹ್ಮಾಣ ಇತ್ಯಥ ।
ಉಮಾಚಂಡೀಶ್ವರೌ ನಂದೀ ಮಹಾಕಾಲೋ ಗಣೇಶ್ವರಃ ॥೩೭॥

ಏಕದ್ವಿತ್ರಿಚತುಷ್ಕೋಣಪೂಜ್ಯಾ ದಿಗ್ದೇವತಾಃ ಕ್ರಮಾತ್ ।
ಪೂಜಾಹವನಜಾ ಯೇ ಚ ಲಕ್ಷಾಣಾಂ ಚ ಚತುಷ್ಟಯಂ ॥೩೮॥

ಸಾಜ್ಯಶುಭ್ರತಿಲೈರ್ಹೋಮಂ ಪಾಯಸೇನ ಚ ಕಾರಯೇತ್ ।
ಮಂತ್ರಸಿದ್ಧಿಮವಾಪ್ನೋತಿ ಪಂಚಾಕ್ಷರವಿಧೌ ಮುನೇ ॥೩೯॥

---

ಗಳಲ್ಲಿಯು ಸೂರ್ಯ ಚಂದ್ರ ಮತ್ತು ಅಗ್ನಿರೂಪವಾದ ಮೂರುಕಣ್ಣುಗಳು ಪ್ರಜ್ವಲಿಸುತ್ತಿರುವುವು. ಚಂದ್ರಕಲೆಯು ಕಿರೀಟದ ತುದಿಯಲ್ಲಿರುತ್ತಾ ದುಂಡಾಗಿ ಎತ್ತರವಾದ ಶಿವನ ತಲೆಗೆ ಅಲಂಕಾರಪ್ರಾಯವಾಗಿರುವುದು. ಇಂತಹ ಲಕ್ಷಣಸಂಪನ್ನನಾದ ಮಹಾದೇವನನ್ನು ದೃಢಮನಸ್ಸಿನಿಂದ ಸರ್ವದಾ ಧ್ಯಾನಮಾಡಬೇಕು. ॥೩೩॥

ಹೀಗೆ ಧ್ಯಾನಮಾಡಿ, ಪೀಠಮುದ್ರೆಯಿಂದ ಪೀಠಾಧಿದೇವತೆಗಳನ್ನು ಧ್ಯಾನಮಾಡಿ ಇದೇರೀತಿ ಪೂಜಿಸಬೇಕು. ಅಯ್ಯ ಮುನಿಪುಂಗವನೇ, 'ಜ್ಯೇಷ್ಠಾ, ರೌದ್ರೀ, ಕಾಲೀ, ಕಲವಿಕಾರಿಣೀ, ಬಲಾ, ಬಲವಿಕರಿಣೀ. ಬಲಪ್ರಮಥಿನೀ ಸರ್ವಭೂತದಮನೀ ಮತ್ತು ಮನೋನ್ಮನೀ' ಎಂಬುದಾಗಿ ಪೀಠಶಕ್ತಿಗಳು ಒಂಬತ್ತು. ಈ ದೇವತೆಗಳನ್ನು ಪೀಠದ ನವರಂಗದಲ್ಲಿರುವಂತೆ ಅನುಸಂಧಾನ ಮಾಡಬೇಕು. ॥೩೪-೩೫॥

ಈ ಶಕ್ತಿದೇವತೆಗಳನ್ನು ಆವರಣದಲ್ಲಿ ಪೂಜಿಸಿ, ಅನಂತರ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಮತ್ತು ಊರ್ಧ್ವ ದಿಕ್ಕುಗಳಲ್ಲಿ ಪರಬ್ರಹ್ಮರನ್ನೂ ಅಂದರೆ, 'ತತ್ಪುರುಷ, ಸದ್ಯೋಜಾತ, ಅಘೋರ, ವಾಮದೇವ ಮತ್ತು ಈಶಾನರೆಂಬ ಪಂಚ ಶಿವಮೂರ್ತಿಗಳನ್ನೂ ಪೂಜೆಮಾಡಬೇಕು. ಅನಂತರ ಕ್ರಮವಾಗಿ ಒಂದು, ಎರಡು,

ಅನಂತಸೂಕ್ಷ್ಮೌ ಚ ಶಿವೌಪಮುಖ್ಯೌ
ತಥೈವ ಪೂರ್ವಾವಪಿ ರುದ್ರನೇತ್ರೇ ।
ತ್ರಿಮೂರ್ತಿಶ್ರೀಮೂರ್ತಿಶಿಖಂಡಿತಶ್ಚ
ಪ್ರಾಣಾದಿಪಾತ್ರೇಷು ಸಮರ್ಚನೀಯಾಃ ॥೪೦॥

ಅತ್ಯರ್ಕಾನಲಸೋಮಲೋಚನವಿಭೋ ತ್ವನ್ನೇತ್ರಜಾಲೈರ್ಜಗ
ತ್ಪುಷ್ಟಾತ್ಮೋಷಧಿಜಾಲಮುಗ್ರಸುಕರೈರ್ವರ್ಷತ್ಯಥಾನ್ನಂ ಪಚೇತ್ ।
ಅನ್ನಾಸ್ತೇ ಜಗತಾಂ ಚ ಪ್ರಾಣನಕರಾಶ್ಚಾಪ್ಯಾಯನೀ ಶಂಕರ
ತ್ವತ್ತೋಽಯಂ ನ ವಿಭಾತಿ ಭಾಸನಪರೋ ದೇವಸ್ತ್ವಮಾತ್ಮಾ ಶಿವಃ ॥೪೧॥

ಇತಿ ಶ್ರೀ ಶಿವರಹಸ್ಯೇ ಪಂಚಾಕ್ಷರೀ ಉತ್ಪತ್ತಿ ಜಪಹೋಮಪ್ರಕರಣಂ
ನಾಮ ಷಟ್ತ್ರಿಂಶೋಽಧ್ಯಾಯಃ

---

ಮೂರು ನಾಲ್ಕು ಕೋಣಗಳಲ್ಲಿಯೂ, ಉಮಾ, ಚಂಡೀಶ್ವರರು, ನಂದಿ, ಮಹಾ ಕಾಲ, ಗಣೇಶ್ವರ, ಈ ದಿಗ್ದೇವತೆಗಳನ್ನು ಪೂಜೆಮಾಡಬೇಕು. ||೩೬-೩೭||

ಪೂಜಾಂಗವಾಗಿ ಹೋಮಮಾಡುವಾಗ ಬಿಳಿಯ ಎಳ್ಳನ್ನು ತುಪ್ಪದಲ್ಲಿ ನೆನೆಸಿ, ಅದರಿಂದಲೂ ಮತ್ತು ಪಾಯಸದಿಂದಲೂ ನಾಲ್ಕುಲಕ್ಷ ಹೋಮಮಾಡಬೇಕು. ಅಯ್ಯ ಜೈಗೀಷವ್ಯಮುನಿಯೇ, ಹೀಗೆ ಹೋಮಮಾಡುವುದರಿಂದ ಪಂಚಾಕ್ಷರ ಮಂತ್ರವಿಧಿಯು ಸಾಂಗವಾಗಿ ತನ್ಮೂಲಕ ಮಂತ್ರಸಿದ್ಧಿಯಾಗುವುದು. ||೩೮-೩೯||

ಅತ್ಯಂತ ಸೂಕ್ಷ್ಮರೂಪದಿಂದಲೂ, ಸಮಸ್ತ ಜಗತ್ತಿಗೆ ಮೂಲಭೂತವಾದ ಪ್ರಕೃತಿ ಪುರುಷ ರೂಪದಿಂದಲೂ, ಪಾರ್ವತೀಪರಮೇಶ್ವರ ನಾಮಗಳಿಂದಲೂ, ಪ್ರಪಂಚಕ್ಕೆ ಎರಡು ನೇತ್ರರೂಪದಿಂದಲೂ, ಬ್ರಹ್ಮ, ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳ ಹಾಗೂ ಸರಸ್ವತಿ, ಲಕ್ಷ್ಮೀ, ಪಾರ್ವತಿಯರೆಂಬ ಶ್ರೀಮೂರ್ತಿಗಳ ಆಕಾರದಿಂದಲೂ ಜಗತ್ತಿನಲ್ಲಿ ಕಂಡುಬರುವ ಶಂಕರಪಾರ್ವತಿಯರನ್ನು ಪ್ರತಿ ಮಾನವನೂ ಪಂಚಪ್ರಾಣಗಳೆಂಬ ಪಾತ್ರೆಗಳಲ್ಲಿಟ್ಟು ಸರ್ವದಾ ಪೂಜಿಸುತ್ತಿರಬೇಕು. ||೪೦||

ಸೂರ್ಯ, ಚಂದ್ರ ಮತ್ತು ಅಗ್ನಿರೂಪವಾದ ಕಣ್ಣುಗಳುಳ್ಳ ಪ್ರಭುವೆ, ನಿನ್ನ ನೇತ್ರ ಸಮೂಹಗಳನ್ನು ಜಗತ್ತಿನಲ್ಲಿ ಬೀರಿ ಜಗತ್ತನ್ನು ಪರಿಪೋಷಗೊಳಿಸುವೆ. ಉಗ್ರವಾದ

ಕಿರಣಜಾಲಗಳನ್ನು ಹರಡಿ ಮೇಘರೂಪತಾಳಿ ಮಳೆಗರೆದು ಪ್ರಜೆಗಳ ಶರೀರ ಪೋಷಣೆಗೆಬೇಕಾದ ಅನ್ನವು ದೊರೆಯುವಂತೆ ಪಾಕಗೊಳಿಸುವೆ. ಶಂಕರನೆ! ಈ ನಿನ್ನ ದೇಹವು ಲೋಕಗಳ ಬದುಕುವಿಕೆಗೆ ಸಾಧಕವಾಗಿ ಆನಂದಪ್ರದವಾಗಿರುವುದು. ನಿನ್ನಿಂದ ಈ ಜಗತ್ತೆಲ್ಲವೂ ಪ್ರಕಾಶಿಸುತ್ತಿರುವುದೇ ಹೊರತು ನೀನಿಲ್ಲದೆ ಯಾವುದೂ ಬೆಳಗುವುದಿಲ್ಲ. ನಿನ್ನಿಂದ ಎಲ್ಲವಸ್ತುವು ಪ್ರಕಾಶಗೊಳ್ಳುವುದೇ ಹೊರತು ನಿನ್ನನ್ನು ಬೆಳಗಿಸುವ ವಸ್ತುವು ಪ್ರಪಂಚದಲ್ಲಿ ಬೇರೊಂದಿಲ್ಲ. ಶಂಭುವೆ! ಲೋಕಕ್ಕೆ ಪ್ರಕಾಶವನ್ನುಂಟುಮಾಡುವ ಪರಮಾತ್ಮನಾದ ಶಿವನೇ ನೀನಲ್ಲವೆ! ಎಂದು ಜೈಗೀಷವ್ಯನಿಗೆ ಸ್ಕಂದನು ಶಿವಮಹಿಮೆಯನ್ನು ನಿರೂಪಿಸಿದನು. ॥೪೧॥

ಇಂತು ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ಶಿವಪಂಚಾಕ್ಷರೀಮಂತ್ರದ ಉತ್ಪತ್ತಿ ಜಪ ಮತ್ತು ಹೋಮ ನಿರೂಪಣಪ್ರಕರಣವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ಅಥ ಸಪ್ತತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಕದಾಚಿತ್ಕೌತುಕಾವಿಷ್ಟಾ ಗೌರೀ ಪೃಚ್ಛತಿ ಶಂಕರಂ ।
ರಹಸ್ಯಂ ಹರವಾಮಾಂಕಸಂಸ್ಥಾ ವಿಪ್ರಗಿರೀಂದ್ರಜಾ ॥೧॥

॥ ಶಿವೋವಾಚ ॥

ಕರ್ಮಾಯೋಗ್ಯೋ ಭವೇತ್ಸದ್ಯಃ ಪತಿತೋ ಯದಿ ಸರ್ವಥಾ ।
ಕರ್ಮಾಯೋಗ್ಯೇನ ಯತ್ಕರ್ಮ ಕೃತಂ ತಂ ನರಕಾಯ ಹಿ ॥೨॥

ತತಃ ಕಥಂ ವಿಮುಚ್ಯೇತ ಪತಿತೋ ವಿದ್ಯಯಾಽನಯಾ ॥೩॥

---

## ಮೂವತ್ತೇಳನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯೇ ಕೇಳು, ಒಂದುಸಲ ಕುತೂಹಲಪರವಶಳಾಗಿ ಶಿವನ ಎಡದೊಡೆಯ ಮೇಲೆ ಮಂಡಿಸಿದ್ದ ಗಿರಿರಾಜಕುಮಾರಿಯಾದ ಗೌರಿಯು ಶಂಕರನನ್ನು ಕುರಿತು ಗುಟ್ಟಾಗಿ ಈ ರೀತಿ ಪ್ರಾರ್ಥಿಸಿದಳು. " ಮಹಾದೇವನೇ, ವೈದಿಕವಾದ ಕರ್ಮಗಳನ್ನು ಮಾಡಲು ಅರ್ಹನಲ್ಲದವನು ಸಂಪೂರ್ಣವಾದ ಅಕಾರ್ಯಾದಿಗಳನ್ನು ಆಚರಿಸಿ ಪತಿತನಾಗುವುದಾದರೆ, ಅಥವಾ ಆತನು ಮಾಡಿದ ಅಹಿತಕರ್ಮಗಳಿಂದ ನರಕಪ್ರಾಪ್ತಿಯೇ ಉಂಟಾಗುವುದಾದರೆ ಅಂತಹ ಸಂದರ್ಭಗಳಲ್ಲಿ ಪತಿತನಾದವನು ಈ ಶಿವಪಂಚಾಕ್ಷರೀ ವಿದ್ಯೆಯಿಂದ ಹೇಗೆ ಉದ್ಧಾರವಾಗುತ್ತಾನೆ? ಪ್ರಭೋ, ದಯವಿಟ್ಟು ಅಪ್ಪಣೆಕೊಡಿಸಬೇಕು " ಹೀಗೆಂದು ಗೌರಿಯು

॥ ಶ್ರೀ ಶಿವ ಉವಾಚ ॥

ತಥ್ಯಮೇತತ್ತ್ವಯಾ ಪ್ರೋಕ್ತಂ ತಥಾಪಿ ಶೃಣು ಪಾರ್ವತಿ ।
ರಹಸ್ಯಮಿತಿ ಮತ್ವೈತದ್ಗೋಪಿತಂ ಯನ್ಮಯಾ ಪುರಾ ॥೪॥

ಅಮಂತ್ರಕೋ ಮಾಂ ಪತಿತಃ ಪೂಜಯೇದ್ಯದಿ ಮೋಹತಃ ।
ನಾರಕೀ ಸ್ಯಾನ್ನಸಂದೇಹೋ ಮನು ಪಂಚಾಕ್ಷರಂ ವಿನಾ ॥೫॥

ಅಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಶಿತಾಃ ।
ತೇಷಾಮೇತೈರ್ವ್ರತೈರ್ನಾಸ್ತಿ ಮಮ ಲೋಕಸಮಾಗಮಃ ॥೬॥

ಭಕ್ತ್ಯಾ ಪಂಚಾಕ್ಷರೇಣೈವ ಯಸ್ತು ಮಾಂ ಸಕೃದರ್ಚಯೇತ್ ।
ಸೋಽಪಿ ಗಚ್ಛೇತ ಮತ್ಸ್ಥಾನಂ ಮಂತ್ರಕಸ್ಯೈವ ಗೌರವಾತ್ ॥೭॥

---

ಶಂಕರನನ್ನು ಪ್ರಾರ್ಥಿಸಿದಳು. ಆಗ ಪರಶಿವನು ಅತ್ಯಂತ ಪ್ರೇಮದಿಂದ ಕೂಡಿದವನಾಗಿ ವಿಷಯವನ್ನು ತಿಳಿಯಲು ಅಭಿಲಾಷೆಯುಳ್ಳ ತನ್ನ ಪತ್ನಿಗೆ ಈ ರೀತಿ ಉಪದೇಶಿಸಿದನು. ॥೧-೨-೩॥

ಪಾರ್ವತಿಯೇ, ನೀನು ಪ್ರಶ್ನೆ ಮಾಡಿದುದು ಸತ್ಯವಾದದ್ದು. ಆದರೂ ಇದು ತುಂಬಾ ರಹಸ್ಯವೆಂದರಿತು ಇದನ್ನು ನಾನು ಹಿಂದೆ ಬಚ್ಚಿಟ್ಟೆನು. ಈಗ ತಿಳಿಸುವೆನು ಕೇಳು. ಮಂತ್ರಾಧಿಕಾರಿಯಲ್ಲದ ಪತಿತನು ಅಜ್ಞಾನದಿಂದ ನನ್ನನ್ನು ಮಂತ್ರವಿಲ್ಲದೆ ಪೂಜೆಮಾಡಿದರೆ ಆತನು ನರಕಕ್ಕೆ ಭಾಗಿಯಾಗುವನು. ಆಗ ನನ್ನ ಈ ಪಂಚಾಕ್ಷರ ಮಂತ್ರವನ್ನು ಉಚ್ಚರಿಸುತ್ತಾ ಶಿವಾರಾಧನೆ ಮಾಡಬಹುದು. ಅಂತೂ ಶಿವಪೂಜಾದಿಗಳಲ್ಲಿ ಈ ಶಿವಪಂಚಾಕ್ಷರೀಮಂತ್ರವಿಲ್ಲದಿದ್ದರೆ ಅವನು ನರಕಭಾಗಿಯಾಗುವುದರಲ್ಲಿ ಸಂಶಯವೇ ಇಲ್ಲವೆಂದು ತಿಳಿ. ॥೪-೫॥

ನಿರಾಹಾರಿಗಳೂ, ವಾಯು ಮಾತ್ರ ಭಕ್ಷಣಮಾಡುವವರೂ, ಇನ್ನೂ ಇತರ ವ್ರತಾಚರಣೆಯಿಂದ ಕಾಲ ಕಳೆಯುವವರೂ, ದೇಹವನ್ನು ದಂಡಿಸಿಕೊಂಡು ಕೃಶಾಂಗರಾಗಿ ನನ್ನನ್ನು ಸೇವಿಸುವರು. ಆದರೂ ಇವರೆಲ್ಲರಿಗೂ ಈ ವ್ರತಗಳಿಂದ ನನ್ನ ಲೋಕಪ್ರಾಪ್ತಿಯಾಗುವುದೆಂದು ಹೇಳಲು ಸಾಧ್ಯವಿಲ್ಲ. ಭಕ್ತಿಪೂರ್ವಕವಾಗಿ ಪಂಚಾಕ್ಷರಮಂತ್ರವನ್ನುಚ್ಚರಿಸುತ್ತಾ ಯಾರು ನನ್ನನ್ನು ಒಂದುಬಾರಿಯಾದರೂ ಪೂಜೆಮಾಡುವರೋ ಅಂತಹವರು ನನ್ನ ಮಂತ್ರಪ್ರಭಾವದಿಂದ ಶಾಶ್ವತವಾದ ನನ್ನ

ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಯಮಾಃ ।
ಪಂಚಾಕ್ಷರಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥೮॥

ಬುದ್ಧೋ ವಾಪ್ಯಥ ಮುಕ್ತೋ ವಾ ಪಾಶೈಃ ಪಂಚಾಕ್ಷರೇಣ ಯಃ ।
ಪೂಜಯೇನ್ಮಾಂ ವಿಮುಚ್ಯೇತ ಸರ್ವಪಾಪೈರ್ನ ಸಂಶಯಃ ॥೯॥

ಅಶುದ್ಧೋ ವಾ ವಿಶುದ್ಧೋ ವಾ ಸಕೃತ್ಪಂಚಾಕ್ಷರೇಣ ಯಃ ।
ಪೂಜಯನ್ಪಂಡಿತೋ ಮೂಢೋ ಮುಚ್ಯೇತ ಪತಿತೋಽಪಿ ವಾ॥೧೦॥

ಷಡಕ್ಷರೇಣ ವಾ ದೇವಿ ತಥಾ ಪಂಚಾಕ್ಷರೇಣ ವಾ ।
ಸ ಬ್ರಹ್ಮಾಂಗೇನ ಮಾಂ ಭಕ್ತ್ಯಾ ಪೂಜಯೇದ್ಯದಿ ಮುಚ್ಯತೇ ॥೧೧॥

ಪತಿತೋಽಪತಿತೋವಾಪಿ ಮಂತ್ರೇಣಾನೇನ ಪೂಜಯೇತ್ ।
ಮಮ ಭಕ್ತೋ ಜಿತಕ್ರೋಧೋ ಭಸ್ಮರುದ್ರಾಕ್ಷಧೃಗ್ದ್ವಿಜಃ ॥೧೨॥

---

ಲೋಕವನ್ನು ಪಡೆಯುವರೆಂಬುದರಲ್ಲಿ ಅನುಮಾನವಿಲ್ಲ. ಅದ್ದರಿಂದ ತಪಸ್ಸು, ಯಜ್ಞ, ವ್ರತಗಳು, ನಿಯಮಗಳು ಮುಂತಾದವುಗಳಿಂದ ಲಭಿಸುವ ಸುಕೃತವು ಈ ಪಂಚಾಕ್ಷರಮಂತ್ರಜಪದಿಂದ ಮಾಡುವ ಪೂಜೆಯಿಂದ ದೊರೆಯುವ ಫಲಗಳಲ್ಲಿ ಕೋಟ್ಯಂಶಕ್ಕೂ ಸಮಾನವಾಗಲಾರದು. ॥೬-೭-೮॥

ಸಾಂಸಾರಿಕ ಪಾಶಗಳಿಂದ ಬದ್ಧನೇ ಆಗಿರಲಿ, ಅವನು ಪಂಚಾಕ್ಷರಮಂತ್ರದಿಂದ ನನ್ನನ್ನು ಪೂಜಿಸುವುದಾದರೆ, ಆಗಲೂ ಸಕಲ ಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲ. ದೈಹಿಕವಾಗಿ ಅಶುದ್ಧನಾಗಿರಲಿ ಅಥವಾ ಶುದ್ಧನೇ ಆಗಿರಲಿ ಒಂದುಬಾರಿ ಪಂಚಾಕ್ಷರಮಂತ್ರವನ್ನುಚ್ಚರಿಸಿ ನನ್ನನ್ನು ಪೂಜೆಮಾಡುವುದಾದರೆ ಪಂಡಿತ, ಮೂರ್ಖ ಅಥವಾ ಪತಿತ ಇವರಾರಾದರೂ ಮುಕ್ತಿಪಡೆಯುವರು. ಆದ್ದರಿಂದ ಈ ಶಿವಪಂಚಾಕ್ಷರೀಮಂತ್ರವು ಪಂಡಿತ, ಪಾಮರ ಈ ಉಭಯ ಸಾಧಾರಣ್ಯವಾಗಿ ಮುಕ್ತಿಪ್ರದವೆನಿಸಿಕೊಂಡಿರುವುದು. ॥೯-೧೦॥

ದೇವಿ, ಷಡಕ್ಷರ ಅಥವಾ ಪಂಚಾಕ್ಷರಮಂತ್ರಗಳನ್ನು ಜಪಿಸುತ್ತಾ ಭಕ್ತಿಪೂರ್ವಕವಾಗಿ ನನ್ನ ಉತ್ತಮಾಂಗವನ್ನು ಅಂದರೆ ಶಿವಲಿಂಗವನ್ನು ಪೂಜೆಮಾಡಿದರೆ ನಿಜವಾಗಿಯೂ ಅವರಿಗೆ ಮುಕ್ತಿಯು ದೊರೆಯುತ್ತದೆ. ಕೋಪವನ್ನು ಜಯಿಸಿ, ಭಸ್ಮರುದ್ರಾಕ್ಷಗಳನ್ನು ಧಾರಣೆಮಾಡುವ ನನ್ನ ಭಕ್ತನಾದ ಬ್ರಾಹ್ಮಣನು ಪತಿತನಾಗಲಿ

ನಾನ್ಯಪುಂಡ್ರಧರೇಣಾಯಂ ನ ಜಪ್ಯೋ ಮನುರಾಡಯಂ ।
ಅಶ್ರೌತಮೂರ್ಧ್ವಪುಂಡ್ರಂ ಹಿ ಮಂತ್ರೋಽಯಂ ಶ್ರುತಿಮಧ್ಯಗಃ ॥೧೩॥

ಶ್ರೌತಪುಂಡ್ರಂ ಸದಾ ಭಸ್ಮತ್ರಿಪುಂಡ್ರೋದ್ಧೂಳನಾತ್ಮಕಃ ।
ರುದ್ರಾಕ್ಷಧಾರಣಂ ಪುಂಡ್ರಂ ಶಿವಲಿಂಗಮಿದಂ ದ್ವಯಂ ॥೧೪॥

ನ ತ್ಯಾಜ್ಯಂ ವೈದಿಕೈರ್ನಿತ್ಯಂ ತಸ್ಮಾದ್ಧೃತ್ವಾ ಜಪೇನ್ಮನುಂ ।
ಗುರುವಕ್ತ್ರಾದಿಮಂ ಲಬ್ಧ್ವಾ ಶ್ರೀಮತ್ಪಂಚಾಕ್ಷರಂ ಮನು ॥೧೫॥

ದ್ವಿಜೋತ್ತಮಾಚ್ಛಾಂಭವಾಚ್ಚ ಜಪನೀಯೋ ಶತಾಷ್ಟಕಂ ।
ಉಪನೀತೋ ತಥಾ ಪಿತ್ರಾ ದತ್ತಃ ಪಂಚಾಕ್ಷರೋ ಯದಿ ॥೧೬॥

---

ಅಥವಾ ಪರಿಶುದ್ಧನೇ ಆಗಲಿ ಈ ಪಂಚಾಕ್ಷರ ಅಥವಾ ಷಡಕ್ಷರಮಂತ್ರದಿಂದ ನನ್ನನ್ನು ಪೂಜಿಸಬೇಕು. ಆದರಿಂದ ಅವನಿಗೆ ಬ್ರಹ್ಮಜ್ಞಾನವು ಲಭಿಸುವುದಲ್ಲದೆ ಮುಕ್ತನೂ ಆಗುವನು. ॥೧೧-೧೨॥

ಈ ಮಂತ್ರರಾಜನೆನಿಸಿದ ಪಂಚಾಕ್ಷರಗಳನ್ನು ಊರ್ಧ್ವಪುಂಡ್ರಧಾರಿಗಳು ಎಂದಿಗೂ ಜಪಿಸಬಾರದು. ಊರ್ಧ್ವಪುಂಡ್ರವು ವೇದೋಕ್ತವಾದುದಲ್ಲ. ಈ ಮಂತ್ರವಾದರೋ ವೇದಮಧ್ಯಗತವಾದುದು. ವೇದಸಾರವೆನಿಸಿಕೊಂಡಿದೆ. ಭಸ್ಮ ತ್ರಿಪುಂಡ್ರ ಮತ್ತು ಭಸ್ಮಲೇಪನಮಾಡಿಕೊಂಡಿರುವವನಿಗೆ ಶ್ರುತಿಪ್ರಸಿದ್ಧವಾದ ಭಸ್ಮತ್ರಿಪುಂಡ್ರ, ರುದ್ರಾಕ್ಷಧಾರಣೆ, ಶಿವಲಿಂಗಪೂಜೆ ಇವೆರಡೂ ಮುಖ್ಯವಾದುವು. ಆದ್ದರಿಂದ ವೈದಿಕರು ನಿತ್ಯವೂ ಭಸ್ಮರುದ್ರಾಕ್ಷಗಳನ್ನು ತಪ್ಪದೆ ಧರಿಸಿ, ಈ ಪಂಚಾಕ್ಷರೀಮಂತ್ರವನ್ನು ಜಪಿಸಬೇಕೇ ಹೊರತು ಅನ್ಯಥಾ ಇದನ್ನು ಬಳಸಬಾರದು. ॥೧೩-೧೪॥

ದ್ವಿಜವರ್ಯರೂ ಶಾಂಭವಾಗ್ರೇಸರರೂ ಆದ ಗುರುಗಳ ಮುಖದಿಂದ ಈ ನನ್ನ ಸಂಪದ್ಭರಿತವಾದ ಪಂಚಾಕ್ಷರಮಂತ್ರವನ್ನು ಉಪದೇಶವನ್ನಾಗಿ ಪಡೆದು ಅನಂತರ ಅದನ್ನು ಎಂಟುನೂರುಸಲ ಜಪಮಾಡಬೇಕು. ಉಪನಯನಸಂಸ್ಕಾರವಾದಾಗ ತಂದೆಯಿಂದಲೇ ಈ ಪಂಚಾಕ್ಷರಮಂತ್ರವು ಉಪದೇಶಿಸಲ್ಪಟ್ಟರೆ, ಗಾಯತ್ರೀಮಂತ್ರದ ಜೊತೆಯಲ್ಲಿಯೇ ಆಲಸ್ಯರಹಿತನಾಗಿ ಈ ಪಂಚಾಕ್ಷರಮಂತ್ರವನ್ನು ತ್ರಿಕಾಲದಲ್ಲಿಯೂ ಜಪಮಾಡಬೇಕು. ॥೧೫-೧೬॥

ಗಾಯತ್ರ್ಯಾ ಸಹ ಏವಾಯಂ ಜಪೇನ್ಮಂತ್ರಮತಂದ್ರಿತಃ ।
ವರ್ಣೀ ವೇದಾಭ್ಯಾಸನಾರ್ಥಂ ಶತಮಷ್ಟೋತ್ತರಂ ಜಪೇತ್ ॥೧೭॥

ಗೃಹಸ್ಥಃ ಪಂಚಸಾಹಸ್ರಂ ಜಪೇದ್ಧ್ಯಾಯನ್ನಿ ಮಾಂ ಸದಾ ।
ವನ್ಯಃ ಸಂನ್ಯಾಸಧರ್ಮಸ್ಥಃ ಸಂನ್ಯಾಸಂ ಪ್ರಣವೇನ ಹಿ ॥೧೮॥

ದಶದ್ವಾದಶಸಾಹಸ್ರಂ ಜಪನ್ತಸ್ತೌ ಯಥಾಬಲಂ ।
ಸ್ತ್ರೀಯಃ ಶೂದ್ರಾಃ ಸಂಕರಾಶ್ಚ ನಮೋಂತೇನ ಜಪಕ್ರಮೇ ॥೧೯॥

ಚೋದಿತಾಸ್ತಾಂತ್ರಿಕಾಣಾಂ ತು ತಂತ್ರೋಕ್ತೇನೈವ ವರ್ತ್ಮನಾ ।
ವೈದಿಕಾನಾಮಯಂ ಮಂತ್ರೋ ಧರ್ಮಶ್ಚಾಯಂ ಮಯೋದಿತಃ ॥೨೦॥

ಬ್ರಾಹ್ಮಣಕ್ಷತ್ರಿಯವಿಶಾಂ ಏಷ ಜಾಪ್ಯವಿಧಿಕ್ರಮಃ ।
ಲಬ್ಧ್ವಾ ಮಂತ್ರಂ ಗುರೋರ್ವಕ್ತ್ರಾನ್ಭಕ್ತ್ಯಾದಿ ಗುಣಸಂಯುತಃ ॥೨೧॥

---

ಬ್ರಹ್ಮಚಾರಿಯು ವೇದಾಭ್ಯಾಸ ಸಿದ್ಧಿಗಾಗಿ ನೂರೆಂಟುಬಾರಿ ಈ ಮಂತ್ರವನ್ನು ಜಪಿಸಬೇಕು. ಗೃಹಸ್ಥನು ಯಾವಾಗಲೂ ಗೃಹಸ್ಥಧರ್ಮಸಾರ್ಥಕತೆಗಾಗಿ ನನ್ನನ್ನುದ್ದೇಶಿಸಿ ಐದುಸಾವಿರ ಸಂಖ್ಯೆಯಿಂದ ಜಪಮಾಡಬೇಕು. ವಾನಪ್ರಸ್ಥಾಶ್ರಮಿಯು ಓಂಕಾರಪೂರ್ವಕವಾಗಿ ಹತ್ತುಸಾವಿರವನ್ನೂ, ಸಂನ್ಯಾಸಿಯು ಹನ್ನೆರಡು ಸಾವಿರವನ್ನೂ ತಮ್ಮ ಶಕ್ತಿಗನುಗುಣವಾಗಿ ತಮ್ಮ ಆಶ್ರಮಧರ್ಮಪಾಲನೆಯ ಉದ್ದೇಶಾರ್ಥವಾಗಿ ಜಪಮಾಡಬೇಕು. ॥೧೭-೧೮॥

ಹೆಂಗಸರು, ಶೂದ್ರರು ಮತ್ತು ಸಂಕರಜಾತಿಯವರೂ ಈ ಮಂತ್ರವನ್ನು ನಮಶ್ಶಬ್ದವನ್ನೇ ಕೊನೆಯಲ್ಲಿ ಉಚ್ಚರಿಸುತ್ತಾ ಜಪಮಾಡಬೇಕೆಂದು ಹಿಂದೆಯೇ ಹೇಳಿದೆ. ತಾಂತ್ರಿಕರಿಗೆ ಅಂದರೆ ವೇದಾಧಿಕಾರವಿಲ್ಲದವರಿಗೆ ತಂತ್ರೋಕ್ತರೀತಿಯಿಂದಲೇ ಜಪಕ್ರಮವೇರ್ಪಟ್ಟಿರುವುದು. ವೈದಿಕರಿಗಾದರೋ ಈ ಮಂತ್ರಜಪವೇ ಒಂದು ಧರ್ಮವೆನಿಸಿ ಈಗ ನಾನು ಹೇಳಿದ ರೀತಿಯಲ್ಲಿ ಅನುಸರಣೀಯವಾಗಿದೆ. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ಮೂರು ವರ್ಣದವರಿಗೂ ಈ ಜಪವಿಧಿಯ ಕ್ರಮವು ಒಂದೇ ರೀತಿಯಾಗಿರುವುದು. ॥೧೯-೨೦॥

ಗುರುಭಕ್ತಿ, ಸೌಶೀಲ್ಯ ಇತ್ಯಾದಿ ಗುಣಸಮೇತನಾಗಿ ಗುರುಗಳ ಮುಖದಿಂದ ವಿಧಿಪ್ರಕಾರ ಈ ಪಂಚಾಕ್ಷರಮಂತ್ರವನ್ನು ಉಪದೇಶರೂಪವಾಗಿ ಪಡೆದು, ಭಸ್ಮ

ಭಸ್ಮತ್ರಿಪುಂಡ್ರವೀತಾಂಗೋ ಮದ್ಧ್ಯಾನನಿಹತಾಶುಭಃ ।
ಬ್ರಹ್ಮಚರ್ಯರತೋ ಭಕ್ತ್ಯಾ ಮತ್ಸಾಯುಜ್ಯಮವಾಪ್ನುಯಾತ್ ॥೨೨॥

ಕಿಮತೋ ಬಹುನೋಕ್ತೇನ ಭಕ್ತಾಃ ಸರ್ವೇಽಧಿಕಾರಿಣಃ ।
ಮಮ ಪಂಚಾಕ್ಷರೇ ಮಂತ್ರೇ ತಸ್ಮಾಚ್ಛ್ರೇಷ್ಠತರೋ ಹಿ ಸಃ ॥೨೩॥

ಪಂಚಾಕ್ಷರಪ್ರಭಾವೇನ ಲೋಕಾ ದೇವಮಹರ್ಷಯಃ ।
ತಿಷ್ಠಂತಿ ಶಾಶ್ವತಾ ಧರ್ಮಾ ದೇವಾಃ ಸರ್ವಮಿದಂ ತತಂ ॥೨೪॥

ಪ್ರಲಯೇ ಸಮನುಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ ।
ಸರ್ವಂ ಪ್ರಕೃತಿಮಾಪನ್ನಃ ತ್ವತ್ತಃ ಪ್ರಕೃತಕಾರ್ಯಭೂತ್ ॥೨೫॥

ಏಕೋಽಹಂ ಸಂಸ್ಥಿತೋ ದೇವಿ ನ ದ್ವಿತೀಯೋಽಸ್ತಿ ಕುತ್ರಚಿತ್ ।
ತದಾ ವೇದಾಶ್ಚ ಶಸ್ತ್ರಾಣಿ ಮಂತ್ರಾಃ ಪಂಚಾಕ್ಷರೇ ಸ್ಥಿತಾಃ ॥೨೬॥

ತೇ ನಾಶಂ ನೈವ ಸಂಪ್ರಾಪ್ತಾ ಮಚ್ಛಕ್ತ್ಯಾ ಹ್ಯನುಪಾಲಿತಾಃ ।
ತತಃ ಸೃಷ್ಟಿರಭೂನ್ಮತ್ತಃ ಪ್ರಕೃತ್ಯಾತ್ಮವಿಭೇದತಃ ॥೨೭॥

---

ತ್ರಿಪುಂಡ್ರಾಲಂಕೃತಗಾತ್ರನಾಗಿ ನನ್ನ ಧ್ಯಾನದಿಂದ ಸಕಲ ಅಮಂಗಳವನ್ನೂ ಕಳೆದು ಕೊಂಡು ಭಕ್ತಿಯಿಂದ ಬ್ರಹ್ಮಚರ್ಯಾಶ್ರಮದಲ್ಲಿರುವವನು ನನ್ನ ಸಾಯುಜ್ಯವನ್ನೈದು ವನು. ಅಯ್ಯ ಜೈಗೀಷವ್ಯನೆ, ಹೆಚ್ಚುಮಾತಿನಿಂದೇನು ? ಈ ನನ್ನ ಪಂಚಾಕ್ಷರ ಮಂತ್ರಜಪದಲ್ಲಿ ನನ್ನ ಭಕ್ತರೆಲ್ಲರೂ ಅಧಿಕಾರಿಗಳಾಗಿರುವರು. ಆದ್ದರಿಂದಲೇ ಇದು ಅತಿ ಶ್ರೇಷ್ಠವೆಂದು ತಿಳಿ. ॥೨೧-೨೨-೨೩॥

ಈ ಪಂಚಾಕ್ಷರಮಂತ್ರಮಹಿಮೆಯಿಂದ ಸಕಲ ಜನಗಳೂ, ದೇವತೆಗಳೂ ಮಹರ್ಷಿಗಳೂ, ಶಾಶ್ವತವಾದ ಧರ್ಮದೇವತೆಗಳೂ ಸ್ಥಿರವಾಗಿ ಲೋಕದಲ್ಲಿ ನೆಲಸಿ ರುವರು. ಈ ಮಂತ್ರವು ಎಲ್ಲ ಬ್ರಹ್ಮಾಂಡವನ್ನೂ ವ್ಯಾಪಿಸಿದೆ. ದೇವಿ, ಪ್ರಳಯ ಕಾಲವೊದಗಿ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ನಾಶವಾದಾಗ, ಪ್ರಕೃತಿ ಸ್ವರೂಪ ಪಡೆದ ನಿನ್ನಿಂದ ಮತ್ತೆ ಈ ಪ್ರಪಂಚವೆಲ್ಲವೂ ಮೊದಲಿನಂತೆ ಆಯಾ ಕಾರ್ಯಾಸಕ್ತಗಳಾಗುವುವು. ॥೨೪-೨೫॥

ದೇವಿಯೇ ಕೇಳು ; ಆ ಪ್ರಳಯಕಾಲದಲ್ಲಿ ನಾನೊಬ್ಬನು ಹೊರತು ಎಲ್ಲಿಯೂ ಬೇರೆ ಯಾರೂ ಉಳಿದಿರುವುದಿಲ್ಲ. ಆಗ ವೇದಗಳೂ, ಶಾಸ್ತ್ರಗಳೂ, ಮಂತ್ರಗಳೂ ಸಹ

ಗುಣಮೂರ್ತ್ಯಾತ್ಮನಾಂ ಚೈವ ತತೋ ವಾಂತರಸಂಪ್ಲುತಿಃ ।
ತದಾ ನಾರಾಯಣೋ ಮತ್ತಃ ಸಮುತ್ಪನ್ನೋ ಮಹೇಶ್ವರಿ ॥೨೮॥

ಮತ್ತ ಏವ ಸಮುತ್ಪನ್ನಃ ಪಂಚವಕ್ತ್ರಃ ಪ್ರಜಾಪತಿಃ ।
ಸಿಸೃಕ್ಷಮಾಣೋ ಲೋಕಾಂಸ್ತ್ರೀನಶಕ್ತೋಽಪ್ಯಸಹಾಯವಾನ್ ॥೨೯॥

ಮುನೀನ್ದಶ ಸಸರ್ಜಾದೌ ಮಾನಸಾನಮಿತೌಜಸಃ ।
ತೇಷಾಂ ಸೃಷ್ಟಿವಿವೃದ್ಧ್ಯರ್ಥಂ ಮಾಂ ಪ್ರೋವಾಚ ಪಿತಾಮಹಃ॥೩೦॥

ಪ್ರಣಮ್ಯ ಸಂಸ್ತುವನ್ಭಕ್ತ್ಯಾ ಕೃತಾಂಜಲಿರುಮೇ ತದಾ ॥೩೧॥

॥ ಬ್ರಹ್ಮೋವಾಚ ॥

ನಮಸ್ತೇ ದೇವೇಶ ತ್ರಿಪುರಹರಸೋಮತ್ರಿನಯನ
ಪ್ರಭೋ ಶಂಭೋ ವಿಶ್ವಾಧಿಕ ಹರ ಭವೋಗ್ರಾಮಿತಗುಣ ।

---

ಪಂಚಾಕ್ಷರಮಂತ್ರದಲ್ಲಿಯೇ ನೆಲಸುವುವು. ನನ್ನ ಶಕ್ತಿಯಿಂದಲೇ ಶಿವಪಂಚಾಕ್ಷರದಲ್ಲಿ ನೆಲಸಿದ ಅವುಗಳಿಗೆ ನಾಶವೊದಗದೆ ರಕ್ಷಣೆ ದೊರೆಯಿತು. ಅನಂತರ ನಾನು ಪ್ರಕೃತಿಪುರುಷಭೇದದಿಂದ ಲೋಕಸೃಷ್ಟಿಮಾಡಿದೆನು. ॥೨೬-೨೭॥

ಅನೇಕ ಗುಣಗಳಿಂದಲೂ, ನಾನಾ ಆಕಾರಗಳಿಂದಲೂ ಈಗ ಕಂಡುಬರುವ ಈ ಲೋಕಕ್ಕೆ ಕೊನೆಯಲ್ಲಿ ಅವಾಂತರ ಪ್ರಳಯವುಂಟಾಗುವುದು. ಮಹೇಶ್ವರಿ, ಅದಕ್ಕಾಗಿಯೇ ನನ್ನಿಂದ ನಾರಾಯಣನು ಉತ್ಪನ್ನನಾದನು. ಆಮೇಲೆ ಐದು ಮುಖವುಳ್ಳ ಬ್ರಹ್ಮನೂ ನನ್ನಿಂದ ಜನಿಸಿದನು. ಆ ಬ್ರಹ್ಮನು ಸ್ವರ್ಗ, ಮರ್ತ್ಯ, ಪಾತಾಳರೂಪಗಳಾದ ಮೂರು ಲೋಕಗಳನ್ನೂ ಸೃಷ್ಟಿಮಾಡಲು ಶಕ್ತಿಯಿಲ್ಲದೆ ಸಹಾಯರಹಿತನಾಗಿ, ಮೊದಲು, ವಿಶೇಷ ಸಮರ್ಥರಾದ ಹತ್ತುಜನ ಮುನಿಗಳನ್ನು ಮನಸ್ಸಿನಿಂದಲೇ ಸೃಷ್ಟಿಮಾಡಿದನು. ॥೨೮-೨೯॥

ದೇವಿಯೇ ಕೇಳು, ಈ ಸೃಷ್ಟಿಯಾದ ಮೇಲೆ ಆ ಮುನಿಗಳಿಂದ ಸೃಷ್ಟಿ ಕಾರ್ಯವನ್ನು ಅಭಿವೃದ್ಧಿಹೊಂದಿಸಲು ಅಸಮರ್ಥನಾಗಿ ಬ್ರಹ್ಮನು ಕೈಜೋಡಿಸಿ ಪ್ರಣಾಮಮಾಡಿ, ಭಕ್ತಿಯಿಂದ ಸ್ತೋತ್ರಮಾಡುತ್ತಾ ನನ್ನನ್ನು ಕುರಿತು ಹೀಗೆ ಪ್ರಾರ್ಥಿಸಿದನು. ॥೩೦-೩೧॥

“ಪ್ರಭೋ! ದೇವತಾಧಿಪನೂ, ತ್ರಿಪುರಾಂತಕನೂ, ಉಮಾರಮಣನೂ, ತ್ರಿಲೋಚನನೂ ಆದ ನಿನಗೆ ನಮಸ್ಕಾರಮಾಡುವೆನು, ಶಂಭುವೆ! ನೀನು ಜಗ

ವಿಭೋ ಬಂಧೋ ಬಂಧಂ ಹರಹರ ಶಶಿದ್ಯೋತಿತಶಿರಃ
ಪ್ರಸಾದಂ ಮೇ ಶಶ್ವತ್ಕುರು ಕುರು ಭವಾನ್ಮೇಽದ್ಯ ಶರಣಂ ॥೩೨॥

ಮತ್ಪುತ್ರಾಣಾಂ ಮಹಾದೇವ ಸರ್ಜನೇ ದೇಹಿ ವಿಕ್ರಮಂ ।
ಇತ್ಯೇವಂ ಪ್ರಾರ್ಥಿತಸ್ತೇನ ಪಂಚವಕ್ತ್ರಧರೋಽಪ್ಯಹಂ ॥೩೩॥

ಪಂಚಾಕ್ಷರಾಣಿ ಕ್ರಮಶಃ ಪ್ರೋಕ್ತವಾನ್ಪದ್ಮಯೋನಯೇ ।
ಸ ಪಂಚವದನಸ್ತಾನಿ ಗೃಣನ್ಲೋಕಪಿತಾಮಹಃ ॥೩೪॥

ವಾಚ್ಯವಾಚಕಭಾವೇನ ಜ್ಞಾತವಾನ್ಮಾಂ ಮಹೇಶ್ವರಂ ।
ಜ್ಞಾತಪ್ರಯೋಗೇ ವಿಧಿವತ್ಸಿದ್ಧಮಂತ್ರಃ ಪ್ರಜಾಪತಿಃ ॥೩೫॥

---

ಜ್ಯೇಷ್ಠನು! ಭಕ್ತರ ಪಾಪನಾಶಕನು, ಸಕಲ ಪ್ರಪಂಚದ ಸೃಷ್ಟಿಸ್ಥಿತಿಸಂಹಾರ ಕಾರ್ಯಗಳನ್ನೂ ನಿರ್ವಹಿಸುವವನು. ಅಪರಿಮಿತ ಗುಣಶಾಲಿಯು. ಇಂತಹ ನಿನಗೆ ಸಾಷ್ಟಾಂಗ ಪ್ರಣಾಮವು. ಸರ್ವವ್ಯಾಪಕನಾದ ಸ್ವಾಮಿಯೆ, ನೀನು ಆಪದ್ಬಂಧುವು. ಚಂದ್ರನಿಂದ ಶೋಭಿಸುತ್ತಿರುವ ತಲೆಯುಳ್ಳ ಶಂಕರನುನೀನು. ಅಂತಹ ನೀನು ನಮ್ಮ ದುಃಖ ಬಂಧನವನ್ನು ಪರಿಹರಿಸು. ಮಹಾದೇವ! ನನ್ನಲ್ಲಿ ಪದೇ ಪದೇ ಅನುಗ್ರಹ ಮಾಡು. ಶಂಭುವೆ! ನೀನೇ ನನಗೆ ಈಗ ರಕ್ಷಕನು. ನಿನ್ನನ್ನೆ ಈಗ ಮೊರೆಹೊಗು ತ್ತಿರುವೆನು. ಕಾಪಾಡು ಕಾಪಾಡು" ಎಂದು ಬ್ರಹ್ಮನು ಭಕ್ತಿಯಿಂದ ಸ್ತುತಿಸಿದನು. ||೩೨||

ಮಹಾದೇವನೇ, ನನ್ನ ಮಾನಸಪುತ್ರರಿಗೆ ಸೃಷ್ಟಿಕಾರ್ಯದಲ್ಲಿ ಸಾಮರ್ಥ್ಯ ವನ್ನು ಕರುಣಿಸೆಂದು ಆ ಬ್ರಹ್ಮನಿಂದ ವಿಶೇಷರೀತಿಯಲ್ಲಿ ಪ್ರಾರ್ಥಿಸಲ್ಪಟ್ಟ ಪಂಚ ಮುಖನಾದ ನಾನು, ಕ್ರಮವಾಗಿ ನನ್ನ ಐದು ಮುಖಗಳಿಂದಲೂ "ನಮಃ ಶಿವಾಯ" ಎಂಬ ಐದು ಪಂಚಾಕ್ಷರಗಳನ್ನು ಬ್ರಹ್ಮನಿಗೆ ಉಪದೇಶಮಾಡಿದೆನು. ಆಗ ಆ ಐದು ಮುಖವುಳ್ಳ ಬ್ರಹ್ಮನು ಆ ಪಂಚಾಕ್ಷರಗಳನ್ನು ಪಂಚಮುಖಗಳಿಂದಲೂ ಉಚ್ಚರಿ ಸುತ್ತಾ ಆ ಮಂತ್ರಮಹಿಮೆಯನ್ನರಿತು ವಾಚ್ಯವಾಚಕಭಾವದಿಂದ ಸಗುಣರೂಪಿಯೂ ಮಹೇಶ್ವರನೂ ಆದ ನನ್ನನ್ನು ತಿಳಿದುಕೊಂಡನು. ||೩೩-೩೪||

ಪವಿತ್ರವಾದ ಪಂಚಾಕ್ಷರಮಂತ್ರಪ್ರಯೋಗವನ್ನು ವಿಧಿಪ್ರಕಾರ ತಿಳಿದನಂತರ ಆ ಮಂತ್ರಸಿದ್ಧಿಪಡೆದ ಬ್ರಹ್ಮನು ತನ್ನ ಮಕ್ಕಳಿಗೂ ಇದೇ ಶಿವಪಂಚಾಕ್ಷರಮಂತ್ರ

ಪುತ್ರೇಭ್ಯಃ ಪ್ರದದೌ ಮಂತ್ರಂ ಮಂತ್ರಾರ್ಥಂ ಚ ಪ್ರಜಾಪತಿಃ ।
ತೇ ಲಬ್ಧ್ವಾ ಮಂತ್ರರತ್ನಂ ತತ್ಸಾಕ್ಷಾಲ್ಲೋಕಪಿತಾಮಹಾತ್ ॥೩೬॥

ಮಯಾ ಜ್ಞಾತೇನ ಮಾರ್ಗೇಣ ಮದಾರಾಧನಕಾಂಕ್ಷಿಣಃ ।
ಮೇರೋಸ್ತು ಶಿಖರೇ ದೇವಿ ಮುಂಜವಾನ್ನಾಮ ಪರ್ವತಃ ॥೩೭॥

ಮತ್ಪ್ರಿಯಃ ಸತತಂ ಶ್ರೀಮಾನ್ಮದ್ಗಣೈರಪಿ ರಕ್ಷಿತಃ ।
ತಸ್ಯಾಭ್ಯಾಶೇ ತಪಸ್ತೀವ್ರಂ ಲೋಕಸೃಷ್ಟಿಸಮುತ್ಸುಕಾಃ ॥೩೮॥

ದಿವ್ಯವರ್ಷಸಹಸ್ರಂತು ವಾಯುಭಕ್ಷಾಃ ಸಮಾಚರನ್ ।
ತೇಷಾಂ ಭಕ್ತಿಮಹಂ ದೃಷ್ಟ್ವಾ ಸದ್ಯಃ ಪ್ರತ್ಯಕ್ಷತಾಮಿಯಾಂ ॥೩೯॥

ಮಾಂ ದೃಷ್ಟ್ವಾ ತುಷ್ಟುವುಃ ಸರ್ವೇ ಪ್ರಣಮ್ಯೈವಂ ತಪೋರತಾಃ ॥೪೦॥

॥ ಮುನಯ ಊಚುಃ ॥

ಓಮಿತ್ಯೇಕಾಕ್ಷರೋಽಸಿ ಪ್ರಕೃತಿವಿರಹಿತೋ ಓಮಿತೀದಂ ಚ ಸರ್ವಂ
ತ್ವತ್ತೋ ಭಿನ್ನಂ ನಚೈತಚ್ಛಿವ ತವ ಮಹಿಮಾಂ ವಕ್ತಿವೇದಃ ಸದೈವೋಂ ।

---

ವನ್ನು ಉಪದೇಶಿಸಿ, ಅದರ ಅರ್ಥವನ್ನು ವಿವರವಾಗಿ ತಿಳಿಯಪಡಿಸಿದನು. ಅವರು ಬ್ರಹ್ಮನಿಂದ ಆ ಮಂತ್ರರತ್ನವನ್ನು ಪಡೆದು ನಾನು ಅಪ್ಪಣೆಮಾಡಿದ ಮಾರ್ಗವನ್ನನುಸರಿಸಿ ನನ್ನ ಪೂಜೆಯಲ್ಲಿ ಅಪೇಕ್ಷೆಯುಳ್ಳವರಾದರು. ॥೩೫-೩೬॥

ಪಾರ್ವತಿಯೇ ಕೇಳು, ಮೇರುಪರ್ವತದ ಶಿಖರಭಾಗದಲ್ಲಿ ಮುಂಜವತ್ಪರ್ವತವೆಂಬ ಹೆಸರಿನ ಒಂದು ಗಿರಿಪ್ರದೇಶವಿರುವುದು. ಅದು ನನಗೆ ಬಹಳ ಪ್ರಿಯವಾದುದು. ಆ ಕಾಂತಿಯುಕ್ತಪರ್ವತವು ಸರ್ವದಾ ನನ್ನ ಗಣಗಳಿಂದ ರಕ್ಷಿಸಲ್ಪಟ್ಟಿದೆ. ಅದರ ಸಮೀಪದಲ್ಲಿ ಈ ಹತ್ತು ಮಂದಿಯೂ ಲೋಕಸೃಷ್ಟಿಕಾರ್ಯದಲ್ಲಿ ಉತ್ಸುಕರಾಗಿ ದೇವಮಾನದ ಸಾವಿರ ವರ್ಷಗಳವರೆಗೆ ಕೇವಲ ವಾಯುಸೇವನೆಮಾಡುತ್ತಾ ಶಿವ ಪಂಚಾಕ್ಷರಮಂತ್ರವನ್ನುಚ್ಚರಿಸುತ್ತಾ ಘೋರತಪಸ್ಸುಮಾಡಿದರು. ಆಗ ನಾನು ಅವರ ಅಸಾಧಾರಣವಾದ ಭಕ್ತಿಯನ್ನು ನೋಡಿ ಅವರ ಮುಂದೆ ಪ್ರತ್ಯಕ್ಷನಾಗಿ ನಿಂತೆನು. ಆಗ ತಪಸ್ಸಿನಲ್ಲಿ ನಿರತರಾಗಿದ್ದ ಅವರೆಲ್ಲರೂ ನನಗೆ ನಮಸ್ಕರಿಸಿ ಹೀಗೆ ಸ್ತುತಿಸಿದರು. ॥೩೭-೩೮-೩೯-೪೦॥

ಪ್ರಕೃತಿಭಿನ್ನನಾದ ಸ್ವಾಮಿಯೆ! ' ಓಂ ' ಎಂಬ ಪ್ರಣವಮಂತ್ರದ ಅಕಾರವೇ

ಈಶಾನಸ್ತ್ವಂ ಸರ್ವವಿದ್ಯಾಧಿನಾಥೋ ಉದ್ಗೀಥತ್ವಂ ವಾಚಕತ್ವಂ
ತಥೈವೋಂ ॥೪೧॥

ನಮಸ್ತೇ ರುದ್ರತ್ವಂ ಶ್ರುತಿಗತನಮೋಽಂತ್ಯೈಕವಚಸಾಂ
ಭವಾನಂತೋಽನಾಥೋ ನತಿಕರಣನಾನಾವಿಧತನುಃ ।
ನ ಹಿ ತ್ವತ್ತೋ ಭಿನ್ನಂ ಜಗದಪಿಚ ನಾನ್ಯೈವ ಹಿ ಮೃಷಾ
ನಮಃ ಶೇಷೀ ದೇವೋ ನ ಹಿ ಶಿವ ವಿವಾದಃ ಶ್ರುತಿಬಲಾತ್ ॥೪೨॥

---

ನೀನಾಗಿರುವೆ. ಈ ಪ್ರಪಂಚವೆಲ್ಲವೂ ನಿನ್ನ ಸ್ವರೂಪವಾದ ಓಂಕಾರದಲ್ಲಿ ಅಡಗಿರುವುದು. ಈ ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವೂ ನಿನ್ನಿಂದಲೇ ವ್ಯಾಪಕವಾಗಿದೆಯೇ ವಿನಾ ಭಿನ್ನವಾಗಿಲ್ಲ. ಶಿವನೆ! ಯಾವಾಗಲೂ ವೇದವು ನಿನ್ನ ಮಹಿಮೆಯನ್ನು ಓಂಕಾರರೂಪದಲ್ಲಿಯೇ ಹೇಳುತ್ತಿರುವುದು. ಈಶ್ವರನೆನಿಸಿದ ನೀನು ಸಮಸ್ತವಿದ್ಯೆಗಳಿಗೂ ಒಡೆಯನಾಗಿರುವೆ. ಉದ್ಗೀಥಸ್ವರೂಪದಿಂದಲೂ ಅಂದರೆ ನಾದಮಯನಾದ ಬ್ರಹ್ಮರೂಪದಿಂದಲೂ ಮತ್ತು ವಾಚಕತ್ವದಿಂದಲೂ ಅಂದರೆ ವ್ಯವಹಾರಕ್ಕೆ ಯೋಗ್ಯನೆನಿಸಿಯೂ ಓಂಕಾರರೂಪನಾಗಿಯೂ ನೀನೇ ಆಗಿರುವೆ. ॥೪೧॥

ಪ್ರಪಂಚವನ್ನು ಅಳೆಯುವ ಸಾಧನ, ಅಳತೆಮಾಡುವವನ ಆಕಾರ, ಅಳತೆಗೆ ವಿಷಯವಾದ ಪ್ರಪಂಚ ಇವೆಲ್ಲವೂ ಓಂಕಾರದಿಂದಲೇ ಪ್ರತಿಧ್ವನಿತವಾಗಿರುವುದು. ಪೃಥಿವ್ಯಾದಿ ಪಂಚಭೂತಗಳ ಮುಖ್ಯಗುಣಗಳೆನಿಸಿದ, ಗಂಧಾದಿಗಳಿಗೂ ಮೂಲಭೂತವಾದದ್ದು ಓಂಕಾರವು. ಅಂತಹ ಓಂಕಾರವೇ ನೀನಾಗಿರುವೆ. ರುದ್ರದೇವನೆ! ನಿನಗೆ ನಮಸ್ಕರಿಸುವೆನು. ವೇದದಲ್ಲಿರುವ ಶತರುದ್ರೀಯ ಅಥವಾ ನಮಕಮಂತ್ರಗಳಿಗೆಲ್ಲಾ ನೀನೇ ವಿಷಯನಾಗಿರುವೆ. ಆ ಮಂತ್ರಸ್ವಾಮಿಯೂ ನೀನೇ ಆಗಿರುವೆ. ನಮಸ್ಕಾರಯೋಗ್ಯವಾದ ಅನೇಕ ದೇಹಗಳುಳ್ಳವನೂ ನೀನೇ ಅಲ್ಲವೆ? ಈ ಪ್ರಪಂಚದಲ್ಲಿ ನಿನಗಿಂತ ಬೇರೆಯಾದ ಯಾವ ವಸ್ತುವೂ ಇಲ್ಲ. ನಿನ್ನನ್ನು ಬಿಟ್ಟು ಪ್ರಪಂಚದಲ್ಲಿ ನಾನಾ ಪದಾರ್ಥಗಳಿರುವುದೂ ಸುಳ್ಳೇ, ಶೇಷಭೂಷಣನಾದ ಸ್ವಾಮಿಯೇ, ನಿನಗೆ ನಮಸ್ಕಾರವು. ಶಿವನೆ, ವೇದಪ್ರಾಮಾಣ್ಯಬಲದಿಂದ ಶಿವನೆನಿಸಿದ ನಿನ್ನನ್ನು ಬಿಟ್ಟು ಮತ್ತಾವ ದೇವತೆಯು ತಾನೇ ಇದ್ದೀತು? ದ್ವಿತೀಯವಸ್ತುರಹಿತನು ನೀನು ಎಂಬುದರಲ್ಲಿ ಅನುಮಾನವೇ ಇಲ್ಲ. ॥೪೨॥

ಮಹಾನಾತ್ಮಾ ಮಾಯಾವಿರಹಿತಶರೀರೋ ಮನುಗತೋ
ಮಹೇಶೋ ಮಂತ್ರಾರ್ಥಸ್ತ್ವಮಸಿ ಮತಿದಾತಾ ಮನಸಿಗಃ ।
ಮನಸ್ವೀ ಮಧ್ಯಸ್ಥೋ ಮರಣಜನನಾದ್ಯಂತರಹಿತೋ
ಮಧುರ್ಮಂತಾ ಮಾತಾ ಭವಸಿ ಹರ ಮನ್ವರ್ಜಿತಪದಃ ॥೪೩॥

ಶಿವಃ ಶಿಷ್ಟೋಽಪೀಷ್ಟೋ ಭವಸಿ ಶಿಪಿವಿಷ್ಟಃ ಶಿವತರಃ
ಶಿಖೀವಾಽಲ್ಪಃ ಸ್ವಲ್ಪಃ ಶಶಿಧರಶಿಖಾಸೂಕ್ತಮಹಿಮಾ ।
ಶಿಖಾನ್ವೈಶೋಽಯಂತ್ರೋ ಭವಸಿ ಶಿತಿಕಂಠಸ್ತ್ವಮಸಿ ದೃಕ್
ಶತಾವರ್ತೋ ಹರ್ತಾ ತ್ವಮಸಿ ಭವಹರ್ತಾಽಸಿ ಜಗತಾಂ ॥೪೪॥

---

ಮಂತ್ರಗತನಾದ ಮಹೇಶ್ವರನು ದೊಡ್ಡ ದೇಹಸ್ವರೂಪವುಳ್ಳವನು ; ಮಾಯೆಯನ್ನು ತ್ಯಜಿಸಿದ ಶುದ್ಧಜ್ಞಾನಸ್ವರೂಪನು, ಮಂತ್ರಾತ್ಮಕನು. ಮಹಾದೇವನೇ, ನೀನೇ ಸಕಲ ಮಂತ್ರಾರ್ಥವೆನಿಸಿರುವೆ. ಎಲ್ಲರ ಮನಸ್ಸಿನಲ್ಲಿಯೂ ನೆಲಸಿ, ಪುನಃ ಪ್ರವೃತ್ತಿಗೆ ಕಾರಣನಾಗಿರುವವನೂ ನೀನೇ. ಜಿತೇಂದ್ರಿಯರ ಹೃದಯವಾಸಿಯಾಗಿ ಜನನಮರಣರೂಪವಾದ ಆದ್ಯಂತಗಳಿಲ್ಲದವನೂ ನೀನೇ ಆಗಿರುವೆ. ರುಚಿಯೂ, ರುಚಿಯುಳ್ಳ ವಸ್ತುವೂ, ರುಚಿಯನ್ನರಿಯುವ ಇಂದ್ರಿಯವೂ, ನೀನೇ ಅಲ್ಲವೆ! ಸಮಸ್ತ ಭಕ್ತರ ಪಾಪಪರಿಹಾರಕನೂ, ಸಮಸ್ತ ಮಂತ್ರಗಳಿಂದ ಅರ್ಚಿತವಾದ ಪಾದಪದ್ಮಗಳುಳ್ಳವನೂ ಎನಿಸಿ, ಪರಮೇಶ್ವರನೇ, ನೀನು ಸರ್ವವ್ಯಾಪಕನಾಗಿರುವೆ. ॥೪೩॥

ಪರಮೇಶ್ವರನೇ, ನೀನು ಸನ್ಮಂಗಳಕರನು. ಸ್ವಭಾವತಃ ದಯಾಕರನು. ಆದರೂ ಭಕ್ತರಿಂದ ಪೂಜಿತನಾದರೆ ಅಂತಹ ಭಕ್ತರಿಗೆ ವಿಶೇಷವಾದ ಮಂಗಳವನ್ನೂ, ಸರ್ವವ್ಯಾಪಿಯಾಗಿರುವುದರಿಂದ ಸಕಲ ಜಗತ್ತಿಗೆ ಶಾಂತಿಯನ್ನೂ ಕರುಣಿಸುವುದು ನಿನ್ನ ವೈಶಿಷ್ಟ್ಯ. ಪರಶಿವನೇ, ನಿನ್ನ ಮಹಿಮೆಯನ್ನು ವಿವರಿಸುವ ಶ್ರೀರುದ್ರದ ಶ್ರೇಷ್ಠತೆಯನ್ನು ಹೇಳುವುದಾದರೂ ಹೇಗೆ? ಅಗ್ನಿಕಣವು ನೋಡುವುದಕ್ಕೆ ಅಲ್ಪವಾಗಿ ಕಂಡುಬಂದರೂ ಅದು ಸ್ವಶಕ್ತಿಯಿಂದ ವೃದ್ಧಿಯಾಗಿ ಅಭೇದ್ಯವಾದದ್ದನ್ನು ಭೇದಿಸಬಲ್ಲದು. ಅದರಂತೆಯೇ ಶತರುದ್ರಮಂತ್ರಾಂತರ್ಗತವಾದ ಶಿವಪಂಚಾಕ್ಷರಿಯು ಉಪಾಸಕರ ಪಾಪಪರ್ವತವನ್ನೇ ಭೇದಿಸಬಲ್ಲುದು. ಮಹಾದೇವನೇ, ನೀನು ಕಂಠದಲ್ಲಿ ವಿಷವನ್ನೂ, ಶಿಖೆಯಲ್ಲಿ ಚಂದ್ರನನ್ನೂ ಕಟ್ಟಿಹಾಕಿ ಪ್ರಪಂಚಕ್ಕೇ ನೀನು

ವಾಹೀಕೃತೋಕ್ಷ ಭಗವನ್ಹರ ವಾಮದೇವ
ವಾತಾಶನಾದಿಪರಿಭೂಷಿತ ದಿವ್ಯಕಾಯ ।
ವಾಸ್ತವ್ಯ ವಾಸ್ತುಪ ಮಹೇಶ್ವರ ವಾಮನೇತ್ರ
ಕ್ಲುಪ್ತಾರ್ಧಕಾಯ ಭಗವನ್ನವ ವಾರಣಾರೇ ॥೪೫॥

ಯತೋ ಜಾತಂ ವಿಶ್ವಂ ಯಮಯತಿ ತಥಾಂತೇ ಚ ಯದ್ವೃತೇ .
ನ ಹಿ ಸ್ವಸ್ಥಂ ಯಸ್ಮಾನ್ನ ಭವತಿ ತಥಾನನ್ಯಮತಿಕಂ ।
ಯಮಾತ್ಮಾನಂ ಸರ್ವೇ ನ ಹಿ ಖಲು ವಿಜಾನಂತಿ ತಮಸಃ
ಪರಂ ಪಾರಂ ಯತ್ತದ್ಭವಸಿ ಯತತಾಮೇವ ನಿಯತಂ ॥೪೬॥

---

ಒಂದು ನೇತ್ರಪ್ರಾಯನಾಗಿರುವೆ. ನಿನಗೆ ಅತ್ಯಂತ ಪ್ರಿಯವೆನಿಸಿದ ಶತರುದ್ರೀಯ ಮಂತ್ರವನ್ನು ನೂರುಸಾರಿ ಪುರಶ್ಚರಣೆಮಾಡುವುದರಿಂದ, ನಿನ್ನ ಭಕ್ತರಿಗೆ ಒದಗುವ ಸಾಂಸಾರಿಕದುಃಖಗಳೆಲ್ಲಾ ಪರಿಹಾರವಾಗುವುವು. ಅಂತಹ ಮಹಿಮಾಶಾಲಿಯು ನೀನು. ನಿನ್ನ ಆ ಶತರುದ್ರೀಯಮಂತ್ರವು ಅಷ್ಟು ಪ್ರಭಾವಯುತವಾದುದು. ॥೪೪॥

ವೃಷಭವಾಹನನೇ! ಷಡ್ಗುಣಪರಿಪೂರ್ಣನಾದ ಶಿವನೆ, ಸುಂದರಾಂಗಿಯಾದ ಗಿರಿಜೆಯಿಂದಲಂಕೃತವಾದ ಅರ್ಧದೇಹವುಳ್ಳವನೆ, ಸರ್ಪವೇ ಮೊದಲಾದವುಗಳಿಂದ ಲಂಕೃತವಾದ ದಿವ್ಯದೇಹವುಳ್ಳವನೆ, ಸಕಲ ಪ್ರಾಣಿಗಳ ಅಂತರಂಗದಲ್ಲಿಯೂ ವಾಸ ಮಾಡುವವನೆ, ವಾಸ್ತುದೇವತೆಗಳನ್ನು ಪಾಲಿಸುವವನೆ, ಮಹದೈಶ್ವರ್ಯಪೂರ್ಣನೆ, ಸುಂದರನೇತ್ರಳಾದ ದೇವಿಯಿಂದ ಆಕ್ರಾಂತವಾದ ಅರ್ಧಶರೀರವುಳ್ಳವನೆ, ಗಜಾಸುರ ಶತ್ರುವಾದ ಭಗವಂತನೆ, ನಮ್ಮನ್ನು ಕಾಪಾಡು. ॥೪೫॥

ತನ್ನಿಂದಲೇ ಸೃಷ್ಟವಾದ ಪ್ರಪಂಚವನ್ನೆಲ್ಲಾ ಪ್ರಳಯಕಾಲದಲ್ಲಿ ಶಿಕ್ಷಿಸುವವನು ನೀನು. ಮಹಾದೇವನೆನಿಸಿದ ನೀನಿಲ್ಲದಿದ್ದರೆ ಪ್ರಪಂಚವು ಸ್ವಸ್ಥವಾಗಿರುವುದಿಲ್ಲವಾದ್ದರಿಂದ ನೀನು ಎಲ್ಲರ ಹೃದಯದಲ್ಲಿಯೂ ನೆಲಸಿ ಪ್ರಪಂಚಕ್ಕೆ ಹಿತಚಿಂತಕನಾಗಿರುವೆ. ಪರಮಾತ್ಮನೆನಿಸಿದ ಮತ್ತು ವಿಶ್ವವ್ಯಾಪಿಯಾದ ನಿನ್ನನ್ನು ಎಲ್ಲರೂ ಸುಲಭವಾಗಿ ತಿಳಿಯಲಾರರು. ಅಜ್ಞಾನದ ಕೊನೆಯ ದಡವಾಗಿರುವ ಜ್ಞಾನರೂಪನು ನೀನು. ಕೇವಲ ನಿಯಮಶೀಲರಾದ ಜ್ಞಾನಿಗಳಿಗೆ ಮಾತ್ರ ನೀನು ಗೋಚರನು. ಸುಕೃತರಾಶಿಯಿಂದ ಜ್ಞಾನವನ್ನಾರ್ಜಿಸಿದವರಿಗೆ ಮಾತ್ರ ಸುಲಭನಾಗಿರುವ ನಿನಗೆ ಶಿರಸಾ ವಂದಿಸುವೆವು. ॥೪೬॥

॥ ಶ್ರೀ ಈಶ್ವರ ಉವಾಚ ॥

ಪಂಚಾಕ್ಷರಾರ್ಥಸ್ತವಮೇತದೇವಂ
ಪಠಂತಿ ಯೇಽಧ್ಯವಸಂತಿ ಮಾಂ ಶಿವೇ ।
ತ ಏವ ಧನ್ಯಾ ಜಗತೀತಲೇಽಸ್ಮಿ-
ನ್ತೇಷಾಂ ಹಿ ಮುಕ್ತಿಃ ಕರಗಾ ಭವೇತ ॥೪೭॥

ವೇದಕ್ಷೀರಮಹಾರ್ಣವೋದ್ಧೃತಮಹಾರುದ್ರೋರ್ಮಿ ನಾಮಾವಳೀ-
ಮಧ್ಯಭ್ರಾಜಿತ ದಿವ್ಯ ಹೃದ್ಯ ಸುಮಹಾಪಂಚಾಕ್ಷರೀವಿದ್ಯಯಾ ।
ರಾಜತ್ಯೇವ ಸುಧಾಕರಾಂಶುಚಯುವದ್ವಿಪ್ರೋನರೋ ವಾಸುರೋ
ಘೋರೋ ವಾಪ್ಯಸುರೋಽಥವಾ ಗಿರಿಸುತೇ ಮುಕ್ತೋ ಭವೇತ್ಪಾತಕೈಃ
॥೪೮॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಪಂಚಾಕ್ಷರೀವಿದ್ಯಾ
ಮಹಿಮಾವರ್ಣನಂ ನಾಮ ಸಪ್ತತ್ರಿಂಶೋಽಧ್ಯಾಯಃ

---

ಹೀಗೆ ಮುನಿಗಳು, "ಓಂ, ನಮಶ್ಶಿವಾಯ" ಎಂಬ ಶಿವಪಂಚಾಕ್ಷರ ಮಂತ್ರದ ಆದ್ಯಕ್ಷರಗಳಿಂದ ಪ್ರಾರಂಭವಾದ ಆರು ಶ್ಲೋಕಗಳಿಂದ, ಆಯಾ ಅಕ್ಷರಗಳ ಅರ್ಥವನ್ನೆಲ್ಲಾ ಪ್ರಕಾಶಪಡಿಸಿ ತನ್ನನ್ನು ಸ್ತುತಿಸುತ್ತಿರುವುದನ್ನು ಕೇಳಿ ತನ್ನ ಪ್ರಿಯಪತ್ನಿಯಾದ ಪಾರ್ವತಿಗೆ ಶಂಕರನು ಇಂತೆಂದನು. ದೇವಿ, ಪಂಚಾಕ್ಷರ ಮಂತ್ರದ ಅರ್ಥಬೋಧಕವಾಗಿರುವ ಈ ಸ್ತೋತ್ರವನ್ನು ಯಾರು ಓದುತ್ತಾರೋ ಅಥವಾ ಮನನಮಾಡುತ್ತಾರೋ, ಅವರೇ ಈ ಭೂಮಂಡಲದಲ್ಲಿ ಧನ್ಯರು. ಅವರಿಗೆ ಖಂಡಿತವಾಗಿ ಮುಕ್ತಿಯು ಹಸ್ತಗತವಾಗುವುದು. ಈ ಶ್ಲೋಕಗಳಲ್ಲಿ ನಿಜವಾಗಿಯೂ ಪಂಚಾಕ್ಷರಮಂತ್ರದ ಅರ್ಥವು ಪ್ರತಿಬಿಂಬಿತವಾಗಿರುವುದು. ॥೪೭॥

ಗಿರಿಜೆ, ವೇದರಾಶಿಯೆಂಬ ಕ್ಷೀರಸಮುದ್ರದಲ್ಲಿ ತೋರಿಬರುವ ಮಹಾಮಂತ್ರ ದಲ್ಲಿರುವ ಶಿವನಾಮಸಮೂಹಗಳೆಂಬ ಅಲೆಗಳ ಮಧ್ಯದಲ್ಲಿ ವಿರಾಜಿಸುತ್ತಿರುವ ದಿವ್ಯವೂ ಮನೋಹರವೂ ಆದ ಈ ಉತ್ತಮವಾದ ಶಿವಪಂಚಾಕ್ಷರೀವಿದ್ಯೆಯ ಲಾಭದಿಂದ ಬ್ರಾಹ್ಮಣನಾಗಲಿ, ಇತರ ಯಾವ ಮತದವರಾಗಲಿ, ದೇವತೆಗಳಾಗಲಿ ಅಥವಾ ಭಯಂಕರರಾದ ರಾಕ್ಷಸರೇ ಆಗಲಿ, ಅವರು ಪಾಪರಹಿತನಾಗಿ ಅಮೃತ

ಕಿರಣಸಮೂಹದಂತೆ ಜಗದಾನಂದಕರರಾಗಿ ವಿರಾಜಿಸುತ್ತಾರೆಂದು ಶಿವನು ಗಿರಿಜೆಗೆ ಹೇಳಿದ ವಿಷಯವನ್ನು ಜೈಗೀಷವ್ಯನಿಗೆ ಸ್ಕಂದನು ತಿಳಿಸಿದನು. ||೪೮||

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಪಂಚಾಕ್ಷರೀವಿದ್ಯೆಯ ಪ್ರಭಾವ ವರ್ಣನೆಯೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು.





॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಅಷ್ಟತ್ರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಪಂಚಾಕ್ಷರಸ್ಯರ್ಷಿಚ್ಛಂದಬೀಜಶಕ್ತಿಂ ಚ ದೈವತಂ ।
ನ್ಯಾಸಂ ಷಡಂಗಂ ದಿಗ್ಬಂಧಂ ವಿನಿಯೋಗಮಶೇಷತಃ ॥೧॥

ಪ್ರೋಕ್ತವಾನಹಮಾರ್ಯಾಣಾಂ ಜಗತಃ ಸೃಷ್ಟಿಸಿದ್ಧಯೇ ।
ತತಸ್ತನ್ಮಂತ್ರಮಾಹಾತ್ಮ್ಯಾದೃಷಯಸ್ತಪಸೇ ಸ್ಥಿತಾಃ ॥೨॥

ಸೃಷ್ಟಿಂ ವಿತನ್ವತೇ ಸಮ್ಯಕ್ಸದೇವಾಸುರಮಾನುಷಾಂ ।
ಅಸ್ಯಾಃ ಪರಮವಿದ್ಯಾಯಾಃ ಸ್ವರೂಪಮಧುನೋಚ್ಯತೇ ॥೩॥

---

## ಮೂವತ್ತೆಂಟನೆಯ ಅಧ್ಯಾಯ

ಪಾರ್ವತಿ, ಈ ಪಂಚಾಕ್ಷರಮಂತ್ರವನ್ನು ಜಪಿಸುವಾಗ ಋಷಿ, ಛಂದಸ್ಸು, ಬೀಜ, ಶಕ್ತಿ, ದೇವತೆ ಇವುಗಳನ್ನು ಹೇಳುತ್ತಾ, ಷಡಂಗನ್ಯಾಸಪೂರ್ವಕವಾಗಿ ಆ ಮಂತ್ರದ ದಿಗ್ಬಂಧ ಮತ್ತು ವಿನಿಯೋಗಗಳನ್ನೆಲ್ಲಾ ಸಂಪೂರ್ಣವಾಗಿ ಹೇಳಿ ಪ್ರಪಂಚ ಸೃಷ್ಟಿ ಕಾರ್ಯವು ಸುಲಭವಾಗಿ ನೆರವೇರುವಂತೆ ನಾನು ಆ ಬ್ರಹ್ಮಸೂನುಗಳಾದ ಋಷಿವರ್ಯರಿಗೆ ಹೇಳಿದೆನು. ಆಗ ಆ ಮಂತ್ರಪ್ರಭಾವದಿಂದ ತಪಸ್ಸುಮಾಡುತ್ತಿದ್ದ ಆ ಋಷಿಗಳು ದೇವ, ರಾಕ್ಷಸ, ಮಾನುಷರೂಪವಾದ ಈ ಜಗತ್ಸೃಷ್ಟಿಯನ್ನು ನಿರ್ವಿಘ್ನವಾಗಿ ನೆರವೇರಿಸಿದರು. ದೇವಿ, ಈ ಪರಮವಿದ್ಯೆಯ ಸ್ವರೂಪವನ್ನು ಈಗ ಹೇಳುತ್ತೇನೆ ಕೇಳು, ॥೧-೨-೩॥

ಆದೌ ನಮಃ ಪ್ರಯೋಕ್ತವ್ಯಂ ಶಿವಾಯೇತಿ ತತಃ ಪರಂ ।
ಸೈಷಾ ಪಂಚಾಕ್ಷರೀವಿದ್ಯಾ ಸರ್ವಶ್ರುತಿಶಿರೋಗತಾ ॥೪॥

ಶಬ್ದಜಾತಸ್ಯ ಸರ್ವಸ್ಯ ಬೀಜಭೂತಾ ಸಮಾಸತಃ ।
ಪ್ರಥಮಂ ಮನ್ಮುಖೋದ್ಗೀರ್ಣಾ ಸಾಮನೋವಾತ್ಮವಾಚಿಕಾ ॥೫॥

ತದಾ ಚಾಮೀಕರಪ್ರಖ್ಯಾ ಪೀನೋನ್ನತಪಯೋಧರಾ ।
ಚತುರ್ಭುಜಾ ತ್ರಿನಯನಾ ಬಾಲೇಂದುಕೃತಶೇಖರಾ ॥೬॥

ಪದ್ಮೋತ್ಪಲಧರಾ ಸೌಮ್ಯಾ ವರದಾಭಯಪಾಣಿಕಾ ।
ಸರ್ವಲಕ್ಷಣಸಂಪನ್ನಾ ಸರ್ವಾಭರಣಭೂಷಿತಾ ॥೭॥

ಸಿತಪದ್ಮಾಸನಾಸೀನಾ ನೀಲಕುಂಚಿತಮೂರ್ಧಜಾ ।
ಅಸ್ಯಾಃ ಪಂಚವಿಧಾ ವರ್ಣಾಃ ಪ್ರಸ್ಫುರದ್ರಶ್ಮಿಮಂಡಲಾಃ ॥೮॥

---

ಮೊದಲು 'ನಮಃ' ಶಬ್ದವನ್ನೂ ಅನಂತರ 'ಶಿವಾಯ' ಎಂಬ ಪದವನ್ನೂ ಉಚ್ಚರಿಸಬೇಕು. ಈ ಪಂಚಾಕ್ಷರೀವಿದ್ಯೆಯು ಸಕಲ ಮಂತ್ರಗಳಿಗೂ ಮೂರ್ಧನ್ಯವಾಗಿದೆ. ಸಂಗ್ರಹವಾಗಿ ಹೇಳುವುದಾದರೆ ಸಮಸ್ತ ಶಬ್ದಜಾಲಗಳಿಗೂ ಇದು ಬೀಜಸ್ವರೂಪವಾಗಿದೆ. ಮೊದಲು ನನ್ನ ಮುಖದಿಂದ ಉಚ್ಚರಿಸಲ್ಪಟ್ಟ ಈ ಪಂಚಾಕ್ಷರೀ ವಿದ್ಯೆಯು ನನ್ನ ಸ್ವರೂಪವನ್ನೇ ಹೇಳುತ್ತಿರುವುದು. ಸಾಕ್ಷಾತ್ ಶಿವಸ್ವರೂಪವೇ ಶಿವಪಂಚಾಕ್ಷರೀಮಂತ್ರವು. ॥೪-೫॥

ಆ ಮಂತ್ರದ ಸ್ವರೂಪವೇನೆಂದರೆ, ಅದು ಉದ್ಭವಿಸಿದಾಗ ಸುವರ್ಣಕಾಂತಿಯುಳ್ಳದೂ, ದಪ್ಪನಾಗಿ ಉನ್ನತವಾದ ಸ್ತನಗಳುಳ್ಳದೂ ಆದ ಸ್ತ್ರೀಯ ಆಕಾರವುಳ್ಳದ್ದಾಗಿದ್ದಿತು. ಅದಕ್ಕೆ ನಾಲ್ಕು ತೋಳುಗಳೂ ಮೂರು ಕಣ್ಣುಗಳೂ ಬಾಲಚಂದ್ರಾಲಂಕೃತವಾದ ಶಿರಸ್ಸು, ತಾವರೆ, ನೈದಿಲೆಗಳನ್ನು ಹಿಡಿದುಕೊಂಡಿರುವ ಸೌಮ್ಯವಾದ ಆಕೃತಿ, ವರದ ಮತ್ತು ಅಭಯಹಸ್ತಗಳಿಂದ ಯುಕ್ತವಾಗಿ ಸಕಲ ಲಕ್ಷಣಗಳಿಂದಲೂ ಕೂಡಿ, ಸರ್ವಾಭರಣಗಳಿಂದಲೂ ಅಲಂಕೃತವಾಗಿ ಶುಭ್ರವಾದ ತಾವರೆಯಲ್ಲಿ ಕುಳಿತು, ನೀಲವೂ, ಗುಂಗುರೂ ಆದ ಕೂದಲುಳ್ಳ ಆಕೃತಿಯಾಗಿ ಗೋಚರಿಸಿತು. ॥೬-೭॥

ಈ ಪಂಚಾಕ್ಷರಮಯವಾದ ಆಕೃತಿಗೆ ಕಿರಣಜಾಲಗಳಿಂದ ಪ್ರಕಾಶಿಸುತ್ತಿರುವ ಪೀತ (ಹೊಂಬಣ್ಣ) ಕಪ್ಪು, ಧೂಸರವರ್ಣ, ಬಿಳುಪು ಮತ್ತು ಕೆಂಪುಬಣ್ಣಗಳೆಂಬ

ಪೀತಃ ಕೃಷ್ಣಸ್ತಥಾ ಧೂಮ್ರಃ ಶ್ವೇತಾಭೋರಕ್ತ ಏವ ಚ ।
ಪೃಥಕ್ಪ್ರಯೋಜ್ಯಾ ಏವ್ಯೈತೇ ಬಿಂದುನಾದವಿಭೂಷಿತಾಃ ॥೯॥

ಅರ್ಧಚಂದ್ರಾಕೃತಿರ್ಬಿಂದುರ್ನಾದೋ ದೀಪ್ತಶಿಖಾಕೃತಿಃ ।
ಬೀಜಂ ದ್ವಿತೀಯಂ ಬೀಜೇಷು ಮಂತ್ರಸ್ಯಾಸ್ಯ ವರಾನನೇ ॥೧೦॥

ದೀರ್ಘಸ್ತುರೀಯಂ ಪೂರ್ವಸ್ಯ ಪಂಚಮಂ ಶಕ್ತಿಮಾದಿಶೇತ್ ।
ವಾಮದೇವೋ ನಾಮ ಋಷಿಃ ಪಂಕ್ತಿಶ್ಛಂದ ಉದಾಹೃತಂ ॥೧೧॥

ದೇವತಾ ಶಿವ ಏವಾಹಂ ಮಂತ್ರಸ್ಯಾಸ್ಯ ವರಾನನೇ ।
ಗೌತಮೋಽತ್ರಿರ್ವರಾರೋಹೇ ವಿಶ್ವಾಮಿತ್ರಸ್ತಥಾಂಗಿರಾಃ ॥೧೨॥

ಭರದ್ವಾಜಶ್ಚ ವರ್ಣಾನಾಂ ಕ್ರಮಶೋ ಋಷಯಃ ಸ್ಮೃತಾಃ ।
ಗಾಯತ್ರ್ಯನುಷ್ಟುಪ್ತ್ರಿಷ್ಟುಪ್ಛಂದಾಂಸಿ ಬೃಹತೀ ವಿರಾಟ್ ॥೧೩॥

---

ಐದು ಬಣ್ಣಗಳು ಕಂಗೊಳಿಸುತ್ತಿವೆ. ಬಿಂದು ಮತ್ತು ನಾದಗಳಿಂದಲಂಕೃತವಾಗಿರುವ ಇವುಗಳನ್ನು ಪ್ರತ್ಯೇಕವಾಗಿ ಪ್ರಯೋಗಿಸಬೇಕು. ಒಂದೊಂದಕ್ಷರಕ್ಕೂ ಬೇರೆ ಬೇರೆಯಾದ ವರ್ಣ, ಬಿಂದು, ನಾದಗಳುಂಟು. ಬಿಂದುವು ಯಾವಾಗಲೂ ಅರ್ಧಚಂದ್ರಾಕೃತಿಯುಳ್ಳದುದು. ಉರಿಯುವ ಜ್ವಾಲೆಯ ಆಕಾರವೇ ನಾದಸ್ವರೂಪವು. ದ್ವಿತೀಯಾಕ್ಷರವೇ ಬೀಜವು. ನಾಲ್ಕನೆಯದಾದ ವಾ ಎಂಬ ದೀರ್ಘಾಕ್ಷರವೇ ಶಕ್ತಿಯು. ಐದನೆಯದಾದ ಯಕಾರವೇ ಶಕ್ತಿಯು. ಹಿಂದೆ ಹೇಳಿದ ಶಕ್ತಿ, ಬೀಜ, ಬಿಂದು ಮುಂತಾದವುಗಳನ್ನು ಶಿವಪಂಚಾಕ್ಷರೀ ಮಂತ್ರ ಜಪಕಾಲದಲ್ಲಿ ಆಯಾ ಅಕ್ಷರಗಳನ್ನುಚ್ಚರಿಸುತ್ತಾ ಹೇಳಬೇಕು. ॥೮-೯-೧೦॥

ಈ ಪಂಚಾಕ್ಷರ ಮಂತ್ರಕ್ಕೆ ವಾಮದೇವನೆಂಬವನೇ ಋಷಿಯು. ಪಂಕ್ತಿಯೆಂಬುದೇ ಛಂದಸ್ಸು. ಶಿವನೆನಿಸಿದ ನಾನೇ ದೇವತೆಯಾಗಿರುವೆನು. ಪ್ರಸನ್ನ ಮುದ್ರೆಯುಳ್ಳ ದೇವಿಯೇ ಕೇಳು, ಈ ಮಂತ್ರಕ್ಕೆ ಗೌತಮ, ಅತ್ರಿ, ವಿಶ್ವಾಮಿತ್ರ, ಅಂಗಿರಸ್ಸು ಮತ್ತು ಭರದ್ವಾಜರೆಂಬವರು ಕ್ರಮವಾಗಿ ಐದು ವರ್ಣಗಳಿಗೂ ಋಷಿಗಳೆನಿಸಿರುವರು. ॥೧೧-೧೨॥

ದೇವಿಯೇ, ಕೇಳು. ಕ್ರಮವಾಗಿ ಈ ಐದು ವರ್ಣಗಳಿಗೂ, ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತಿ ಮತ್ತು ವಿರಾಟ್ಛಂದಸ್ಸುಗಳು ಉಕ್ತವಾಗಿವೆ,

ಇಂದ್ರೋ ರುದ್ರೋ ಹರಿರ್ಬ್ರಹ್ಮಾಸ್ಕಂದಸ್ತೇಷಾಂ ಚ ದೈವತಾಃ ।
ಮಮ ಪಂಚಮುಖಾನ್ಯಾಹುಃ ಸ್ಥಾನಂ ತೇಷಾಂ ವರಾನನೇ ॥೧೪॥

ಪೂರ್ವಾದಿಶೋರ್ಧ್ವಪರ್ಯಂತಂ ನಕಾರಾದಿಯಥಾಕ್ರಮಂ ।
ಉದಾತ್ತಃ ಪ್ರಥಮೋ ವರ್ಣಶ್ಚತುರ್ಥಶ್ಚ ದ್ವಿತೀಯಕಃ ॥೧೫॥

ಪಂಚಮಃ ಸ್ವರಿತಶ್ಚೈವ ಮಧ್ಯಮೋ ನಿಹತಃ ಸ್ಮೃತಃ ।
ಮೂಲವಿದ್ಯಾ ಶಿವಸ್ಯೈವ ಸೂತ್ರಂ ಪಂಚಾಕ್ಷರಂ ತಥಾ ॥೧೬॥

ನಾಮಾನ್ಯಸ್ಯ ವಿಜಾನೀಯಾತ್ಸೈವ ಮೇ ಹೃದಯಂ ಮತಂ ।
ನಕಾರಃ ಶಿರ ಉಚ್ಯೇತ ಮಕಾರಸ್ತು ಶಿವೋಚ್ಯತೇ ॥೧೭॥

ಶಿಕಾರಃ ಕವಚಂ ತದ್ವದ್ವಕಾರೋ ನೇತ್ರ ಉಚ್ಯತೇ ।
ಯಕಾರೋಽಸ್ತ್ರಂ ನಮಃ ಸ್ವಾಹಾ ವಷಟ್ ಹುಂ ವೌಷಡಿತ್ಯಪಿ ॥೧೮॥

---

ಇಂದ್ರ, ರುದ್ರ, ವಿಷ್ಣು, ಬ್ರಹ್ಮ ಮತ್ತು ಸ್ಕಂದರು ಅವುಗಳಿಗೆ ಅಭಿಮಾನ ದೇವತೆಗಳು. ಪಾರ್ವತಿಯೇ ಕೇಳು, ನನ್ನ ಈ ಐದು ಮುಖಗಳು ಕ್ರಮವಾಗಿ ಅವುಗಳಿಗೆ ಸ್ಥಾನಗಳೆಂದು ತಿಳಿದುಕೊ. ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮತ್ತು ಊರ್ಧ್ವದಿಕ್ಕುಗಳಿಗೆ ನ, ಮಃ, ಶಿ, ವಾ, ಯ ಎಂಬ ಐದು ವರ್ಣಗಳೂ ಅಧಿದೇವತೆಗಳೆನಿಸಿವೆ. ಸ್ವರದಲ್ಲಿ ಒಂದು, ಎರಡು ಮತ್ತು ನಾಲ್ಕನೆಯ ವರ್ಣಗಳು ಉದಾತ್ತಗಳು. ಐದನೆಯದು ಸ್ವರಿತವು, ಮೂರನೆಯದು ನಿಹತಸ್ವರ (ಅನುದಾತ್ತ) ವೆಂದು ಹೇಳಲ್ಪಟ್ಟಿದೆ. ॥೧೩-೧೪-೧೫॥

ಈ ಪಂಚಾಕ್ಷರಮಂತ್ರವು ಶಿವನ ಮೂಲವಿದ್ಯೆಯೆಂದೂ, ಶಿವಸೂತ್ರವೆಂದೂ ಪ್ರಸಿದ್ಧವಾಗಿದೆ. ಇದರ ಹೆಸರುಗಳನ್ನು ತಿಳಿಯುವುದೇ ನನ್ನ(ಶಿವ)ಹೃದಯವೆಂದೂ ಜ್ಞಾನಿಗಳು ಹೇಳುವರು. ನಕಾರವೇ ಶಿವನ ಶಿರವೆಂದು ಹೇಳಲ್ಪಡುವುದು. ಮಕಾರವೇ ಪಾರ್ವತಿಯೆನಿಸುವಳು. 'ಶಿ' ವರ್ಣವು ಕವಚವೆಂದೂ, ವಕಾರವು ನೇತ್ರವೆಂದೂ ಹೇಳಲ್ಪಡುತ್ತದೆ. ಯಕಾರವು ಅಸ್ತ್ರವೆಂದೂ ಉಕ್ತವಾಗಿದೆ. ನಮಃ ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಇವು ನಾದವಾಚಕ ಪದಗಳು. ॥೧೬-೧೭-೧೮॥

ಫಡಿತ್ಯಪಿ ಚ ವರ್ಣಾನಾಮಂತೇ ಗತ್ವಂ ಯಥಾತಥಾ ।
ತವಾಪಿ ಮೂಲಮಂತ್ರೋಽಯಂ ಕಿಂಚಿದ್ಭೇದಸಮನ್ವಯಾತ್ ॥೧೯॥

ತತ್ರಾಸ್ಯ ಪಂಚಮೋ ವರ್ಣೋ ದ್ವಾದಶಸ್ವರ ಭೂಷಿತಃ ।
ತಸ್ಮಾದನೇನ ಮಂತ್ರೇಣ ಮನೋವಾಕ್ಕಾಯಭೇದತಃ ॥೨೦॥

ಆವಯೋರರ್ಚನಂ ಕುರ್ಯಾಜ್ಜಪಹೋಮಾದಿಕಂ ತಥಾ ।
ಯಥಾಪ್ರಜ್ಞಂ ಯಥಾಶ್ರದ್ಧಂ ಯಥಾಕಾಲಂ ಯಥಾಸ್ಮೃತಿಃ ॥೨೧॥

ಯಥಾಶಕ್ತಿ ಯಥಾಸಂಪದ್ಯಥಾ ಯೋಗಂ ಯಥಾರತಿ ।
ಯದಾಕದಾಪಿ ವಾ ಭಕ್ತ್ಯಾ ಯತ್ರಕುತ್ರಾಪಿ ವಾ ವೃತಾ ॥೨೨॥

ಯೇನ ಕೇನಾಪಿ ವಾ ದೇವಿ ಪೂಜಾ ಮುಕ್ತಿಂ ನಯಿಷ್ಯತಿ ।
ಮಯ್ಯಾಸಕ್ತೇನ ಮನಸಾ ಯತ್ಕೃತಂ ಮಮ ಸುಂದರಿ ॥೨೩॥

---

ಫಡಿತ್ಯಾದಿ ಶಬ್ದಗಳು ಮೂಲಮಂತ್ರದ ವರ್ಣಗಳ ಕೊನೆಯಲ್ಲಿ ಕ್ರಮವಾಗಿ ಬರುವುವು. ದೇವಿ, ಸ್ವಲ್ಪ ವ್ಯತ್ಯಾಸದಿಂದ ನಿನಗೂ ಇದೇ ಮೂಲಮಂತ್ರವಾಗಿರುವುದು. ಅದರಲ್ಲಿ ಐದನೆಯ ವರ್ಣವಾದ ಯಕಾರವೇ ನೀನು. ಒಟ್ಟು ಈ ಮಂತ್ರದಲ್ಲಿ ಹನ್ನೆರಡು ಅಕ್ಷರಗಳಿರುತ್ತವೆ. (ಸ್ವರ ಮತ್ತು ವ್ಯಂಜನಭೇದದಿಂದ) ಆದ್ದರಿಂದ ಈ ಮಂತ್ರವನ್ನುಚ್ಚರಿಸುತ್ತಾ ಮನಸ್ಸು, ವಾಕ್ಕು ಮತ್ತು ದೇಹಭೇದಗಳಿಂದ ನಮ್ಮಿಬ್ಬರ ಪೂಜೆಯನ್ನೂ ಜಪ ಮತ್ತು ಹೋಮಾದಿಗಳನ್ನೂ ಮಾಡಬೇಕು. ಹೀಗೆ ಮಾಡುವುದರಿಂದ ಜಗತ್ತಿಗೆ ಮೂಲವಸ್ತುಗಳೆನಿಸಿದ ನಮ್ಮಿಬ್ಬರನ್ನೂ ತೃಪ್ತಿಪಡಿಸಿದಂತಾಗುವುದು. ॥೧೯-೨೦॥

ಈ ಮಂತ್ರಜಪಕ್ಕೆ ಆವರಲ್ಲಿರುವಷ್ಟು ಪ್ರಜ್ಞೆ, ಶ್ರದ್ಧೆ, ಕಾಲ, ಸ್ಮರಣೆ, ಶಕ್ತಿ, ಸಂಪತ್ತು, ಆಸಕ್ತಿ ಇವುಗಳೇ ಸಾಕು. ಅಷ್ಟರಿಂದಲೇ ಉಪಾಸಕರು ನನ್ನ ಪ್ರೀತಿಯನ್ನು ಸಂಪಾದಿಸಬಹುದು. ॥೧೯-೨೦॥

ದೇವಿಯೇ, ಯಾವ ಕಾಲ, ದೇಶಗಳಲ್ಲೇ ಆಗಲಿ, ಭಕ್ತಿಯಿಂದ ಯಾರು ನನ್ನನ್ನು ಪೂಜೆಮಾಡಿದರೂ ಅವರಿಗೆ ಮುಕ್ತಿಯುಂಟಾಗುವುದು, ಸುಂದರಿ! ನನ್ನಲ್ಲಿಟ್ಟ ಸ್ಥಿರಮನಸ್ಸಿನಿಂದ ಯಾವುದನ್ನು ಮಾಡಿದರೂ ಅದು ಕ್ರಮವಾಗಲಿ,

ತತ್ಪ್ರಿಯಂ ಚ ಶಿವಂ ಚೈವ ಕ್ರಮೇಣಾಪ್ಯಕ್ರಮೇಣ ವಾ ।
ತಥಾಪಿ ಮಮ ಭಕ್ತಾ ಯೇ ಶಾಸ್ತ್ರೇಷು ವಿವಶಾಃ ಪುನಃ ॥೨೪॥

ತೇಷಾಮರ್ಥೇನ ಶಾಸ್ತ್ರೇಷು ಮಯೈವ ನಿಯಮಃ ಕೃತಃ ॥೨೫॥

ಪಂಚಾಕ್ಷರಾತ್ಕ್ಷರತಿ ಪಾಪಗಣಂ ಚ ಕೃತ್ಸ್ನಂ
ರಕ್ಷಾಭಿಲಿಪ್ತಶಿರಸಾಮಭಿರಕ್ಷಿತೇಯಂ ।
ರೂಕ್ಷಾ ಭವಂತ್ಯಖಿಲರಾಕ್ಷಸಯಕ್ಷಸಂಘಾಃ
ಸಂಧುಕ್ಷಿತಾಃ ಪರಿಭವಂತಿ ಶಿವೇಕ್ಷಜಾಲೈಃ ॥೨೬॥

ಪ್ರಾತಃ ಪ್ರದೋಷಸಮಯೇ ನಿಶಿ ವಾ ಸುದಕ್ಷ-
ಸ್ತ್ರ್ಯಕ್ಷಾನುರಕ್ತಹೃದಯೋ ಜಪತಿ ಪ್ರಮೋದಾತ್ ।
ಪಂಚಾಕ್ಷರಂ ಪರಮಪಾವನಮೇತದೇವ
ರುದ್ರತ್ವದಾಯಿ ಗಿರಿಜೇ ವಿರಜೋ ಭವೇತ್ಸಃ ॥೨೭॥

---

ಅಕ್ರಮವಾಗಲಿ, ನನಗೆ ಪ್ರಿಯವೂ ಮಂಗಳಕರವೂ ಆಗುವುದು. ಆದಕ್ಕಾಗಿಯೇ ಯಾರು ನನ್ನ ಭಕ್ತರಾಗಿದ್ದು ಅವರಿಗೆ ಸಾಕಾದಷ್ಟು ಶಾಸ್ತ್ರಜ್ಞಾನ ಮತ್ತು ದೃಢ ಮನಸ್ಸು ಇಲ್ಲದೆ ಹೋಗುವುದೋ ಅಂತಹವರಿಗಾಗಿಯೇ ಈ ಮಂತ್ರವು ಎಂದು ಶಾಸ್ತ್ರಗಳಲ್ಲಿ ನಾನು ನಿಯಮಮಾಡಿರುವೆನು. ॥೨೨-೨೩-೨೪-೨೫॥

ಈ ಪಂಚಾಕ್ಷರಜಪದಿಂದ ಭಕ್ತರ ಸಕಲ ಪಾಪಸಮೂಹವೂ ಕ್ಷಯವಾಗುತ್ತದೆ. ಈ ಮಂತ್ರವು ವಿಭೂತಿಯಿಂದ ಲೇಪಿತವಾದ ಫಾಲಪ್ರದೇಶವುಳ್ಳವರಿಗೆ ಮಾತ್ರ ನಿಜವಾದ ರಕ್ಷಕವಾಗಿರುವುದು. ಇದರ ಮಹಿಮೆಯಿಂದ ಸಮಸ್ತ ರಾಕ್ಷಸರ ಮತ್ತು ಯಕ್ಷರ ಸಮೂಹವೂ ಮಾನವರನ್ನು ಪೀಡಿಸಲು ಹಿಂದೆಗೆಯುತ್ತದೆ. ಪಾರ್ವತಿಯೇ, ಈ ಪಂಚಾಕ್ಷರಮಂತ್ರ ಜಪಮಾಡುವುದರಿಂದ ಪಾಪಗಳು ಇಂದ್ರಿಯ ಜಾಲಗಳಿಂದ ಕೊಡವಲ್ಪಡುತ್ತವೆ. ಅಂದರೆ ಜಿತೇಂದ್ರಿಯತ್ವವು ಲಭಿಸಿ ತನ್ಮೂಲಕ ಪಾಪರಾಹಿತ್ಯವೂ ಸಂಭವಿಸುತ್ತದೆ. ॥೨೬॥

ಪಾರ್ವತಿಯೇ, ಈ ಮಂತ್ರವನ್ನು ಜಪಿಸಲು ಪ್ರಾತಃಕಾಲ, ಪ್ರದೋಷ ಸಮಯ, ರಾತ್ರಿವೇಳೆಗಳು ಪ್ರಶಸ್ತವಾದವುಗಳು. ಆಗ ಭಕ್ತನು ನಿಯಮದಿಂದ ಕೂಡಿ ಮುಕ್ಕಣ್ಣನಾದ ಮಹೇಶ್ವರನನ್ನು (ನನ್ನನ್ನು) ಸಂತೋಷವಾಗಿ ನೆಟ್ಟ

ವೇದಾನ್ಯಜ್ಞಾನ್ವ್ರತಂ ಯೋ ಶಿಖಿಮುಖವಿಹಿತಂ ಹೋಮಜಾಲಂ
ಚ ಕೃತ್ಸ್ನಂ
ಕನ್ಯಾಂ ಪೃಥ್ವೀಂ ಚ ವಾಣೀಂ ದ್ವಿಜಗಣಕಲಿತಾಮಪ್ಯಧನ್ಯೋ ಭವೇತ ।
ಶ್ರೀಪಂಚಾಕ್ಷರಜಾಪನೋಜ್ಝಿತಮತಿರ್ಯಸ್ತಸ್ಯ ಕಿಂ ದೇವನ್ಯೈ-
ರ್ಜಾಪ್ಯಂ ತ್ವೇತದನುಕ್ಷಣಂ ದ್ವಿಜಗಣೈಃ ಪಂಚಾಕ್ಷರಂ ಮೇ ಪರಂ ॥೨೮॥

ಜಾಪ್ಯಂ ತ್ಯಕ್ತ್ವಾ ಶಿವೇ ಯೋ ಜಪತಿ ಮನುಗಣಂ ತ್ವನ್ಯಮೇವೇಹ ಮೂಢೋ
ಗೂಢಂ ಗೂಢಪದಾಂಗಶೋಭಿಸುದೃಢಂ ತ್ಯಕ್ತ್ವಾ ಮೃಡೇಡಾಮಪಿ ।
ಸಂತ್ಯಜ್ಯಾಂತ್ಯಜಸಂಭವೇ ಪ್ರಭವತೇ ವೇದಾನುವಾದೇ ರತೋ
ವಿಪ್ರೋಽಪಿ ಶ್ವಪಚಾಧಮೇನ ಸದೃಶೋ ವಿಷ್ಠಾಸುತಿಷ್ಠೇಚ್ಛತಂ ॥೨೯॥

---

ಮನಸ್ಸಿನಿಂದ ಮೊದಲು ಧ್ಯಾನಮಾಡುವುದರಿಂದಲೇ ಆತನು ಪರಮಪಾವನನೆನಿಸು ವನು. ದೇವಿ, ಈ ಪಂಚಾಕ್ಷರ ಮಂತ್ರವು ಸಾಕ್ಷಾದ್ರುದ್ರಪದವಿಯನ್ನು ದೊರಕಿಸು ವುದು. ಅಲ್ಲದೇ ಇದರ ಜಪಮಹಿಮೆಯಿಂದ ಮಾನವನು ಮುಕ್ತನಾಗುವನು. ॥೨೭॥

ಪಾರ್ವತಿಯೇ, ಶ್ರೀಪಂಚಾಕ್ಷರಮಂತ್ರಜಪವನ್ನು ಬಿಟ್ಟು ಮಾಡಿದ ವೇದಾ ಧ್ಯಯನ, ಯಜ್ಞ, ವ್ರತ, ಅಗ್ನಿಯಲ್ಲಿ ಮಾಡಿದ ಸಮಸ್ತ ಹೋಮಗಳು, ಕನ್ಯಾದಾನ, ಪೃಥ್ವೀದಾನ ಮತ್ತುವಿದ್ಯಾದಾನಗಳನ್ನು ಮಾಡಿದ ಬ್ರಾಹ್ಮಣಸಮೂಹವು ಅಧನ್ಯ ವೆನಿಸುವುದು. ಈ ಜಪವನ್ನು ಬಿಟ್ಟವನಿಗೆ ಇತರ ವ್ರತಾದಿಗಳಿಂದ ಏನುತಾನೇ ಪ್ರಯೋಜನ? ಆದ್ದರಿಂದ ಬ್ರಾಹ್ಮಣಸಮೂಹವು ಪ್ರತಿಕ್ಷಣದಲ್ಲಿಯೂ ಪರಮ ಶ್ರೇಷ್ಠವಾದ ಈ ನನ್ನ ಪಂಚಾಕ್ಷರಮಂತ್ರವನ್ನು ಜಪಮಾಡಬೇಕು. ॥೨೮॥

ದೇವಿಯೇ ಕೇಳು, ಈ ಜಪಯೋಗ್ಯವಾದ ಪಂಚಾಕ್ಷರಿಯನ್ನು ಬಿಟ್ಟು ಇತರ ಮಂತ್ರರಾಶಿಗಳನ್ನು ಜಪಮಾಡುವ ಮೂಢನು, ಅತಿರಹಸ್ಯವಾದ ಗೂಢಾರ್ಥದಿಂದ ಶೋಭಿಸುತ್ತಾ ನಾಗಾಭರಣನಾದ ಮಹಾದೇವನ ಪೂಜ್ಯವಾದ ಶಿವಸ್ತೋತ್ರವನ್ನೂ ತ್ಯಜಿಸಿ, ವೇದವನ್ನು ಅಧ್ಯಯನಮಾಡುವ ವಿಪ್ರಕುಲವನ್ನು ಬಿಟ್ಟು ಅಂತ್ಯಕುಲದಲ್ಲಿ ಹುಟ್ಟುವ ಶ್ವಪಚಾಧಮನಿಗೆ ಸಮಾನನಾಗಿ ಕಡೆಗೆ ನೂರುವರ್ಷಗಳವರೆಗೆ ಅಮೇಧ್ಯ ಕೂಪದಲ್ಲಿ ಬೀಳುವನು. ॥೨೯॥

ಷಡಕ್ಷರಪರಾಯಣಾ ಧವಲಭಸ್ಮಸಂಭೂಷಣಾ
ಮಹಾಘಗಿರಿದಾರಣಾ ಭುವಿ ಭವಂತಿ ತ್ಯಕ್ತೇಷಣಾಃ ।
ವಿದೂಷಣಪರಾ ನರಾ ಯಮಕರೋರುಬಾಣಾಹೃತಾ-
ಸ್ತದೀಯವರವಾಹನೋತ್ಕರವಿಷಾಣಕೋಣಾಹತಾಃ ॥೩೦॥

ಪಂಚಾಕ್ಷರಾವೃತ್ತಿಪರಾಶ್ಚ ನರಾಸ್ತು ಯೇ ವೈ
ತೇ ಭೂಸುರಾ ಸುರಗಣಾಶ್ರಿತಾ ಏವ ಧೀರಾಃ ।
ಅನ್ಯೇ ಜಪೋಜ್ಝಿತಪರಾ ನರರಾಸಭಾಸ್ತೇ
ತೇಷಾಂ ನರಾ ಭುವಿ ಭವಂತ್ಯಥ ಪಾಮರಾಶ್ಚ ॥೩೧॥

ಪಂಚಾಕ್ಷರೈಕಮತಯೋ ಯತಯೋಽಪಿ ಧನ್ಯಾ
ಮಾನ್ಯಾನುತಪ್ತಹೃದಯಾಶ್ಚ ದಯಾವಿಶಿಷ್ಟಾಃ ।
ಅನ್ಯೇ ವಿನಿಂದನಪರಾ ಗದಯಾ ವಿಭಿನ್ನ-
ಮೂರ್ಧಾನ ಏವ ನಿವಸಂತಿ ಯಮಾಲಯೇಷು ॥೩೨॥

---

ಶುಭ್ರವಾದ ವಿಭೂತ್ಯಲಂಕೃತರಾಗಿ ಷಡಕ್ಷರಮಂತ್ರಪರಾಯಣರಾದ ಮಾನವರು ಭೂಮಿಯಲ್ಲಿ ಮಹಾಪಾತಕಗಳೆಂಬ ಬೆಟ್ಟಗಳನ್ನು ಒಡೆಯುವವರಾಗಿ, ವೈರಾಗ್ಯವನ್ನು ಪಡೆದು ಶೈವರಾಗಿ ಜನಿಸುವರು. ಈ ಮಂತ್ರವನ್ನು ದೂಷಣೆಮಾಡುವ ಮನುಜರು ಯಮನ ಕೈಯಲ್ಲಿರುವ ದೊಡ್ಡ ಬಾಣಗಳಿಂದ ಹೊಡೆಯಲ್ಪಡುವರಲ್ಲದೇ ಅವನ ಉತ್ತಮ ವಾಹನವಾದ ಕೋಣದ ಚೂಪಾದ ಕೊಂಬಿನಿಂದಲೂ ತಿವಿಯಲ್ಪಡುವರು. ॥೩೦॥

ಪಂಚಾಕ್ಷರ ಮಂತ್ರವನ್ನು ಆವೃತ್ತಿಮಾಡುವುದರಲ್ಲಿ ನಿರತರಾದ ಮಾನವರು ಯಾರೋ ಅವರೇ ಬ್ರಾಹ್ಮಣರು. ದೇವಗಣಗಳಿಂದ ಆಶ್ರಯಿಸಲ್ಪಟ್ಟ ಅವರೇ ಧೀರರು. ಜಪಮಾಡುವುದನ್ನು ಬಿಟ್ಟಿರುವ ಉಳಿದ ಮಾನವರು ಕೇವಲ ನರರಾಸಭಗಳು (ಮನುಷ್ಯನಾದರೂ ಜ್ಞಾನಲೇಶರಹಿತವಾದ ಕತ್ತೆಗಳೇ ಸರಿ) ಆ ಮನುಜರೇ ಭೂಮಿಯಲ್ಲಿ ಕೇವಲ ನಾಮಮಾತ್ರಕ್ಕೆ ಮಾನವರೆನಿಸಿರುವರು. ಅಥವಾ ಪಾಮರರೇ ಆಗಿರುವರು. ॥೩೧॥

ಮುಖ್ಯವಾಗಿ ಪಂಚಾಕ್ಷರ ಮಂತ್ರಜಪದಲ್ಲಿಯೇ ನಿರತವಾದ ಮನಸ್ಸುಳ್ಳ ಯತಿಗಳೇ ಧನ್ಯರು; ಮಾನ್ಯರೂ, ಅನುತಾಪವಿಶಿಷ್ಟಹೃದಯವುಳ್ಳವರೂ ದಯಾಳು

ಕ್ಷಾರತ್ರಿಪುಂಡ್ರಪರಿಮಂಡಿತಫಾಲವಕ್ಷಾ
ರುದ್ರಾಕ್ಷಕಂಕಣಲಸದ್ಗಲಮಾಲಿಕಾಕ್ಷಃ ।
ಪಂಚಾಕ್ಷರಂ ಚ ಕಲಯನ್ನಿಲಯಂ ಮಮೇತಿ
ಸ್ಯಾದಕ್ಷರಂ ಪದಮುಮೇ ನ ಹಿ ತತ್ಕ್ಷರೇತ ॥೩೩॥

ಪಂಚಾಕ್ಷರಂ ಪ್ರಜಪತೋಽಕ್ಷರಲಕ್ಷಸಂಖ್ಯಾ-
ಮಾದ್ಯಂತಯುಕ್ಪ್ರಣವತಃ ಪ್ರಣವೇನ ಭಕ್ತ್ಯಾ ॥
ಮುಕ್ತ್ಯೈ ಕಿಮೇವ ಭವತೀಶಕಟಾಕ್ಷಶಕ್ತ್ಯಾ
ಸೂಕ್ತ್ಯಾಮುನಾ ಮಮ ಲಭೇತ ಪದಂ ಹಿ ಭಕ್ತ್ಯಾ ॥೩೪॥

ಪಂಚಾಕ್ಷರಂ ಪಾವನಮುಚ್ಚರಂತಃ
ಪತಿಂ ಪಶೂನಾಂ ಹೃದಿ ಭಾವಯಂತಃ ।

---

ಗಳೂ ಅವರೇ ಸರಿ; ಹಾಗಿಲ್ಲದೆ ಈ ಮಂತ್ರ ನಿಂದಾಸಕ್ತರಾದವರು ಯಮಲೋಕ ಗಳಲ್ಲಿ ಗದೆಯಿಂದ ಒಡೆಯಲ್ಪಟ್ಟ ತಲೆಯುಳ್ಳವರಾಗುವರು. ॥೩೨॥

ಯಾವ ಸುಕೃತಿಯು ಭಸ್ಮತ್ರಿಪುಂಡ್ರವನ್ನು ಹಣೆ ಮತ್ತು ವಕ್ಷಸ್ಸ್ಥಳಗಳಲ್ಲಿ ಅಲಂಕರಿಸಿಕೊಂಡು ರುದ್ರಾಕ್ಷದ ಕಂಕಣದಿಂದಲೂ ಜೋಲುಬಿದ್ದಿರುವ ಕಂಠದ ಅಕ್ಷಮಾಲಿಕೆಯಿಂದಲೂ ಶೋಭಿಸುತ್ತಾ ಪಂಚಾಕ್ಷರ ಮಂತ್ರವನ್ನು ಜಪಮಾಡು ವನೋ ಅವನು ನಾಶರಹಿತವಾದ ನನ್ನ ಸ್ಥಾನವನ್ನು ಪಡೆಯುವನು. ಉಮೆ, ಆ ನನ್ನ ಸ್ಥಾನವು ಎಂದಿಗೂ ನಾಶವಾಗಲಾರದು. ॥೩೩॥

ದೇವಿ, ನಾಶರಹಿತವಾದ ಈ ಪಂಚಾಕ್ಷರಮಂತ್ರವನ್ನು ಆದ್ಯಂತಗಳಲ್ಲಿ (ಮೊದಲು ಮತ್ತು ಕೊನೆಗಳಲ್ಲಿ) ಪ್ರಣವಮಂತ್ರಪೂರ್ವಕವಾಗಿ ಭಕ್ತಿಯಿಂದ ಲಕ್ಷ ಬಾರಿ ಜಪಮಾಡುವವನಿಗೆ ಕೇವಲ ಮುಕ್ತಿಯೊಂದು ದೊರೆಯುವುದರಲ್ಲೇನಾಶ್ಚರ್ಯ! ಗೌರಿಯೆ, ಈಶ್ವರನ ಕಟಾಕ್ಷವೀಕ್ಷಣಶಕ್ತಿಯಿಂದ ಅವನಿಗೆ ಬೇಕಾದ ಫಲಗಳೆಲ್ಲಾ ದೊರೆಯುವುವಲ್ಲದೆ ಭಕ್ತನಾದ ಅವನಿಗೆ ನನ್ನ ಸನ್ನಿಧಿಯೂ ಅನಾಯಾಸವಾಗಿ ದೊರೆಯುವುದು. ॥೩೪॥

ಪಶುಪತಿಯೆನಿಸಿದ ಶಿವನನ್ನು ಸದಾ ಹೃದಯದಲ್ಲಿ ಧ್ಯಾನಿಸುತ್ತಾ ಪವಿತ್ರ ವಾದ ಶಿವಪಂಚಾಕ್ಷರಮಂತ್ರವನ್ನು ಉಚ್ಚಾರಮಾಡಿಕೊಂಡು ಶಾಂತಮನಸ್ಸಿನಿಂದ

ಶಾಂತಾಃ ಕೃತಾಂತಾಂತಕಮರ್ಚಯಂತಃ
ಕ್ಷೇತ್ರೇಷು ತಿಷ್ಠಂತಿ ಸದೈವ ಸಂತಃ ॥೩೫॥

ಪಂಚಾಕ್ಷರಾವೃತ್ತಿಕೃತಾಂ ಕ್ಷರೇತ
ಅಘೌಕ್ಷರಂ ಭುವಂತ್ಯಜ್ಯತದಕ್ಷರಂ ವ್ರಜೇತ್ ।
ನಯಕ್ಷರಕ್ಷಪ್ರಭವಂ ಭಯಂ ಭವೇತ್
ತ್ರ್ಯಕ್ಷಪ್ರಸಾದಾಲ್ಲಭತೇ ಫಲಾಕ್ಷಯಂ ॥೩೬॥

ಪ್ರಣವಾದ್ಯಂತಮುಮೇ ಯತಿರ್ಜಪೇತ್
ನಿಯತಿರ್ವೈ ಶ್ರುತಿಚೋದಿತಾನ್ವೃಷಾನ್ ।
ತವ ಬೀಜಮುಮೇ ವಿಧಾರಯ-
ನ್ನಪತಾಂ ಜಪ್ಯಮಿದಂ ಫಲಾಯತೇ ॥೩೭॥

ಪುಣ್ಯಾನಿ ವರ್ಧಯತಿ ಪಾಪತತಿಂ ಧುನೋತಿ
ಮುಖ್ಯಾವಿಮುಕ್ತಸದನೇ ವಸತಿಂ ಕರೋತಿ ।

---

ಯಮಾಂತಕನನ್ನು ಪೂಜೆಮಾಡುವ ನನ್ನ ಭಕ್ತರು ಯಾವಾಗಲೂ ನನ್ನ ಕ್ಷೇತ್ರಗಳಲ್ಲಿ ಸಾಧುಗಳಾಗಿ ನೆಲಸುವರು. ॥೩೫॥

ಪಂಚಾಕ್ಷರಮಂತ್ರ ಜಪಮಾಡುವವರಿಗೆ ಪಾಪನಾಶವಾಗುವುದಲ್ಲದೇ ಅವರು ಪಾಪಪ್ರದವಾದ ಈ ಭೂಮಿಯನ್ನು ಬಿಟ್ಟು ನಾಶರಹಿತವಾದ ಮೋಕ್ಷವನ್ನೈದುವರು. ಯಕ್ಷ, ರಾಕ್ಷಸ ಇವರ ಸಂಬಂಧವಾದ ಯಾವ ಭಯವೂ ಉಂಟಾಗುವುದಿಲ್ಲ. ಅಲ್ಲದೇ ಆತನು ಮಹೇಶನ ಅನುಗ್ರಹದಿಂದ ನಾಶರಹಿತವಾದ ಫಲಗಳನ್ನು ಪಡೆಯುವನು. ॥೩೬॥

ಉಮೆ, ಆದ್ಯಂತಗಳಲ್ಲಿ ಪ್ರಣವಮಂತ್ರಗಳುಳ್ಳ ಶಿವಪಂಚಾಕ್ಷರವನ್ನು ನಿಯಮದಿಂದ ಜಪಮಾಡುವವನು, ವೇದೋಕ್ತವಾದ ಫಲಗಳನ್ನೈದುವುದರಲ್ಲಿ ಸಂಶಯವಿಲ್ಲ. ಎಲೌ ಉಮೆ, ನಿನ್ನ ಶಕ್ತಿಯುಳ್ಳ, ನನ್ನ ಜಪಾರ್ಹವಾದ ಮಂತ್ರವನ್ನು ಧರಿಸುವವನು, ಅಪರಿಮಿತವಾದ ಫಲಪ್ರಾಪ್ತಿಯನ್ನು ಪಡೆಯುವನು. ॥೩೭॥

ಪವಿತ್ರವಾದ ಈ ಪಂಚಾಕ್ಷರಮಂತ್ರವು ಅನೇಕ ಪುಣ್ಯಕಾರ್ಯಗಳಿಂದ ಲಭಿಸುವ ಸುಕೃತವನ್ನು ಹೆಚ್ಚಿಸಿ, ಜನ್ಮಜನ್ಮಾಂತರಗತಗಳಾದ ಪಾಪರಾಶಿಯನ್ನು ಓಡಿಸುತ್ತದೆ. ಮುಕ್ತಿಪ್ರದವಾದ ಅವಿಮುಕ್ತಕ್ಷೇತ್ರದಲ್ಲಿ (ಕಾಶಿಯಲ್ಲಿ) ವಾಸಮಾಡುವಂತಹ

ಪಂಚಾಕ್ಷರಂ ಮಮಮನುಂ ಜಪತಿಸ್ಥಿರಾಂತ-
ಸ್ತಸ್ಯಾಂಬಿಕೇ ಪರಮಮುಕ್ತಿಪದಂ ದದಾತಿ ॥೩೮॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಪಂಚಾಕ್ಷರೀಸ್ವರೂಪ
ವರ್ಣನಂನಾಮ ಅಷ್ಟತ್ರಿಂಶೋಽಧ್ಯಾಯಃ

---

ಯೋಗ್ಯತೆಯನ್ನು ಒದಗಿಸುವುದು. ಅಂಬಿಕೆಯೇ, ಕೇಳು. ದೃಢಮನಸ್ಸಿನಿಂದ ನನ್ನ ಈ ಪಂಚಾಕ್ಷರಮಂತ್ರವನ್ನು ಜಪಮಾಡುವವನಿಗೆ ಪರಮಶ್ರೇಷ್ಠವಾದ ಮೋಕ್ಷಪದವಿಯು ಲಭಿಸುವುದರಲ್ಲಿ ಅನುಮಾನವಿಲ್ಲ, ಎಂದು ಶಿವನು ಪಾರ್ವತಿಗೆ ಹೇಳಿದ ವಿಚಾರವನ್ನೇ ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೩೮-

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ಪಂಚಾಕ್ಷರೀಮಂತ್ರಸ್ವರೂಪವರ್ಣನೆಯೆಂಬ ಮೂವತ್ತೆಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾಸಾಖ್ಯೇ

## ದಶಮಾಂಶಪೂರ್ವಾರ್ಥೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ತತ್ರಾದೌ ಸಂಪ್ರವಕ್ಷ್ಯಾಮಿ ಮಂತ್ರಸಂಗ್ರಹಣಂ ಶುಭಂ ।
ಯಂ ವಿನಾ ನಿಷ್ಫಲಂ ಜಪ್ಯಂ ಯೇನ ವಾ ಸಫಲಂ ಭವೇತ್ ॥೧॥

ಆಜ್ಞಾಹೀನಂ ಕ್ರಿಯಾಹೀನಂ ಶ್ರದ್ಧಾಹೀನಂ ವರಾನನೇ ।
ಆಜ್ಞಪ್ತಂ ದಕ್ಷಿಣಾಹೀನಂ ಸದಾ ಜಪ್ಯಂ ಚ ನಿಷ್ಫಲಂ ॥೨॥

ಆಜ್ಞಾಸಿದ್ಧಂ ಕ್ರಿಯಾಸಿದ್ಧಂ ಶ್ರದ್ಧಾಸಿದ್ಧಂ ಮಮಾತ್ಮಕಂ ।
ಏವಂ ಚ ದಕ್ಷಿಣಾಸಿದ್ಧಂ ಮಂತ್ರಸಿದ್ಧಂ ಮಹತ್ಫಲಂ ॥೩॥

---

## ಮೂವತ್ತೊಂಬತ್ತನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೆ, ಈ ಪಂಚಾಕ್ಷರಮಂತ್ರಜಪವು ಯಾವುದರಿಂದ ಸಫಲವೂ, ಯಾವುದಿಲ್ಲದೇ ನಿಷ್ಫಲವೂ ಆಗುವುದೋ, ಅಂತಹ ಶುಭಕರವಾದ ಮಂತ್ರಸಂಗ್ರಹಣವಿಧಾನವನ್ನು ಮೊದಲು ಪರಮೇಶ್ವರನು ಅಂಬಿಕೆಗೆ ಹೇಳಿದ್ದನ್ನೇ ಹೇಳುವೆನು ಕೇಳು ; ಸುಂದರಾಂಗಿಯೆ, ಸದ್ಗುರುವಿನ ಆಜ್ಞೆಯನ್ನು ಪಡೆಯದೆ ಜಪ ಮಾಡುವವನು ಶ್ರದ್ಧೆಯಿಲ್ಲದೆ ಉಕ್ತವಾದ ಕ್ರಿಯೆಗಳನ್ನು ನಡೆಸದೆ, ಆರಂಭಮಾಡಿದ ಕರ್ಮವು ವ್ಯರ್ಥವಾಗುವುದೆಂದು ತಿಳಿ. ಒಂದುವೇಳೆ ಆಜ್ಞೆಪಡೆದಿದ್ದರೂ ಗುರುದಕ್ಷಿಣೆ ಯಿಲ್ಲದ ಜಪವು ಯಾವಾಗಲೂ ನಿಷ್ಫಲವೇ ಎನಿಸುವುದು. ॥೧-೨॥

ಯೋಗ್ಯನಾದ ಗುರುವಿನ ಆಜ್ಞೆಯಿಂದ ಸಿದ್ಧವಾದದ್ದೂ, ಉಕ್ತಕ್ರಿಯೆಯಿಂದ ಯುಕ್ತವಾದದ್ದೂ, ಶ್ರದ್ಧೆಯಿಂದ ನೆರವೇರಿಸಿದುದೂ ಆದ ಮಂತ್ರವು ನನ್ನ ಸ್ವರೂಪ

ಉಪಗಮ್ಯ ಗುರುಂ ಶ್ರೇಷ್ಠಮಾರ್ಯಂ ತತ್ತ್ವಾರ್ಥವೇದಿನಂ ।
ಜಾಪಿನಂ ಸಗುಣೋಪೇತಂ ಧ್ಯಾನಯೋಗಪರಾಯಣಂ ॥೪॥

ತೋಷಯೇತ್ತಂ ಪ್ರಯತ್ನೇನ ಭಾವಶುದ್ಧಿಸಮನ್ವಿತಂ ।
ವಾಚಾ ಚ ಮನಸಾ ಚೈವ ಕಾಯೇನ ದ್ರವಿಣೇನ ಚ ॥೫॥

ಆಚಾರ್ಯಂ ಪೂಜಯೇಚ್ಛಿಷ್ಯಃ ಸರ್ವದಾತಿಪ್ರಯತ್ನತಃ ।
ಹಸ್ತ್ಯಶ್ವರಥರತ್ನಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥೬॥

ಭೂಷಣಾನಿ ಚ ವಾಸಾಂಸಿ ಧಾನ್ಯಾನಿ ಚ ಧನಾನಿ ಚ ।
ಏತಾನಿ ಗುರವೇ ದದ್ಯಾದ್ಭಕ್ತ್ಯಾ ಚ ವಿಭವೇ ಸತಿ ॥೭॥

ವಿತ್ತಶಾಠ್ಯಂ ನ ಕುರ್ವೀತ ಯ ಇಚ್ಛೇತ್ಸಿದ್ಧಿಮಾತ್ಮನಃ ।
ಪಶ್ಚಾನ್ನಿವೇದಯೇದೇವಮಾತ್ಮಾನಂ ಸಪರಿಚ್ಛದಂ ॥೮॥

---

ವನ್ನು ಪಡೆದು ಪವಿತ್ರವೆನಿಸುವುದು. ಆದರೆ ಅದೇ ಮಂತ್ರವು ದಕ್ಷಿಣೆಯಿಂದ ಲಬ್ಧವಾದುದೂ, ಮಂತ್ರದಿಂದ ಸಿದ್ಧಿಸಿದುದೂ ಆದರೆ ನನ್ನ ಸ್ವರೂಪವೇ ಆಗಿರುತ್ತಾ ಆ ಪಂಚಾಕ್ಷರಮಂತ್ರವು ವಿಶೇಷರೀತಿಯಲ್ಲಿ ಪ್ರಯೋಜನಕಾರಿಯಾಗುವುದು. ಈ ಪಂಚಾಕ್ಷರಮಂತ್ರವನ್ನೂ ಅದರ ಅರ್ಥವನ್ನೂ ಚೆನ್ನಾಗಿ ತಿಳಿದು ಜಿತೇಂದ್ರಿಯನಾಗಿ ಧ್ಯಾನಯೋಗನಿರತನೂ ಜಪಾಸಕ್ತನೂ ಆಗಿರುವ ಶ್ರೇಷ್ಠವಾದ ಗುರುವಿನ ಸಮೀಪಕ್ಕೆ ಹೋಗಿ ವಿಶೇಷ ನಿಯಮದಿಂದ ಶುದ್ಧಭಾವನೆಯೊಡಗೂಡಿದ ಅವನನ್ನು ಸಂತೋಷಪಡಿಸಬೇಕು. ಅಂದರೆ ಅವನ ಮನಮೆಚ್ಚುವಂತೆ ನಡೆದುಕೊಳ್ಳಬೇಕು. ॥೩-೪॥

ವಾಙ್ಮನಃಕಾಯರೂಪವಾದ ತ್ರಿಕರಣಗಳಿಂದಲೂ ಶುದ್ಧನಾಗಿ ಉತ್ತಮವಾದ ಮತ್ತು ಬೆಲೆಬಾಳುವ ವಸ್ತುಗಳಿಂದ ಯಾವಾಗಲೂ ಆಚಾರ್ಯನನ್ನು ನಿಯಮದಿಂದ ಶಿಷ್ಯನು ಪೂಜಿಸಬೇಕು. ಮತ್ತು ಶಿಷ್ಯನು ತನ್ನ ಶಕ್ತ್ಯನುಸಾರವಾಗಿ ಆನೆ, ಕುದುರೆ, ತೇರು, ರತ್ನ, ಹೊಲ, ಗದ್ದೆ, ಮನೆಗಳು, ಆಭರಣ, ಬಟ್ಟೆ, ಧಾನ್ಯ ಮತ್ತು ಧನರಾಶಿ ಇವುಗಳನ್ನು ಭಕ್ತಿಯಿಂದ ಗುರುವಿಗೆ ದಾನವಾಗಿ ಮಾಡಬೇಕು. ಐಶ್ವರ್ಯವಿದ್ದಲ್ಲಿ ಸಿದ್ಧಿಯನ್ನಪೇಕ್ಷಿಸುವವನು ದ್ರವ್ಯದಲ್ಲಿ (ಲೋಭವನ್ನು) ಹಿಡಿತವನ್ನು ಎಂದಿಗೂ ಮಾಡಬಾರದು. ಇಷ್ಟಾದ ಮೇಲೆ ಪರಿವಾರಸಮೇತನಾದ ತನ್ನನ್ನು ಶ್ರೀಗುರುವಿಗೆ ಸಮರ್ಪಣೆಮಾಡಬೇಕು. ಅಂದರೆ ಆತ್ಮಾರ್ಪಣೆಮಾಡಬೇಕು. ॥೫-೬-೭-೮॥

ಏವಂ ಸಂಪೂಜ್ಯ ವಿಧಿವದ್ಯಥಾಶಕ್ತ್ಯಾತ್ವವಂಚಯನ್ ।
ಆದದೀತ ಗುರೋರ್ಮಂತ್ರಂ ಜ್ಞಾನಂ ಚೈವ ಕ್ರಮೇಣ ತು ॥೯॥

ಏವಂ ತುಷ್ಟೋ ಗುರುಃ ಶಿಷ್ಯಂ ಪೂಜಕಂ ವತ್ಸರೋಷಿತಂ ।
ಶುಶ್ರೂಷಮನಹಂಕಾರಂ ಶ್ರಾಂತಂ ಶುಚಿಮುಪೋಷಿತಂ ॥೧೦॥

ಸ್ನಾಪಯಿತ್ವಾ ವಿಶುದ್ಧ್ಯರ್ಥಂ ಪೂರ್ಣಕುಂಭಘೃತೇನ ವೈ ।
ಜಲೇನ ಮಂತ್ರಸಿದ್ಧೇನ ಪುಣ್ಯದ್ರವಯುತೇನ ಚ ॥೧೧॥

ಅಲಂಕೃತ್ಯ ಸುವೇಷಂ ಚ ಗಂಧಸ್ವರ್ಣವಿಭೂಷಣೈಃ ।
ಪುಣ್ಯಾಹಂ ವಾಚಯಿತ್ವಾ ಚ ಬ್ರಾಹ್ಮಣಾನಭಿಪೂಜ್ಯ ಚ ॥೧೨॥

ಸಮುದ್ರತೀರೇ ನದ್ಯಾಂ ವಾ ಗೋಷ್ಠೇ ದೇವಾಲಯೇಽಪಿ ಚ ।
ಶುಚೌ ದೇಶೇ ಗೃಹೇ ವಾಪಿ ಕಾಲೇ ಸಿದ್ಧಿಕರೇ ತಿಥೌ ॥೧೩॥

---

ಹೀಗೆ ವಂಚನೆಯಿಲ್ಲದೆ ಶಕ್ತಿಗನುಗುಣವಾಗಿ ವಿಧಿಪ್ರಕಾರ ಗುರುವನ್ನು ಪೂಜಿಸಿ, ಅವರಿಂದ ಮಂತ್ರವನ್ನೂ ಕ್ರಮವಾಗಿ ಅದರ ಅರ್ಥವನ್ನೂ ಪೂರ್ಣವಾಗಿ ಉಪದೇಶಹೊಂದಬೇಕು. ಆದರೆ ಶಿಷ್ಯನಿಂದ ಸಂತುಷ್ಟನಾದ ಗುರುವಾದರೋ ತನ್ನಲ್ಲಿ ಒಂದು ವರ್ಷಕಾಲ ವಿಧೇಯತೆಯಿಂದಿದ್ದು ಅಹಂಕಾರವಿಲ್ಲದೆ ಶ್ರಮವಹಿಸಿ ಸರ್ವದಾ ಶುಶ್ರೂಷೆಮಾಡುತ್ತಿರುವ, ಶುಚೀಭೂತನಾಗಿ ಉಪವಾಸವ್ರತದಿಂದಿರುವ ಶಿಷ್ಯನನ್ನು ಮೊದಲು ಪೂರ್ಣ ಕುಂಭದಲ್ಲಿರುವ ತುಪ್ಪದಿಂದ ಲೇಪನಮಾಡಿ ದೇಹ ಶುದ್ಧಿಗಾಗಿ ಅಭಿಷೇಕಮಾಡಬೇಕು. (ಯಜ್ಞಾದಿ ಶ್ರುತ್ಯುಕ್ತ ಕರ್ಮಗಳನ್ನು ಆರಂಭಿಸುವಾಗ ಯಜಮಾನನು ನವನೀತ (ಬೆಣ್ಣೆ) ಸ್ನಾನ ಮಾಡಬೇಕೆಂಬ ನಿಯಮವಿದೆ.) ||೯-೧೦||

ಪುಣ್ಯಪ್ರದಗಳಾದ ದೇವತಾತೀರ್ಥಾದಿಗಳಿಂದ ಬೆರೆದ ಮಂತ್ರಪೂತವಾದ ನೀರಿನಿಂದ ಸ್ನಾನಮಾಡಿಸಿ ಶುಭ್ರವಾದ ಮಡಿಬಟ್ಟೆಗಳನ್ನು ತೊಡಿಸಿ, ಗಂಧಾದಿ ಲೇಪನಗಳಿಂದಲೂ ಸುವರ್ಣಾದಿ ಆಭರಣಗಳಿಂದಲೂ ಅವನನ್ನು ಅಲಂಕರಿಸಿ ಮಂತ್ರವತ್ತಾಗಿ ಪುಣ್ಯಾಹ ಕರ್ಮವನ್ನು ಆರಂಭಿಸಿ, ಬ್ರಾಹ್ಮಣರನ್ನು ವಿಧಿವತ್ತಾಗಿ ಪೂಜಿಸಿ, ಸಮುದ್ರದ ದಡ, ನದೀತೀರ, ದನದ ಕೊಟ್ಟಿಗೆ, ದೇವಾಲಯ, ಮನೆ ಅಥವಾ ಶುಚಿಯಾಗಿರುವ ಇತರ ಸ್ಥಳಗಳು, ಇವುಗಳಲ್ಲಿ ಸಿದ್ಧಿಪ್ರದವಾದ ತಿಥಿ, ನಕ್ಷತ್ರ,

ನಕ್ಷತ್ರೇ ಶುಭಯೋಗೇ ಚ ಸರ್ವದೋಷವಿವರ್ಜಿತೇ ।
ಅನುಗೃಹ್ಯ ತತೋ ದದ್ಯಾದ್ಜ್ಞಾನಂ ಮಮ ಯಥಾವಿಧಿ ॥೧೪॥

ಸ್ವರೇಣೋಚ್ಚಾರಯೇತ್ಸಮ್ಯಗೇಕಾಂತೇ ತು ಪ್ರಸನ್ನಧೀಃ ।
ಉಚ್ಚಾರಯೋಚ್ಚಾರಯಿತ್ವಾ ಚಾಪಯೇನ್ಮಂತ್ರಮುತ್ತಮಂ॥೧೫॥

ಶುಭಂ ಚಾಸ್ತು ಶಿವಂ ಚಾಸ್ತು ಶೋಭನಂ ಚ ಪ್ರಿಯಂತ್ವಿತಿ ।
ಏವಂ ದದ್ಯಾದ್ಗುರುರ್ಮಂತ್ರಮಾಜ್ಞಾಂ ಚೈವ ಸಮಾಹಿತಃ ॥೧೬॥

ಸಂಕಲ್ಪ್ಯ ಚ ಜಪೇನ್ನಿತ್ಯಂ ಪುರಶ್ಚರಣಪೂರ್ವಕಂ ।
ಯಾವಜ್ಜೀವಂ ಜಪೇನ್ನಿತ್ಯಂ ಅಷ್ಟೋತ್ತರಸಹಸ್ರಕಂ ॥೧೭॥

ಅನಶ್ನನ್ತತ್ಪರೋ ಭೂತ್ವಾ ಸ ಯಾತಿ ಪರಮಾಂ ಗತಿಂ ।
ಜಪೇದಕ್ಷರಲಕ್ಷಂ ವೈ ಚತುರ್ಗುಣಿತಮಾದರಾತ್ ॥೧೮॥

---

ಶುಭಯೋಗಗಳಿಂದ ಯುಕ್ತವಾಗಿ ಯಾವ ದೋಷಗಳೂ ಇಲ್ಲದ ಸಮಯದಲ್ಲಿ ಆಸಕ್ತಿಯಿಂದಿರುವ ಶಿಷ್ಯನನ್ನು ಕರೆಸಿ ನನ್ನ ಈ ಶಿವಪಂಚಾಕ್ಷರಮಂತ್ರವನ್ನು ವಿಧಿ ಪ್ರಕಾರವಾಗಿ ಉಪದೇಶರೂಪದಲ್ಲಿ ಕೊಡಬೇಕು. ॥೧೨-೧೩-೧೪॥

ಮಂತ್ರಸ್ವೀಕಾರಸಮಯದಲ್ಲಿ ಗುರುವು ರಹಸ್ಯವಾಗಿ ಶುದ್ಧಮನಸ್ಸಿನಿಂದ ನಮ್ಮಿಬ್ಬರಿಗೂ ಪ್ರಿಯವಾಗಿರುವ ಈ ಉತ್ತಮಮಂತ್ರವನ್ನು ಸ್ಪಷ್ಟವಾಗಿ ಸ್ವರಗಳನ್ನು ಉಚ್ಚರಿಸುತ್ತಾ ಅದನ್ನು ಶಿಷ್ಯನಿಂದ ಹೇಳಿಸುತ್ತಾ ಶುಭವೂ, ಮಂಗಳವೂ, ಶೋಭನವೂ ಮತ್ತು ಪ್ರಿಯವೂ ಶಿಷ್ಯನಿಗೆ ಉಂಟಾಗಲೆಂದು ಹರಸಿ, ಮಂತ್ರವನ್ನು ಪದೇಶಿಸಿ ಅವನಿಗೆ ಆ ಮಂತ್ರಪುರಶ್ಚರಣೆಯ ಶಕ್ತಿ ಬರುವವರೆಗೂ ಹೇಳಿಸಿ, ಅನಂತರ ಜಪಮಾಡುವ ಆಜ್ಞೆಯನ್ನೂ ಕೊಡಬೇಕು. ॥೧೫-೧೬॥

ಗುರೂಪದೇಶದಿಂದ ಲಬ್ಧವಿದ್ಯನಾದ ಶಿಷ್ಯನು ಪ್ರತಿದಿನವೂ ಪ್ರಾಣಾಯಾಮ ಪೂರ್ವಕವಾಗಿ ಸಂಕಲ್ಪಮಾಡಿ ಪುರಶ್ಚರಣಪೂರ್ವಕವಾಗಿ ಜಪಮಾಡಬೇಕು. ತಾನು ಬದುಕಿರುವವರೆಗೂ ನಿತ್ಯವೂ ಒಂದುಸಾವಿರದೆಂಟುಸಂಖ್ಯೆಯಲ್ಲಿ ಜಪಮಾಡಬೇಕು. ಹೀಗೆ ಜಪ ಮುಗಿಯುವವರೆಗೂ ಊಟಮಾಡದೇ ನಿಯಮದಿಂದಿರುವವನು ಉತ್ತಮಗತಿಯನ್ನು ಪಡೆಯುತ್ತಾನೆ. ಅಥವಾ ಶಕ್ತಿಯಿದ್ದಲ್ಲಿ ಒಂದಕ್ಷರಕ್ಕೆ ನಾಲ್ಕು ಲಕ್ಷದಂತೆ ನಾಲ್ಕುಲಕ್ಷ ಅಕ್ಷರಜಪಗಳನ್ನಾದರೂ ಮಾಡಬಹುದು. ಹೀಗೆ ಸದಾ

ಯುಕ್ತಾಶೀರ್ಯುಃ ಸಮೀಯುಃ ಸಃ ಪೌರಶ್ಚರಣಿಕಃ ಸ್ಮೃತಃ ।
ಯಃ ಪುರಶ್ಚರಣಂ ಕೃತ್ವಾ ನಿತ್ಯಜಾಪೀ ಭವೇತ್ಪುನಃ ॥೧೯॥

ತಸ್ಯ ನಾಸ್ತಿ ಸಮೋ ಲೋಕೇ ಸಂಸಿದ್ಧಿಃ ಸಿದ್ಧಿದೋ ಭವೇತ್ ।
ಸ್ನಾನಂ ಕೃತ್ವಾ ಶುಚೌ ದೇಶೇ ಬದ್ಧ್ವಾ ರುಚಿರಮಾಸನಂ ॥೨೦॥

ತ್ವಾಂ ಚ ಮಾಂ ಹೃದಿ ಸಂಚಿಂತ್ಯ ಸಗುಣಂ ಸ್ವಗುರುಂ ತಥಾ ।
ಪ್ರಾಙ್ಮುಖೋದಙ್ಮುಖೋವಾಪಿ ಮೌನೀ ಚೈಕಾಗ್ರಮಾನಸಃ ॥೨೧॥

ವಿಶೋಧ್ಯ ಪಂಚತತ್ವಾನಿ ದಹನಾಪ್ಲಾವನಾದಿಭಿಃ ।
ಮಂತ್ರನ್ಯಾಸಾದಿಕಂ ಕೃತ್ವಾ ಸಂಕಲೀಕೃತವಿಗ್ರಹಃ ॥೨೨॥

ಆವಯೋರ್ವಿಗ್ರಹಂ ಧ್ಯಾಯನ್ಪ್ರಾಣಾಪಾನೌ ನಿಯಮ್ಯ ಚ ।
ವಿದ್ಯಾಸ್ಥಾನಂ ಸ್ವರೂಪಂ ಚ ಋಷಿಶ್ಛಂದೋಧಿದೈವತಂ ॥೨೩॥

---

ಜಪನಿರತನಾಗಿ ಮಿತಾಹಾರಿಯಾಗಿ ನಿಯಮಬದ್ಧನಾಗಿರುವವನು ಪೌರಶ್ಚರಣಿಕನೆನಿಸುವನು. ಅಂದರೆ ಜಪಕ್ಕೆ ಸರಿಯಾದ ಅಧಿಕಾರಿಯೆನಿಸುವನು. ॥೧೭-೧೮॥

ಹೀಗೆ ಈ ಮಂತ್ರವನ್ನು ಪುರಶ್ಚರಣೆಮಾಡಿ ನಿತ್ಯವೂ ಅದನ್ನು ಜಪಮಾಡುವವನಿಗೆ ಸಮಾನರು ಈ ಪ್ರಪಂಚದಲ್ಲಿ ಯಾರೂ ದೊರೆಯುವುದೇ ಇಲ್ಲ. ಅವನಿಗೆ ತಪಸ್ಸಿದ್ಧಿಯನ್ನುಂಟುಮಾಡುವ ಅಭೂತಪೂರ್ವವಾದ ಸಾಮರ್ಥ್ಯವೊಂದು ಸಂಭವಿಸುವುದು. ಸ್ನಾನಮಾಡಿ, ಶುಚಿಕರವಾದ ದೇಶದಲ್ಲಿ ಮನೋಹರವಾದ ಆಸನದಲ್ಲಿ ಕುಳಿತು, ನನ್ನನ್ನೂ, ನಿನ್ನನ್ನೂ ಜೊತೆಗೆ ಗುಣವಿಶಿಷ್ಟನಾದ ತನ್ನ ಗುರುವನ್ನೂ ಮನಸ್ಸಿನಲ್ಲಿ ಯೋಚಿಸಿ, ಮೌನದಿಂದ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಜಪಮಾಡಲು ಏಕಾಗ್ರಚಿತ್ತವುಳ್ಳವನಾಗಿ ಆರಂಭಿಸಬೇಕು. ಹೀಗೆ ಪಂಚಾಕ್ಷರಜಪಕ್ಕೆ ಪೂರ್ವದಲ್ಲಿ ಇರುವ ನಿಯಮಗಳನ್ನು ತಪ್ಪದೆ ಪಾಲಿಸಬೇಕು. ॥೧೯-೨೦-೨೧॥

ಪೃಥಿವೀ, ಜಲ, ತೇಜಸ್ಸು, ವಾಯು ಮತ್ತು ಆಕಾಶಗಳೆಂಬ ಪಂಚತತ್ವಗಳನ್ನೂ ದಹನ, ಆಪ್ಲಾವನ, ಮುಂತಾದುವುಗಳಿಂದ ಶುದ್ಧಿಮಾಡಿ, (ಅಂದರೆ ಭಸ್ಮಧಾರಣೆ- ಮಂತ್ರಪೂರ್ವಕವಾದ ಮಾರ್ಜನೆ ಇವುಗಳಿಂದ ದೇಹಶುದ್ಧಿಪಡೆದು)ಮಂತ್ರ

ಬೀಜಂ ಶಕ್ತಿ ತಥಾವಾಚ್ಯಂ ಸ್ಮೃತ್ವಾ ಪಂಚಾಕ್ಷರೀಂ ಜಪೇತ್ ।
ಉತ್ತಮಂ ಮಾನಸಂ ಜಪ್ಯಮುಪಾಂಶುಂ ಮಧ್ಯಮಂ ವಿದುಃ ॥೨೪॥

ಅಧಮಂ ವಾಚಿಕಂ ಪ್ರಾಹುರಾಗಮಾರ್ಥವಿಶಾರದಾಃ ।
ಉತ್ತಮಂ ಶಿವದೈವತ್ಯಂ ಮಧ್ಯಮಂ ವಿಷ್ಣುದೈವತಂ ॥೨೫॥

ಅಧಮಂ ಬ್ರಹ್ಮದೈವತ್ಯಮಿತ್ಯಾಹುರನುಪೂರ್ವಶಃ ।
ಯದುಚ್ಚನೀಚಸ್ವರಿತೈಃ ಶಬ್ದೈಃ ಸ್ಪಷ್ಟಪದಾಕ್ಷರೈಃ ॥೨೬॥

ಮಂತ್ರಮುಚ್ಚಾರಯೇದ್ವಾಚಾ ವಾಚಿಕೋಽಯಂ ಜಪಃ ಸ್ಮೃತಃ ।
ಜಿಹ್ವಾಮಾತ್ರಪರಿಸ್ಪಂದಾದೀಷದುಚ್ಚಾರಿತೋಽಪಿ ವಾ ॥೨೭॥

---

ನ್ಯಾಸವೇ ಮುಂತಾದವುಗಳನ್ನೆಸಗಿ, ಏಕತ್ರಮಿಳಿತವಾದ ಮಾನಸಿಕ ದೇಹವುಳ್ಳವನಾಗಿ ಪ್ರಾಣಾಪಾನವಾಯುಗಳನ್ನು ತಡೆದು ನಮ್ಮಿಬ್ಬರ (ಪಾರ್ವತೀ ಪರಶಿವರ) ಆಕೃತಿಯನ್ನು ಧ್ಯಾನಮಾಡುತ್ತಾ, ವಿದ್ಯಾಸ್ಥಾನ, ಸ್ವರೂಪ, ಋಷಿ, ಛಂದಸ್ಸು, ಅಧಿದೇವತೆ, ಬೀಜ, ಶಕ್ತಿಗಳೊಡನೆ ಅಂಗನ್ಯಾಸ, ಕರನ್ಯಾಸ, ದಿಗ್ಬಂಧನಾದಿಗಳನ್ನು ಮಾಡಿ ಅನಂತರ ಶಿವಪಂಚಾಕ್ಷರಮಂತ್ರವನ್ನು ಜಪಮಾಡಬೇಕು. ॥೨೨-೨೩॥

ಮಾನಸಿಕವಾದ ಜಪವು ಉತ್ತಮವಾದುದೆಂದೂ ಹೇಳುವರು. ಉಪಾಂಶು ಜಪಕ್ಕಿಂತ (ಮತ್ತೊಬ್ಬರಿಗೆ ಕೇಳದಂತೆ ಮಾಡುವ ಜಪವು). ವಾಚಕರೂಪವಾದ ಅಂದರೆ ಎಲ್ಲರಿಗೂ ಕೇಳುವಂತೆ ಮಾಡುವ ಜಪವು ಅಧಮವೆಂಬುದಾಗಿ ಆಗಮ ಸ್ವರೂಪವನ್ನರಿತ ಪಂಡಿತರು ಹೇಳುತ್ತಾರೆ. ಶಿವದೇವತಾಕವಾದ ಮಂತ್ರವು ಉತ್ತಮವಾದುದು. ವಿಷ್ಣುದೇವತಾಕವಾದ ಮಂತ್ರವು ಮಧ್ಯಮವು. ಬ್ರಹ್ಮದೇವತಾಕವಾದ ಮಂತ್ರವು ಅಧಮವೆಂಬುದಾಗಿ ಕ್ರಮವಾಗಿ ಹೇಳುವರು. ॥೨೪-೨೫॥

ಉದಾತ್ತ, ಅನುದಾತ್ತ ಮತ್ತು ಸ್ವರಿತರೂಪವಾದ ಸ್ವರವಿಶಿಷ್ಟವಾದ ಶಬ್ದದೊಡನೆ ಗಟ್ಟಿಯಾಗಿ ಸ್ಪಷ್ಟವಾದ ಅಕ್ಷರಗಳನ್ನು ಬಾಯಿಂದ ಉಚ್ಚಾರಮಾಡುವುದಕ್ಕೆ ವಾಚಿಕಜಪವೆನ್ನುವರು. ನಾಲಿಗೆಯನ್ನು ಮಾತ್ರ ಕೊಂಚ ಹೊರಳಿಸುತ್ತಾ ಮೆಲ್ಲಗೆ ಮತ್ತೊಬ್ಬರಿಗೆ ಕೇಳದಂತೆಯೂ ಅಥವಾ ಸ್ವಲ್ಪ ಕೇಳುವಂತೆಯೂ ಉಚ್ಚರಿಸಲ್ಪಡುವ ಜಪವು ಉಪಾಂಶುಜಪವೆನಿಸುವುದು. ॥೨೬-೨೭॥

ಅಪರೈರಶ್ರುತಃ ಕಿಂಚಿಚ್ಛ್ರುತೋಽಪಾಂಶುಃ ಸ ಉಚ್ಯತೇ ।
ಧಿಯಾ ಯದಕ್ಷರಶ್ರೇಣ್ಯಾ ವರ್ಣಾದ್ವರ್ಣಂ ಪದಾತ್ಪದಂ ॥೨೮॥

ಶಬ್ದಾರ್ಥಚಿಂತನಂ ಭೂಯಃ ಕಥ್ಯತೇ ಮಾನಸೋ ಜಪಃ ।
ವಾಚಿಕಸ್ತ್ವೇಕ ಏವ ಸ್ಯಾದುಪಾಂಶುಃ ಶತಮುಚ್ಯತೇ ॥೨೯॥

ಸಹಸ್ರಂ ಮಾನಸಃ ಪ್ರೋಕ್ತಃ ಸಗರ್ಭಸ್ತಚ್ಛತಾಧಿಕಃ ।
ಪ್ರಾಣಾಯಾಮಸಮಾಯುಕ್ತಃ ಸ ಗರ್ಭೋಽ ಜಪ ಉಚ್ಯತೇ ॥೩೦॥

ಆದ್ಯಂತಯೋರಗರ್ಭೇಯಃ ಪ್ರಾಣಾಯಾಮಃ ಪ್ರಶಸ್ಯತೇ ।
ಚತ್ವಾರಿಂಶಃ ಸಮಾವೃತ್ತಿಂ ಪ್ರಾಣಾನಾಯಮ್ಯ ಸಂಸ್ಮರೇತ್ ॥೩೧॥

ಮಂತ್ರಂ ಮಂತ್ರಾರ್ಥವಿದ್ಧ್ಯಾನೀ ಯಥಾಶಕ್ತಿ ತತೋ ಜಪೇತ್ ।
ಅಂಗುಲ್ಯಾ ಜಪಸಂಖ್ಯಾನಾಮೇಕಮೇಕಮುದಾಹೃತಂ ॥೩೨॥

ಪಂಚಕಂ ತ್ರಿಕಮೇಕಂ ವಾ ಪ್ರಾಣಾಯಾಮಂ ಸಮಾಚರೇತ್ ।
ಅಗರ್ಭಂ ವಾ ಸಗರ್ಭಂ ವಾ ಸಗರ್ಭಸ್ತತ್ರ ಶಸ್ಯತೇ ॥೩೩॥

---

ಬುದ್ಧಿಪೂರ್ವಕವಾಗಿ ಪ್ರತಿ ಅಕ್ಷರಗಳಲ್ಲಿಯೂ ವಿಶೇಷ ದೃಷ್ಟಿಯಿಟ್ಟು ಅಕ್ಷರದಿಂದ ಅಕ್ಷರಕ್ಕೂ, ಪದದಿಂದ ಪದಕ್ಕೂ, ಶಬ್ದಗಳ ಅರ್ಥದೊಡನೆ ಅದನ್ನು ಚಿಂತನೆಮಾಡುವುದು ಮಾನಸಿಕಜಪವೆನಿಸುವುದು. ವಾಚಿಕಜಪವು ಒಂದು ಗುಣವುಳ್ಳದ್ದಾದರೆ, ಉಪಾಂಶುವು ನೂರುಗುಣವಿಶಿಷ್ಟವಾದುದು. ಮಾನಸಿಕ ಜಪವು ಸಾವಿರಗುಣಗಳುಳ್ಳದ್ದು. ಸಗರ್ಭಜಪವು ಅದಕ್ಕಿಂತಲೂ ನೂರುಪಾಲು ಹೆಚ್ಚಿನ ಫಲಕಾರಿಯೆಂದು ಹೇಳಲ್ಪಟ್ಟಿದೆ. ಪ್ರಾಣಾಯಾಮಸಮೇತವಾದ ಜಪವನ್ನು ಸಗರ್ಭ ಜಪವೆಂದು ಕರೆಯುವರು. ಹೀಗೆ ವಾಚಿಕ, ಉಪಾಂಶು, ಮಾನಸ, ಸಗರ್ಭ ಜಪಗಳು ಉತ್ತರೋತ್ತರವಾಗಿ ವಿಶೇಷ ಫಲವುಳ್ಳದ್ದಾಗಿವೆ. ॥೨೮-೨೯-೩೦॥

ವಾಚಿಕ ಮತ್ತು ಉಪಾಂಶು ಜಪಮಾಡುವವನು ಮೊದಲು ಮತ್ತು ಕೊನೆಗಳಲ್ಲಿ ಪ್ರಾಣಾಯಾಮ ಮಾಡುವುದು ಪ್ರಶಸ್ತವೆನಿಸುವುದು. ನಲವತ್ತು ಸಲ ಜಪಮಾಡಿದನಂತರ ಒಂದು ಸಲ ಪ್ರಾಣಾಯಾಮವನ್ನು ಸ್ಮರಣೆಮಾಡಬೇಕು. ಮಂತ್ರವನ್ನೂ ಅದರರ್ಥವನ್ನೂ ಸರಿಯಾಗಿ ತಿಳಿದು ಧ್ಯಾನಿಸುತ್ತಾ ಶಕ್ತಿಗನುಗುಣ. ವಾಗಿ ಜಪಮಾಡಬೇಕು. ಪ್ರತಿ ಬೆರಳಿನ ಅಂಗುಲರೇಖೆಗಳೇ ಜಪಸಂಖ್ಯೆಯನ್ನು

ಸಗರ್ಭಾದಪಿ ಸಾಹಸ್ರಃ ಸಧ್ಯಾನೋ ಜಪ ಉಚ್ಯತೇ ।
ಏವಂ ಪಂಚವಿಧೇಷ್ವೇಕಃ ಕರ್ತವ್ಯಃ ಶಕ್ತಿತೋ ಜಪಃ ॥೩೪॥

ರೇಖಯಾಷ್ಟಗುಣಂ ವಿಂದ್ಯಾತ್ಪುತ್ರಜೀವೇ ದಶಾಧಿಕಂ ।
ಶತಂ ಸ್ಯಾಚ್ಛಂಖಮಣಿಭಿಃ ಪ್ರವಾಲೈಸ್ತು ಸಹಸ್ರಕಂ ॥೩೫॥

ಸ್ಫಾಟಿಕೈರ್ದಶಸಾಹಸ್ರಂ ಮೌಕ್ತಿಕೈರ್ಲಕ್ಷಮುಚ್ಯತೇ ।
ಪದ್ಮಾಕ್ಷೈರ್ದಶಲಕ್ಷಂ ತು ಸೌವರ್ಣೈಃ ಕೋಟಿರುಚ್ಯತೇ ॥೩೬॥

ಕುಶಗ್ರಂಥ್ಯಾ ಚ ರುದ್ರಾಕ್ಷೈರನಂತಗುಣಿತಂ ಮುನೇ ।
ತ್ರಿಂಶದಕ್ಷೈಃ ಕೃತಾ ಮಾಲಾ ಧನದಾ ಜಪಕರ್ಮಣಿ ॥೩೭॥

---

ಎಣಿಸಲು ಯೋಗ್ಯವೆಂದು ಹೇಳಲ್ಪಟ್ಟಿದೆ. ಒಂದುಸಾರಿ ಪ್ರಾಣಾಯಾಮದಲ್ಲಿ ಐದು, ಮೂರು ಅಥವಾ ಒಂದು ಈ ಸಂಖ್ಯೆಯಲ್ಲಿ ಪ್ರಾಣಾಯಾಮ ಮಾಡಬೇಕು. ಆದರೆ ಅಗರ್ಭ ಮತ್ತು ಸಗರ್ಭ ಜಪಗಳಲ್ಲಿ ಸಗರ್ಭ ಜಪವೇ ಉತ್ತಮವೆನಿಸುವುದು. ॥೩೧-೩೨-೩೩॥

ಈ ಸಗರ್ಭಜಪಕ್ಕಿಂತಲೂ ಸಧ್ಯಾನ ಜಪವು ಸಾವಿರಪಾಲು ಗುಣವುಳ್ಳದ್ದು. ಹೀಗೆ ವಾಚಿಕ, ಉಪಾಂಶು, ಮಾನಸಿಕ, ಸಗರ್ಭ ಮತ್ತು ಸಧ್ಯಾನ ರೂಪಗಳಾದ ಐದು ಬಗೆಯ ಜಪಗಳಲ್ಲಿ ಯಾವುದಾದರೂ ಒಂದು ಬಗೆಯ ಜಪವನ್ನು ಶಕ್ತ್ಯನುಸಾರವಾಗಿ ಸಾಧಕನು ಅನುಷ್ಠಾನ ಮಾಡಬೇಕು. ಅಂಗುಲಿರೇಖೆಗಳ ಗಣನೆಯಿಂದ ಜಪಮಾಡುವುದು ಎಂಟರಷ್ಟು ಗುಣವುಳ್ಳದ್ದು. ಪ್ರತ್ಯೇಕವಸ್ತುಗಳ ಸಹಾಯದಿಂದ ಸಂಖ್ಯೆಯನ್ನು ತಿಳಿದು ಜಪಮಾಡುವುದು ಅದಕ್ಕಿಂತ ಹತ್ತುಪಾಲು ಗುಣವುಳ್ಳದ್ದು. ಶಂಖಮಣಿಗಳ ಎಣಿಕೆಯಿಂದ ಮಾಡುವ ಜಪವು ನೂರುಪಾಲು ಗುಣಪ್ರದವು; ಹವಳಗಳಿಂದ ಜಪವು ಸಾವಿರಪಾಲು ಗುಣವುಳ್ಳದ್ದು; ಸ್ಫಟಿಕಮಣಿಗಳ ಜಪವು ಹತ್ತುಸಾವಿರಪಾಲು ಹೆಚ್ಚಿನ ಗುಣವುಳ್ಳದು. ಮುತ್ತುಗಳಿಂದ ಮಾಡುವ ಜಪವು ಲಕ್ಷಪಾಲು ಗುಣಪೂರ್ಣವು. ತಾವರೆ ಮಣಿಗಳ ಜಪವು ಹತ್ತುಲಕ್ಷಪಾಲು ಗುಣಪೂರ್ಣವು; ಚಿನ್ನದ ಮಣಿಗಳ ಎಣಿಕೆಯಿಂದ ಮಾಡುವ ಜಪವು ಕೋಟಿಗುಣವುಳ್ಳದ್ದು. ॥೩೪-೩೫-೩೬॥

ಜಪಸಂಖ್ಯೆಯಲ್ಲಿ ದರ್ಭೆಯಗಂಟು ಮತ್ತು ರುದ್ರಾಕ್ಷಗಳ ಸಹಾಯದಿಂದ ಜಪಮಾಡುವುದು ಅಪರಿಮಿತವಾದ ಗುಣಗಳುಳ್ಳದ್ದು. ಅಯ್ಯ ಜೈಗೀಷವ್ಯನೇ,

ಸಪ್ತವಿಂಶತಿಸಂಖ್ಯಾಕೈಃ ಕೃತಾ ಪುಷ್ಟಿಪ್ರದಾ ಭವೇತ್ ।
ಪಂಚವಿಂಶತಿಸಂಖ್ಯಾಕೈಃ ಕೃತಾಮುಕ್ತಿಂ ಪ್ರಯಚ್ಛತಿ ॥೩೮॥

ಅಕ್ಷೈಸ್ತು ಪಂಚದಶಭಿರಭಿಚಾರಫಲಪ್ರದಾ ।
ಅಂಗುಷ್ಠಂ ಮೋಕ್ಷದಂ ವಿದ್ಯಾತ್ತರ್ಜನೀ ಶತ್ರುನಾಶಿನೀ ॥೩೯॥

ಮಧ್ಯಮಾ ಧನದಾಶಕ್ತಿಂ ಕರೋತ್ಯೇಷಾ ಹ್ಯನಾಮಿಕಾ ।
ಕನಿಷ್ಠಾ ಕರ್ಷಿಣೀ ಪ್ರೋಕ್ತಾ ಜಪಕರ್ಮಣಿ ಶೋಭನಾ ॥೪೦॥

ಅಂಗುಷ್ಠೇನ ಜಪೇ ಜಪ್ಯಂ ಅನ್ಯೈರಂಗುಲಿಭಿಃ ಸಹ ।
ಅಂಗುಷ್ಠೇನ ವಿನಾ ಜಪ್ಯಂ ಕೃತಂ ಯಡಫಲಂ ಯತಃ ॥೪೧॥

ಗೃಹೇ ಜಪಂ ಸಮಂ ವಿಂದ್ಯಾದ್ಗೋಷ್ಠೇ ಶತಗುಣಂ ವಿದುಃ ।
ಪುಣ್ಯಾರಣ್ಯೇ ತಥಾರಾಮೇ ಸಹಸ್ರಗುಣಮುಚ್ಯತೇ ॥೪೨॥

---

ಮೂವತ್ತು ರುದ್ರಾಕ್ಷಗಳಿಂದ ಮಾಡಿದ ಮಾಲೆಯು ಜಪಕಾರ್ಯದಲ್ಲಿ ಉಪಯುಕ್ತ ವಾದರೆ ಅದು ಧನಪ್ರದವು ; ಇಪ್ಪತ್ತೇಳು ರುದ್ರಾಕ್ಷಿಗಳ ಮಾಲೆಯಿಂದ ಮಾಡಿದ ಜಪವು ಪುಷ್ಟಿಯನ್ನುಂಟುಮಾಡುವುದು. ಇಪ್ಪತ್ತೈದು ರುದ್ರಾಕ್ಷಿಗಳ ಮಾಲೆಯು ಜಪವು ಮೋಕ್ಷವನ್ನುಂಟುಮಾಡುವುದು. ॥೩೭-೩೮॥

ಹದಿನೈದು ರುದ್ರಾಕ್ಷಿಗಳ ಮಾಲೆಯಿಂದ ಮಾಡಿದ ಜಪವು ಅಭಿಚಾರಿಕ ರೂಪವಾದ ಫಲವನ್ನುಂಟುಮಾಡುತ್ತದೆ. ಜಪಮಾಲೆಗೆ ಹೆಬ್ಬೆರಳು ಮೋಕ್ಷಪ್ರದ ವಾದುದು. ತರ್ಜನೀಬೆರಳು ಶತ್ರುಗಳನ್ನು ನಾಶಮಾಡುವುದು ; ಮಧ್ಯದ ಬೆರಳಿನ ಜಪವು ಧನವನ್ನು ದೊರಕಿಸುವುದು ; ಅನಾಮಿಕೆಯ ಬೆರಳಿನ ಜಪವು ಶಕ್ತಿಯು ನ್ನುಂಟುಮಾಡುವುದು. ಜಪಕಾರ್ಯದಲ್ಲಿ ಕಿರುಬೆರಳನ್ನು ಉಪಯೋಗಿಸಿದರೆ ಅದು ವ್ಯಕ್ತಿಗಳ ಆಕರ್ಷಣೆಯನ್ನುಂಟುಮಾಡುವುದು. ॥೩೯-೪೦॥

ಹೆಬ್ಬೆರಳಿನೊಡನೆ ಇತರ ಬೆರಳನ್ನು ಸೇರಿಸಿ ಜಪಮಾಡಬೇಕು. ಅಂತಹ ಹೆಬ್ಬೆರಳನ್ನು ಬೆರಸದೆ ಮಾಡಿದ ಜಪವು ವ್ಯರ್ಥವಾಗುವುದು. ಮನೆಯಲ್ಲಿ ಮಾಡಿದ ಜಪವು ಸಮಾನವಾದ ಫಲವನ್ನುಂಟುಮಾಡುವುದು. ಗೋವುಗಳ ಸಿಲ್ದಾಣದಲ್ಲಿ ಮಾಡುವ ಜಪವು ನೂರರಷ್ಟು ಫಲಕಾರಿಯೆಂದು ಹೇಳುವರು. ಪುಣ್ಯಕರವಾದ

ಅಯುತಂ ಪರ್ವತೇ ತೀರೇ ನದ್ಯಾ ಲಕ್ಷಮುದಾಹೃತಂ ।
ಕೋಟಿಂ ದೇವಾಲಯೇ ಪ್ರಾಹುಃಪರಾರ್ಧಂ ಬಿಲ್ವಮೂಲಕೇ ॥೪೩॥

ಶಿವಲಿಂಗಾಗ್ರತೋ ದೇವಿ ಜಪಸ್ಯಾನಂತ್ಯಮುಚ್ಯತೇ ।
ಸೂರ್ಯಸ್ಯಾಗ್ರೇ ಗುರೋರಿಂದೋಃ ಶಾಂಭವಾನಾಂ ಚ ಸನ್ನಿಧೌ ॥೪೪॥

ವಿಪ್ರಾಣಾಂ ಚ ಗವಾಶ್ವತ್ಥಮೂಲೇ ವೈ ಶಸ್ಯತೇ ಜಪಃ ।
ತತ್ಪೂರ್ವಾಭಿಮುಖಂ ವಶ್ಯಂ ದಕ್ಷಿಣಂ ತ್ವಾಭಿಚಾರಕೇ ॥೪೫॥

ಪಶ್ಚಿಮಂ ಧನದಂ ವಿಂದ್ಯಾದುತ್ತರಂ ಶಾಂತಿದಂ ಭವೇತ್ ।
ಅನ್ಯಾಸು ಚ ದಿಶಾಸ್ವೇವಂ ವಶ್ಯಾಕರ್ಷಣವಿದ್ವಿಷಿ ॥೪೬॥

---

ಕಾಡು, ಉದ್ಯಾನಗಳಲ್ಲಿ ಮಾಡಿದ ಜಪವು ಸಾವಿರಪಾಲು ಗುಣಪ್ರದವೆನಿಸಿರುವುದು. ಪರ್ವತದಲ್ಲಿನ ಜಪವು ಹತ್ತುಸಾವಿರ ಗುಣವುಳ್ಳದು. ನದಿಯ ದಡದಲ್ಲಿ ಜಪಮಾಡುವುದರಿಂದ ಒಂದುಲಕ್ಷ ಗುಣಾಧಿಕವಾದ ಫಲವುಂಟಾಗುವುದು. ದೇವಾಲಯದಲ್ಲಿ ಮಾಡುವ ಜಪವು ಕೋಟಿಪಾಲು ಗುಣಗಳುಳ್ಳದು. ದೇವಿಯೇ, ಬಿಲ್ವವೃಕ್ಷದ ಬುಡದಲ್ಲಿ ಮಾಡುವ ಜಪವು ಹತ್ತುಕೋಟಿ ಗುಣವಿಶಿಷ್ಟವಾಗಿದೆ. ಪಾರ್ವತಿಯೇ ಕೇಳು, ಶಿವಲಿಂಗದ ಮುಂದೆ ಕುಳಿತು ಜಪಮಾಡಿದರೆ ಅದರ ಫಲಕ್ಕೆ ಕೊನೆಯೇ ಇಲ್ಲವೆಂದು ತಿಳಿ. ॥೪೧-೪೨-೪೩॥

ಸೂರ್ಯಬಿಂಬ, ಗುರು, ಚಂದ್ರ, ಶೈವಬ್ರಾಹ್ಮಣ, ಗೋವು, ಅರಳೀಮರ ಇವುಗಳ ಮುಂದೆ, ಅಥವಾ ಸನ್ನಿಧಿಯಲ್ಲಿ ಅಥವಾ ಬುಡದಲ್ಲಿ ಕುಳಿತು ಮಾಡುವ ಜಪವು ಅತ್ಯಂತ ಶ್ರೇಷ್ಠವೆನಿಸುವುದು. ಪೂರ್ವದಿಗಭಿಮುಖವಾಗಿ ಮಾಡಿದ ಜಪವು ಸಕಲ ವಸ್ತುಗಳ ವಶೀಕರಣರೂಪಶಕ್ತಿಯುಳ್ಳದ್ದು ; ದಕ್ಷಿಣದಿಕ್ಕಿಗಭಿಮುಖವಾಗಿ ಕುಳಿತು ಆಭಿಚಾರಕ ಕರ್ಮಗಳಲ್ಲಿ ಜಪಮಾಡಬೇಕು. ಪಶ್ಚಿಮಾಭಿಮುಖವಾದ ಜಪವು ಧನಪ್ರದವಾಗಿರುವುದು. ಉತ್ತರದಿಕ್ಕಿಗಭಿಮುಖವಾಗಿ ಕುಳಿತು ಜಪಮಾಡಿದರೆ ಅದು ಮಾನಸಿಕವಾದ ಶಾಂತಿಯನ್ನುಂಟುಮಾಡುವುದು. ಇತರ ದಿಕ್ಕುಗಳಲ್ಲಿ ಇದೇ ರೀತಿ ಜಪಮಾಡುವುದರಿಂದ ವಶೀಕರಣ, ಆಕರ್ಷಣ, ವಿದ್ವೇಷರೂಪವಾದ ಫಲವನ್ನು ಸಾಧಿಸಬಹುದು. ಹೀಗೆ ಬೇರೆ ಬೇರೆ ದಿಕ್ಕುಗಳಿಂದ ಬೇರೆ ಬೇರೆಯಾದ ಫಲವನ್ನು ನಿರೀಕ್ಷಿಸಬಹುದು ॥೪೪-೪೫-೪೬॥

ಮಾರಣೋಚ್ಚಾಟನೇ ಜಪ್ಯೋ ಮನುರೇಷ ಸಮಾಹಿತೈಃ ।
ಉಷ್ಣೀಷೀ ಕಂಚುಕೀ ನಗ್ನಃ ಮುಕ್ತಕೇಶೋಽಪ್ಯಕಚ್ಛಪಃ ॥೪೭॥

ಅಪವಿತ್ರಕರೋಽಶುದ್ಧೋ ವಿಲಪನ್ಪ್ರಹಸನ್ತಥಾ ।
ಕ್ರೋಧೋ ಮದಃ ಕ್ಷುಧಾ ತಂದ್ರೋ ನಿದ್ರಾಲಸ್ಯಾದಿವರ್ಜಿತಃ ॥೪೮॥

ದರ್ಶನಂ ಚ ಶ್ವನೀಚಾನಾಂ ವರ್ಜಯೇಜ್ಜಪಕರ್ಮಣಿ ।
ಆಚಾಮೇತ್ಸಂಭವೇ ತೇಷಾಂ ಸ್ಮರೇದ್ವಾ ಮಾಂ ತ್ವಯಾ ಸಹ ॥೪೯॥

ತಪ್ತಚಕ್ರಾಂಕಿತಾನ್ವ್ರಾತ್ಯಾನ್ನ ಪಶ್ಯೇತ್ಸ್ತ್ರೀಂ ರಜಸ್ವಲಾಂ ।
ಜಪೇ ನ ಸಹ ಭಾಷೇತ ಮೌನೀ ಮಾಂಧ್ಯಾಯ್ಯ ಮಾನವಃ ॥೫೦॥

ನ ಚಾನ್ಯಸ್ಯಾರ್ಚನಂ ಕಾರ್ಯಂ ಜಪಕರ್ಮಣಿ ಶೋಭನೇ ।
ಏತೇಷಾಂ ಸಂಭವೇ ದೇವಿ ಪ್ರಾಣಾಯಾಮಂ ಸಮಾಚರೇತ್ ॥೫೧॥

---

ಶತ್ರುಮಾರಣ ಮತ್ತು ಉಚ್ಚಾಟನರೂಪವಾದ ಫಲವನ್ನು ಬಯಸುವವರು ಸಮಾಧಾನಚಿತ್ತರಾಗಿ ತಲೆಗೆ ಟೋಪಿ, ದೇಹಕ್ಕೆ ಕವಚ ಇವುಗಳನ್ನು ಧರಿಸಿರಬೇಕು. ಬಿತ್ತಲೆಯಾಗಿ ತಲೆಗೆದರಿಸಿಕೊಂಡು ಕಚ್ಚೆಯನ್ನೂ ಕಟ್ಟದೆ ಅಶುದ್ಧವಾದ ಕೈಗಳಿಂದ ಅಳುತ್ತಾ, ನಗುತ್ತಾ, ಕೋಪಮದಗಳಿಂದ ಯುಕ್ತನಾಗಿ ಹಸಿವಿನಿಂದ ಕೂಡಿ ಇದನ್ನು ಜಪಿಸಬಾರದು. ಆಲಸ್ಯರಹಿತನಾಗಿ, ನಿದ್ರೆ ಸೋಮಾರಿತನಗಳೇ ಮುಂತಾದವುಗಳನ್ನು ಬಿಟ್ಟು ಈ ಮಂತ್ರವನ್ನು ಜಪಮಾಡಬೇಕು. ಆದರೆ ಯಾವಾಗ ಈ ಮಂತ್ರ ಜಪ ಮಾಡುವಾಗಲೂ ನಾಯಿ, ಶ್ವಪಚರು ಮುಂತಾದ ನೀಚರನ್ನು ನೋಡಬಾರದು. ಒಂದುವೇಳೆ ಅಂತಹ ದರ್ಶನವೊದಗಿದರೆ ಆಚಮನಮಾಡಿ ನಮ್ಮಿಬ್ಬರನ್ನೂ ಸ್ಮರಣೆ ಮಾಡಬೇಕು. ॥೪೭-೪೮-೪೯॥

ಅವೈದಿಕವಾದ ತಪ್ತಚಕ್ರಚಿಹ್ನಿತರಾದ ಅಸಂಸ್ಕೃತರಾದ ಜಾತಿಭ್ರಷ್ಟರನ್ನೂ ಮುಟ್ಟಾದ ಹೆಂಗಸನ್ನೂ ಜಪಕಾಲದಲ್ಲಿ ನೋಡಬಾರದು. ಮೌನವಾಗಿ ನನ್ನನ್ನು ಧ್ಯಾನಮಾಡುತ್ತಾ ಮಾನವನು ಜಪಮಾಡುವಾಗ ಮತ್ತೊಬ್ಬರೊಡನೆ ಖಂಡಿತವಾಗಿ ಮಾತನಾಡಬಾರದು. ಎಲೌ ಮಂಗಳಾಂಗಿಯೇ, ಈ ಜಪಕಾಲದಲ್ಲಿ ಬೇರೆ ಮತ್ತಾವ ದೇವರ ಪೂಜೆಯನ್ನೂ ಮಾಡಬಾರದು. ಒಂದುವೇಳೆ ಇವುಗಳೇನಾದರೂ ಸಂಭವಿಸಿದರೆ ಬೇರೆ ಪ್ರಾಣಾಯಾಮಮಾಡಿ ಅನಂತರ ,ಪೂಜಾದಿಗಳನ್ನು ಆರಂಭಿಸಬೇಕು. ಅಥವಾ ಮಧ್ಯದಲ್ಲಿ ಸೂರ್ಯ, ಚಂದ್ರ, ನಕ್ಷತ್ರ ಮತ್ತು ಅಗ್ನಿಗಳನ್ನು ನೋಡಬೇಕು.

ಜ್ಯೋತೀಂಷಿ ಚ ಪ್ರಪಶ್ಯೇದ್ವಾ ಕುರ್ಯಾದ್ಭಸ್ಮಾಂಗಮೇವ ಹಿ ।
ಅನಾಸನಃ ಶಯಾನೋ ವಾ ಗಚ್ಛನ್ನುತ್ಥಿತ ಏವ ವಾ ॥೫೨॥

ರಥ್ಯಾಯಾಮಶಿವಸ್ಥಾನೇ ನ ಜಪೇತ್ತಿಮಿರಾವೃತೇ ।
ಪ್ರಸಾರ್ಯ ನ ಜಪೇತ್ಪಾದೌ ಧೂನ್ವನ್ನೇಶಾನಥಾಶುಚಿ ॥೫೩॥

ಯಾನಶಯ್ಯಾಧಿರೂಢೋ ವಾ ಚಿಂತಾವ್ಯಾಕುಲಿತೋಽಪಿ ವಾ ।
ಶಕ್ತಸ್ಯ ಸರ್ವಮೇವೈತದಶಕ್ತಃ ಶಕ್ತಿತೋ ಜಪೇತ್ ॥೫೪॥

ಶಾವಸೂತಿಕರೇ ಚಾಪಿ ದಶಧಾ ಪ್ರಜಪೇನ್ಮನುಂ ।
ಕಿಮತ್ರ ಬಹುನೋಕ್ತೇನ ಏಷ ಜಪ್ಯವಿಧಿಃ ಶಿವೇ ॥೫೫॥

॥ ಈಶ್ವರ ಉವಾಚ ॥

ಪಾಪಾನಾಂ ಜಪತಾಂ ಪ್ರಭಂಜನಕರೀಂ ವಿದ್ಯಾಂ ಚ ಪಂಚಾಕ್ಷರೀಂ
ಮತ್ಪಾದಪ್ರವಣಾಂ ಸದಾ ಹಿತಕರೀಮಾರಾಚ್ಚ ಮುಕ್ತಿಂ ಕರೀಂ ।

---

ಅಥವಾ ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿಕೊಳ್ಳಬೇಕು. ಅಥವಾ ಆಸನ ವಿಲ್ಲದೇ ಮಲಗಬೇಕು. ಆದರೆ ಪೀಠದಲ್ಲಿ ಕುಳಿತುಕೊಳ್ಳದೆ ಮಲಗಿ, ಹೋಗುತ್ತಾ ಜಪ ಮಾಡಬಾರದು. ॥೫೦-೫೧-೫೨॥

ರಸ್ತೆಯಲ್ಲಿ ಅಥವಾ ಶಿವಸಂಬಂಧವಿಲ್ಲದ ಸ್ಥಳಗಳಲ್ಲಿ ಅಥವಾ ಕತ್ತಲೆ ಕವಿದಿರುವ ಪ್ರದೇಶಗಳಲ್ಲಿ ಈ ಮಂತ್ರವನ್ನು ಜಪಮಾಡಬಾರದು. ಕಾಲುಗಳನ್ನು ನೀಡಿಕೊಂಡು, ಕೂದಲುಗಳನ್ನು ಕೊಡವುತ್ತಾ, ಅಶುಚಿಯಾಗಿದ್ದು, ವಾಹನ ಮತ್ತು ಹಾಸಿಗೆಗಳನ್ನೇರಿ ಕುಳಿತಿರುವಾಗ, ನಾನಾಯೋಚನೆಗಳಿಂದ ಚಿಂತಾಕ್ರಾಂತನಾಗಿರು ವಾಗ ಈ ಮಂತ್ರವನ್ನು ಪುರಶ್ಚರಣೆ ಮಾಡಬಾರದು. ಆದರೆ ದೇವಿಯೇ ಕೇಳು, ಈ ನಿಯಮಗಳೆಲ್ಲವೂ ಆರೋಗ್ಯ ಮತ್ತು ಸಾಮರ್ಥ್ಯವಿದ್ದವನಿಗೆ ಮಾತ್ರ ಹೇಳಲ್ಪ ಟ್ಟಿರುವುದು. ಅಶಕ್ತನಾದರೆ ಅವನ ಶಕ್ತಿಗನುಗುಣವಾಗಿ ಎಲ್ಲಿ ಬೇಕಾದರೂ ಜಪ ಮಾಡಬಹುದು. ಮೃತಾಶೌಚ, ಜಾತಾಶೌಚಗಳಲ್ಲಿ ಹತ್ತು ಸಂಖ್ಯೆಯಲ್ಲಿ ಜಪಮಾಡ ಬೇಕು. ಪಾರ್ವತಿ! ಹೆಚ್ಚುಮಾತಿನಿಂದೇನು ; ಒಟ್ಟಿನಲ್ಲಿ ಇದೇ ಜಪವಿಧಿಯೆನಿಸಿರು ವುದು. ॥೫೩-೫೪-೫೫॥

ಗಿರಿರಾಜಕುಮಾರಿಯೇ ಕೇಳು, ಈ ಪಂಚಾಕ್ಷರವಿದ್ಯೆಯು ಜಪಮಾಡುವವರ

ಸರ್ವಾಘೌಘನಿವಾರಿಣೀಂ ಮಮ ದಯಾಪಾರೀಣಧುರ್ಯಾರಣೀಂ
ದುಃಖಧ್ವಾಂತನಿವಾರಿಣೀಂ ಭವನಿಧೇಃ ಪಾರಾಯ ಸಂತಾರಿಣೀಂ ॥೫೬॥

ಅಷ್ಟತ್ರಿಂಶತ್ಕಲಾಭಿಃ ಶಿವಮನುಮನಿಶಂ ನ್ಯಸ್ಯ ಸರ್ವಾಂಗಸಿಂಧೌ
ಅಂತರ್ಭಾವಿತಶಂಭುಪಾದಕಮಲಧ್ಯಾನಾನುರಾಗಾದರಃ ।
ಸ್ವಾತ್ಮಾನಂ ಶಿವಮೇವ ಭಾವಯತಿ ಯೋ ದೇಹೇಂದ್ರಿಯಾದ್ಯುಜ್ಝಿತಂ
ಸಾನಂದಾಂಬುಧಿಮಗ್ನ ಸರ್ವ ಹೃದಯಃ ಪಂಚಾಕ್ಷರಾದ್ಯಾಶ್ರಯಃ ॥೫೭॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಶಿವಪಂಚಾಕ್ಷರೀ
ಜಪವಿಧಿನಿರೂಪಣಂ ನಾಮೈಕೋನಚತ್ವಾರಿಂಶೋಽಧ್ಯಾಯಃ

---

ಸಮಸ್ತ ಪಾಪರಾಶಿಯನ್ನು ಹೋಗಲಾಡಿಸುತ್ತದೆ. ಆದರಲ್ಲಿಯೂ ನನ್ನ ಪಾದಧ್ಯಾನ ಮಾಡುತ್ತಾ, ಈ ಮಂತ್ರಜಪದಲ್ಲಿ ಆಸಕ್ತರಾದವರಿಗಂತೂ, ಯಾವಾಗಲೂ ಹಿತ ವನ್ನುಂಟುಮಾಡಿ, ಶೀಘ್ರವಾಗಿಯೇ ಮೋಕ್ಷವನ್ನುಂಟುಮಾಡುತ್ತದೆ. ಕಾಮ ಮೋಹಿತರಾಗಿ ಸಂಸಾರದಲ್ಲಿ ತೊಳಲುತ್ತಿರುವವರನ್ನು ಕ್ಷಣಕಾಲದಲ್ಲಿ ಇದು ಉದ್ಧರಿಸಬಲ್ಲುದು. ಜಪಿಸುವವರ ಸಕಲ ಪಾಪರಾಶಿಗಳನ್ನೂ ನಿವಾರಣೆಮಾಡಿ ನನ್ನ ದಯಾಸಾರವನ್ನು ಸುಲಭವಾಗಿ ಭಕ್ತರಿಗೆ ಒದಗಿಸಬಲ್ಲುದು. ಇದು ಭಕ್ತರ ದುಃಖ ವೆಂಬ ಅಂಧಕಾರವನ್ನೂ ಹೋಗಲಾಡಿಸಿ ಸಂಸಾರವೆಂಬ ಸಾಗರದ ದಡವನ್ನು ಸುಲ ಭವಾಗಿ ಹೊಂದಿಸುವುದರಲ್ಲಿ ಈ ಮಂತ್ರವು ದೋಣಿಯಂತೆ ಸಹಾಯಕವಾಗಿದೆ.॥೫೬॥

ಪಾರ್ವತಿಯೇ ಕೇಳು. ಈ ಮಂತ್ರವು ಋಷಿ, ದೇವತಾ, ಛಂದಸ್ಸು, ಕೀಲಕ, ಶಕ್ತಿ, ಅಂಗನ್ಯಾಸ, ಕರನ್ಯಾಸ, ಮುಂತಾದ ಮೂವತ್ತೆಂಟು ಕಲೆ ಗಳುಳ್ಳದ್ದು. ಇಂತಹ ಪರಮಪೂಜ್ಯವಾದ ಮಂತ್ರವನ್ನು ಅನವರತವೂ ತನ್ನ ದೇಹದಲ್ಲಿಟ್ಟಿರುವಂತೆ ಭಾವಿಸಬೇಕು. ಮೂವತ್ತೆಂಟು ಕಲೆಗಳಿಂದ ಶೋಭಿಸುವ ಈ ಶಿವಪಂಚಾಕ್ಷರ ಮಂತ್ರವನ್ನು ಮನದಲ್ಲಿ ಅಡಗಿಸಿ ಪರಮ ಶಂಭುವಿನ ಅಡಿದಾವರೆಗಳ ಧ್ಯಾನದಲ್ಲಿಯೇ ಪ್ರೀತ್ಯಾದರವುಳ್ಳವನಾಗಿ, ತನ್ನ ಆತ್ಮವನ್ನು ಶಿವನೆಂದೇ ಭಾವಿ ಸುತ್ತಾ ಸೋಹಂಭಾವದಿಂದ ಜಪಮಾಡುವವನು ನಿಜವಾಗಿಯೂ ದೇಹ, ಇಂದ್ರಿಯ ಮುಂತಾದ ಬಂಧನಗಳಿಂದ ಬಿಡಲ್ಪಟ್ಟವನಾಗಿ, ಆನಂದಸಮುದ್ರದಲ್ಲಿ ತೇಲಾ ಡುತ್ತಾ ದುಃಖಾಭಾವರೂಪವಾದ ಮುಕ್ತಿಸುಖದಿಂದ ಆವೃತನಾಗಿ ಮುಕ್ತನಾಗುವ

ನೆಂದು ಪಾರ್ವತಿಗೆ ಶಿವನು ಹೇಳಿದ್ದನ್ನು ಕುಮಾರಸ್ವಾಮಿಯು, ಜೈಗೀಷವ್ಯಾದಿ ಮುನಿಗಳಿಗೆ ತಿಳಿಸಿದನು. ॥೫೭॥

ಇಂತು ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಶಿವಪಂಚಾಕ್ಷರೀ ಮಂತ್ರಜಪದ ವಿಧಿನಿರೂಪಣೆಯೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಚತ್ವಾರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಸದಾಚಾರೋ ಜಪನ್ಜುಹ್ವನ್ಧ್ಯಾಯನ್ಭದ್ರಂ ಸಮಶ್ನುತೇ ।
ಆಚಾರಃ ಪ್ರಥಮೋ ಧರ್ಮೋ ಹ್ಯಾಚಾರಃ ಪರಮಂ ಧನಂ ॥೧॥

ಆಚಾರಃ ಪರಮಾ ವಿದ್ಯಾ ಹ್ಯಾಚಾರಃ ಪರಮಾ ಗತಿಃ ।
ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥೨॥

---

## ನಲವತ್ತನೆಯ ಅಧ್ಯಾಯ

ಶಿವಮಂತ್ರಮಹಿಮೆಯನ್ನು ಕೇಳುವುದರಲ್ಲಿ ಅತ್ಯಾದರವುಳ್ಳ ಜೈಗೀಷವ್ಯಾದಿಗಳಿಗೆ ಸ್ಕಂದಸ್ವಾಮಿಯು ಶಿವೋಕ್ತಿಯನ್ನೇ ಮತ್ತೆ ಅನುವಾದಮಾಡಲಾರಂಭಿಸಿದನು. ದೇವಿಯೇ ಕೇಳು; ಜಪ, ಹೋಮ, ಧ್ಯಾನಾದಿಗಳನ್ನು ನಡೆಸುವವನು ಸದಾಚಾರಸಂಪನ್ನನಾಗಿದ್ದುಕೊಂಡು ಸಕಲ ಸನ್ಮಂಗಳವನ್ನೈದುತ್ತಾನೆ. ಮಾನವರಿಗೆ ಆಚಾರವೇ ಮೊದಲನೆಯ ಧರ್ಮವು; ಆಚಾರವೇ ಶ್ರೇಷ್ಠವಾದ ಧನವು; ಆಚಾರವೇ ಪರಮವಿದ್ಯೆಯೂ, ಉತ್ತಮಗತಿಯೂ ಆಗಿರುವುದು. ಆಚಾರಶೂನ್ಯನಾದ ಪುರುಷನು ಪ್ರಪಂಚದಲ್ಲಿ ಎಲ್ಲರ ನಿಂದೆಗೂ ಗುರಿಯಾಗುವನು. ಅಲ್ಲದೇ ಅವನಿಗೆ ಯಾವ ಲೋಕದಲ್ಲಿಯೂ ಸುಖವುಂಟಾಗಲಾರದು. ಆದ್ದರಿಂದಲೇ ಮಾನವನು ಆಚಾರಶೀಲನಾಗಬೇಕು. ॥೧-೨॥

ತಥಾ ಪರತ್ರ ಚಾಸ್ತೀತಿ ಮತಿರಾಸ್ತಿಕ್ಯಮುಚ್ಯತೇ ।
ಯಸ್ಯ ಯದ್ವಿಹಿತಂ ಕರ್ಮ ವೇದೈಃ ಶಾಸ್ತ್ರೇಷು ಕಥ್ಯತೇ ॥೩॥

ತಸ್ಯ ತೇನ ಸಮಾಚಾರಃ ಸದಾಚಾರೋ ನ ಚೇತರಃ ।
ಸದ್ಭಿರಾಚರಿತತ್ವಾಚ್ಚ ಸದಾಚಾರಃ ಸ ಉಚ್ಯತೇ ॥೪॥

ಸದಾಚಾರಸ್ಯ ತಸ್ಯಾಹುಸ್ತಸ್ಯ ಮೂಲಸ್ಯ ಕಾರಣಂ ।
ಆಸ್ತಿಕ್ಯಂ ಚೇತ್ಪ್ರಮಾದಾದ್ಯೈಃ ಸದಾಚಾರಾದಪಿ ಚ್ಯುತಃ ॥೫॥

ನ ದುಷ್ಯತಿ ನರೋ ನಿತ್ಯಂ ತಸ್ಮಾದಾಸ್ತಿಕತಾಂ ವ್ರಜೇತ್ ।
ಯಥೇಹಾಸ್ತಿ ಸುಖಂ ದುಃಖಂ ಸುಕೃತೈರ್ದುಷ್ಕೃತೈರಪಿ ॥೬॥

ತಥಾ ಪರತ್ರ ಚಾಸ್ತೀತಿ ಮತಿರಾಸ್ತಿಕ್ಯಮುಚ್ಯತೇ ।
ರಹಸ್ಯಮನ್ಯದ್ವಕ್ಷ್ಯಾಮಿ ಗೋಪನೀಯಮಿದಂ ಶಿವೇ ॥೭॥

---

ವೇದ, ಮತ್ತು ಶಾಸ್ತ್ರಗಳಲ್ಲಿ ಯಾವ ಯಾವ ವರ್ಣದವರಿಗೆ ಯಾವ ಯಾವ ಆಚಾರವು ವಿಹಿತವಾಗಿರುವುದೋ ಅದರಂತೆ ನಡೆಯುವುದೇ ಸದಾಚಾರವೆನಿಸುವುದು. ಅದನ್ನೇ ದೊಡ್ಡವರು ಸದ್ಧರ್ಮವೆನ್ನುವರು. ಸಾಧುಗಳು ಅಂದರೆ ಶಾಸ್ತ್ರಜ್ಞಾನಸಂಪನ್ನರಾದವರು ಮೊದಲು ಆಚರಿಸಿರುವುದರಿಂದ ಅದನ್ನು ಸದಾಚಾರವೆಂಬುದಾಗಿ ಕರೆಯುವರು. ॥೩-೪॥

ದೇವಿಯೇ ಕೇಳು, ಆಸ್ತಿಕ್ಯವೇ ಸದಾಚಾರಕ್ಕೆ ಮೂಲಕಾರಣವಾಗಿರುವುದು. ಮಾನವರಿಗೆ ಆಸ್ತಿಕತೆಯೊಂದಿದ್ದರೆ ಪ್ರಮಾದವೇ ಮುಂತಾದ ದೋಷಗಳಿಂದ ಸದಾಚಾರ ನಿರ್ವಹಣ ವಿಷಯದಲ್ಲಿ ಚ್ಯುತಿಯೊದಗಿದರೂ ಮಾನವನು ದೋಷಭಾಗಿಯಾಗಲಾರನಾದುದರಿಂದ ಆಸ್ತಿಕತೆಯನ್ನು ಮೊದಲು ಸಂಪಾದಿಸಬೇಕು. ಈ ಲೋಕದಲ್ಲಿ ಪುಣ್ಯಪಾಪಕರ್ಮಗಳಿಂದ ಸುಖದುಃಖಗಳುಂಟಾಗುವಂತೆಯೇ ಪರಲೋಕದಲ್ಲಿಯೂ ಹಿಂದಿನ ಜನ್ಮದ ಸುಕೃತದುಷ್ಕೃತಗಳಿಂದ ಸುಖದುಃಖಾದಿಗಳು ಒದಗುವವೆಂಬ ಅಭಿಪ್ರಾಯವೇ ಆಸ್ತಿಕತೆಯೆನಿಸಲ್ಪಡುವುದು. ॥೫-೬॥

ಗಿರಿಜೆ, ಇನ್ನೊಂದು ರಹಸ್ಯಾಂಶವನ್ನು ನಿನಗೆ ಈಗ ಹೇಳುವೆನು ಕೇಳು, ಇದು ಗುಟ್ಟಾಗಿಡಬೇಕಾದುದೆಂದು ತಿಳಿ; ಈ ಶಿವಪಂಚಾಕ್ಷರಮಂತ್ರವನ್ನು ಸಿಕ್ಕಿದವರಿಗೆಲ್ಲಾ ಹೇಳಬಾರದು ; ನಾಸ್ತಿಕಧರ್ಮಾವಲಂಬಿಗಳು ಅಥವಾ ಪಶುಸದೃ

ನ ವಾಚ್ಯಂ ಯಸ್ಯ ಕಸ್ಯೇತಿ ನಾಸ್ತಿಕಸ್ಯಾಥ ವಾ ಪಶೋಃ ।
ಸದಾಚಾರವಿಹೀನಸ್ಯ ಪತಿತಸ್ಯಾಂತ್ಯಜಸ್ಯ ಚ ॥೮॥

ಪಂಚಾಕ್ಷರಾತ್ಪರಂ ನಾಸ್ತಿ ಪರಿತ್ರಾಣಂ ಕಲೌ ಯುಗೇ ।
ಗಚ್ಛತಸ್ತಿಷ್ಠತೋ ವಾಪಿ ಸ್ವೇಚ್ಛಯಾ ಕರ್ಮಕುರ್ವತಃ ॥೯॥

ಅಶುಚೌ ವಾ ಶುಚಾವಾಪಿ ಮಂತ್ರೋಽಯಂ ನ ಚ ನಿಷ್ಫಲಃ ।
ಅನಾಚಾರವತಾಂ ಪುಂಸಾಮವಿಶುದ್ಧಷಡಧ್ವನಾಂ ॥೧೦॥

ಅನಾದಿಷ್ಟೋಽಪಿ ಗುರುಣಾ ಮಂತ್ರೋಽಯಂ ನ ಚ ನಿಷ್ಫಲಃ ।
ಅಂತ್ಯಜಸ್ಯಾಪಿ ಮೂಢಸ್ಯ ಮೂರ್ಖಸ್ಯ ಪತಿತಸ್ಯ ವಾ ॥೧೧॥

ನಿರ್ಮರ್ಯಾದಸ್ಯ ನೀಚಸ್ಯ ಮಂತ್ರೋಽಯಂ ನ ಚ ನಿಷ್ಫಲಃ ।
ಸರ್ವಾವಸ್ಥಾಂ ಗತಸ್ಯಾಪಿ ಮಯಿ ಭಕ್ತಿಮತಃ ಪ್ರಿಯೇ ॥೧೨॥

---

ರಾದ ಅಜ್ಞಾನಿಗಳು ಸದಾಚಾರವಿಲ್ಲದವರು, ಪತಿತರು ಅಥವಾ ಅಂತ್ಯಜರು ಇವರಿಗೆ ಮಾತ್ರ ಎಂದೂ ಉಪದೇಶಮಾಡಬಾರದು. ಏಕೆಂದರೆ ದೇವಿ, ಈ ಕಲಿಯುಗದಲ್ಲಿ ಈ ಪಂಚಾಕ್ಷರಮಂತ್ರಕ್ಕಿಂತ ಪವಿತ್ರವಾದ ಮತ್ತು ರಕ್ಷಕವಾದ ಬೇರೆ ಮಂತ್ರವೇ ಲೋಕದಲ್ಲಿ ಕಂಡುಬರುವುದಿಲ್ಲ. ॥೭-೮॥

ದಾರಿಯಲ್ಲಿ ನಡೆದು ಹೋಗುತ್ತಿರುವವನಿಗೂ, ಕಾರ್ಯತತ್ಪರನಾಗಿ ನಿಂತಿರುವವನಿಗೂ, ತನ್ನಿಷ್ಟಬಂದಂತೆ ಕೆಲಸಮಾಡುತ್ತಿರುವವನಿಗೂ, ಶುಚಿ ಅಥವಾ ಅಶುಚಿ ಧರ್ಮದಲ್ಲಿರುವವನಿಗೂ ಈ ಮಂತ್ರವು ನಿಷ್ಫಲವೆನಿಸಲಾರದು. ಹಾಗೆಯೇ ಆಚಾರ ಹೀನರಾದ ಪುರುಷರು, ಶುದ್ಧವಲ್ಲದ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳಲ್ಲಿ ತೊಡಗಿ, ವ್ಯವಹಾರಕಾತರರಾಗಿರುವ ಮಾನವರು, ಅಥವಾ ಮಂತ್ರಸಿದ್ಧಿಪಡೆದಿರುವ ಗುರುವಿನಿಂದ ಉಪದೇಶಪಡೆಯದೆ ಜಪಮಾಡುವವರು ಇವರಿಗೂ ಈ ಮಂತ್ರವು ವ್ಯರ್ಥವಲ್ಲ. ಅಂತ್ಯಜನಾಗಲೀ, ಮೂರ್ಖನಾಗಲಿ, ಮೂಢನೇ ಆಗಲಿ, ಜಾತಿಪತಿತ, ಮರ್ಯಾದೆಯಿಲ್ಲದವನು, ನೀಚ ಇವರಿಗೂ ಸಹ ಈ ಮಂತ್ರವು ಫಲಕಾರಿಯಲ್ಲವೆಂದು ಹೇಳಬಾರದು. ॥೯-೧೦-೧೧॥

ಪ್ರೇಯಸಿಯೇ, ಕೇಳು. ಹೀಗೆ ಸಕಲ ಅಶುದ್ಧ ಅವಸ್ಥೆಗಳನ್ನು ಪಡೆದಿದ್ದರೂ ನನ್ನಲ್ಲಿ ಭಕ್ತಿಯೊಂದು ಮಾತ್ರ ಇರುವುದಾದರೆ ಅಂತಹವರಿಗೆ ಈ ಮಂತ್ರವು

ಸಿದ್ಧ್ಯತ್ಯೇಷ ನ ಸಂದೇಹೋ ನಾಪರಸ್ಯ ತು ಕಸ್ಯಚಿತ್ ।
ನ ಲಗ್ನತಿಥಿನಕ್ಷತ್ರವಾರಯೋಗಾದಯಃ ಪ್ರಿಯೇ ॥೧೩॥

ಅಸ್ಯಾತ್ಯಂತಮಪೇಕ್ಷಾಸ್ಯಾನ್ನೈವ ಸುಪ್ತಃ ಸದೋತ್ಥಿತಃ ।
ನ ಕದಾಚನ ಕಸ್ಯಾಪಿ ರಿಪುರೇಷ ಮಹಾಮನುಃ ॥೧೪॥

ಅಸಿದ್ಧೋಽಥ ಸುಸಿದ್ಧೋ ವಾ ಸಾಧ್ಯೋ ವಾಥ ಭವಿಷ್ಯತಿ ।
ಸಿದ್ಧೇನ ಗುರುಣಾದಿಷ್ಟಃ ಸುಸಿದ್ಧ ಇತಿ ಕಥ್ಯತೇ ॥೧೫॥

ಅಸಿದ್ಧೇನಾಪಿ ವಾ ದತ್ತೋಽಸಿದ್ಧಃ ಸಾಧ್ಯಸ್ತು ಕೇವಲಂ ।
ಅಸಾಧಿತಃ ಸಾಧಿತೋ ವಾ ಸಿದ್ಧ್ಯತ್ಯೇಷ ನ ಸಂಶಯಃ ॥೧೬॥

---

ಸಿದ್ಧಿಸುವುದರಲ್ಲಿ ಸಂದೇಹವೇ ಇಲ್ಲ. ಭಕ್ತಿಯೊಂದಿಲ್ಲದೆ ಮತ್ತಾವ ಸದ್ಗುಣಗಳಿದ್ದರೂ ಇದು ಸಿದ್ಧಿಸಲಾರದು. ಪ್ರಿಯೆ! ಲಗ್ನ, ತಿಥಿ, ನಕ್ಷತ್ರ, ವಾರ, ಯೋಗ ಕರಣ ಮೊದಲಾದ ದಿನಶುದ್ಧಿಗಳು ಇದಕ್ಕೆ ಅಷ್ಟು ಮುಖ್ಯವಾಗಿ ಬೇಕಾಗಿಲ್ಲ. ಏಕೆಂದರೆ ಈ ಮಂತ್ರವು ಯಾವಾಗಲೂ ಜಾಗ್ರದವಸ್ಥೆಯಲ್ಲಿರುವುದೇ ಹೊರತು ನಿದ್ರಾವಸ್ಥೆಯಲ್ಲಿರುವುದಿಲ್ಲ. ಈ ಮಹಾಮಂತ್ರವು ಯಾರಿಗೂ ಯಾವಾಗಲೂ ಶತ್ರುವಲ್ಲವೆಂದು ತಿಳಿ. ಭಕ್ತಿಪೂರ್ವಕವಾದ ಅತ್ಯಂತಾಸಕ್ತಿಯಿಂದ ಯಾವಾಗ ಬೇಕಾದರೂ ಈ ಮಂತ್ರಜಪವನ್ನು ಆರಂಭಿಸಬಹುದು. ॥೧೨-೧೩-೧೪॥

ಈ ಮಂತ್ರವು ಅಸಿದ್ಧ, ಸುಸಿದ್ಧ ಮತ್ತು ಸಾಧ್ಯವೆಂಬುದಾಗಿ ಮತ್ತೆ ಮೂರು ಬಗೆಯಾಗಿರುವುದು. ಮಂತ್ರಸಿದ್ಧಿಪಡೆದ ಗುರುವಿನಿಂದ ಉಪದೇಶಮಾಡಲ್ಪಟ್ಟ ಈ ಮಂತ್ರವು ಸುಸಿದ್ಧಮಂತ್ರವೆಂದು ಹೇಳಲ್ಪಡುವುದು. ಅಸಿದ್ಧಮಂತ್ರವು ಸಿದ್ಧಿಯನ್ನು ಹೊಂದದಿರುವ ಗುರುವಿನಿಂದ ಉಪದೇಶಿಸಲ್ಪಟ್ಟದ್ದು. ಸಾಧ್ಯವೆಂಬುದು ಇನ್ನೂ ಸಾಧನೆಯಾಂಶದಲ್ಲಿರುವ ಗುರುವಿನಿಂದ ಉಪದೇಶಕೊಡಲ್ಪಟ್ಟದ್ದೆಂದು ತಿಳಿಯಬೇಕು. ಗುರುವಿನಿಂದ ಸಾಧಿಸದಿರುವ ಮಂತ್ರವಾಗಲೀ ಅಥವಾ ಸಾಧಿತವಾದದ್ದೇ ಆಗಲಿ, ಭಕ್ತಿಸಹಿತನಾದ ಶಿಷ್ಯನಿಂದ ಸಂಶಯವಿಲ್ಲದೆ ಸಿದ್ಧಿಹೊಂದುವುದು ಖಂಡಿತ. ಏಕೇಂದರೆ ಈ ಮಂತ್ರವು ಯಾವಾಗಲೂ ಸಿದ್ಧಮಂತ್ರವೆಂದೇ ಹೇಳಲ್ಪಡುವುದು. ॥೧೫-೧೬॥

ಶ್ರದ್ಧಾತಿಶಯಯುಕ್ತಸ್ಯ ಮಯಿ ಮಂತ್ರೇ ತಥಾ ಗುರೌ ।
ತಸ್ಮಾನ್ಮಂತ್ರಾಂತರಂ ತ್ಯಕ್ತ್ವಾ ಸೋಽಪಾಯಾನಧಿಕಾರತಃ ॥೧೭॥

ಆಶ್ರಯೇತ್ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಬುಧಃ ।
ಮಂತ್ರಾಂತರೇಷು ಸಿದ್ಧೇಷು ಮಂತ್ರ ಏಷ ನ ಸಿದ್ಧ್ಯತಿ ॥೧೮॥

ಅಸ್ಮಿನ್ಸಿದ್ಧೇ ಮಹಾಮಂತ್ರೇ ತೇಽಪಿ ಸಾಧ್ಯಾ ಭವಂತ್ಯುತ ।
ಯಥಾ ದೇವೇಷ್ವಲಬ್ಧೇಷು ಲಬ್ಧೇಷ್ವಪಿ ಮಹೇಶ್ವರಿ ॥೧೯॥

ಮಾತಿಲಬ್ಧೇತು ತೇ ಲಬ್ಧಾ ಮಂತ್ರೇಪ್ಯೇಷಸಮೋ ವಿಧಿಃ ।
ಯೇ ದೋಷಾಃ ಸರ್ವಮಂತ್ರಾಣಾಂ ನ ತೇಽಸ್ಮಿನ್ಸಂಭವಂತ್ಯಪಿ ॥೨೦॥

ಅಸ್ಯಮಂತ್ರಸ್ಯ ಜಾತ್ಯಾದೀನನಪೇಕ್ಷ್ಯ ಪ್ರವರ್ತನಾತ್ ।
ತಥಾಪಿ ನೈನಂ ಕ್ಷುದ್ರೇಷು ಫಲೇಷು ಪ್ರತಿಯೋಗಿಷು ॥೨೧॥

---

ದೇವಿಯೇ ಕೇಳು, ನನ್ನಲ್ಲಿ ಮತ್ತು ನನ್ನ ಮಂತ್ರಜಪದಲ್ಲಿ, ಗುರುವಿನಲ್ಲಿ ಯಾವ ರೀತಿಯ ಭಾವನೆಯನ್ನಿಡುವನೋ, ಅದೇ ಭಾವನೆಯಂತೆಯೇ ಅವನಿಗೆ ಫಲ ದೊರೆಯುವುದು. ಆದ್ದರಿಂದ ಇತರ ಕಾರ್ಯಗಳಲ್ಲಿಯೂ, ತರ್ಕವಿತರ್ಕಾದಿ ಗಳಲ್ಲಿಯೂ ಮನವಿಡಿದು ಇತರ ಮಂತ್ರಗಳನ್ನೆಲ್ಲಾ ತ್ಯಜಿಸಿ, ಮಂತ್ರವೊಂದರಲ್ಲಿಯೇ ಭಕ್ತಿಯನ್ನಿಟ್ಟು ಜಪಮಾಡಬೇಕು. ಅದರಲ್ಲಿಯೂ ಪರಮವಿದ್ಯೆಯೆನಿಸಿದ ಮನೋ ಹರವಾದ ಈ ಪಂಚಾಕ್ಷರೀವಿದ್ಯೆಯನ್ನು ಪಂಡಿತನಾದವನು ಅನನ್ಯಮನಸ್ಕನಾಗಿ ಆಶ್ರಯಿಸಬೇಕು. ಇತರ ಮಂತ್ರಗಳು ಸುಲಭವಾಗಿ ಸಿದ್ಧಿಸಿದರೂ ಈ ಮಂತ್ರವು ಮಾತ್ರ ಅಷ್ಟು ಸುಲಭವಾಗಿ ಸಿದ್ಧಿಸುವುದಿಲ್ಲ. ಆದರೆ ಈ ಮಹಾಮಂತ್ರವು ಮೊದಲು ಸಿದ್ಧವಾದರೆ ಅವುಗಳೆಲ್ಲವೂ ಸುಲಭವಾಗಿ ಹಸ್ತಗತವಾಗುವುವು. ॥೧೭-೧೮॥

ಮಹೇಶ್ವರಿ, ಯಾರಿಗೂ ಸುಲಭವಾಗಿ ವಿಷ್ಣ್ವಾದಿದೇವತೆಗಳು ಸುಲಭ ಗೋಚರರಲ್ಲ. ಒಂದುವೇಳೆ ಅಂತಹ ದೇವತೆಗಳು ತಪಸ್ವಿಗಳಿಗೆ ಪ್ರತ್ಯಕ್ಷವಾಗಿ ಕಾಣದಿದ್ದರೂ ಅವರು ಕೇವಲ ಬುದ್ಧ್ಯಾರೂಢರೆಂದು ಭಾವಿಸಿ ಹೇಗೆ ವ್ಯವಹಾರವೋ, ಅದರಂತೆಯೇ ಈ ಮಂತ್ರವೂ ಕೇವಲ ಮನೋಗೋಚರ ಎಂಬುದಾಗಿ ತಿಳಿಯ ಬೇಕು. ಇತರ ಮಂತ್ರಗಳಿಗಿರುವ ದೋಷಗಳು, ಅಥವಾ ಇತರ ಮಂತ್ರಗಳಲ್ಲಿ ಕಂಡುಬರುವ ದೋಷಗಳು, ಈ ಪಂಚಾಕ್ಷರಮಂತ್ರದಲ್ಲಿ ಸಂಭವಿಸುವುದಿಲ್ಲ. ಈ

ಸಹಸಾ ವಿನಿಯುಂಜೀತ ಯಸ್ಮಾದೇಷ ಮಹಾಫಲಃ ।
ಏವಂ ಸಾಕ್ಷಾನ್ಮಹಾದೇವ್ಯೈ ಮಹಾದೇವೇನ ಶೂಲಿನಾ ॥೨೨॥

ಹಿತಾಯ ಜಗತಾಮುಕ್ತಃ ಪಂಚಾಕ್ಷರವಿಧಿಗ್ರಹಃ ।
ಯ ಇದಂ ಕೀರ್ತಯೇದ್ವಿದ್ವಾನ್ ಶೃಣುಯಾದ್ವಾ ಸಮಾಹಿತಃ ॥೨೩॥

ಸರ್ವಪಾಪವಿನಿರ್ಮುಕ್ತಃ ಸಯಾತಿ ಪರಮಾಂ ಗತಿಂ ॥೨೪॥

॥ ಈಶ್ವರ ಉವಾಚ ॥

ಪರೀಕ್ಷ್ಯ ಶಿಷ್ಯಂ ವಿಧಿವಚ್ಚಿರೋಷಿತಂ
ಶಾಂತಂ ದಾಂತಂ ಭವತಾಂತಮುದ್ರಿಜೇ ।
ದದ್ಯಾಚ್ಚ ವಿದ್ಯಾಂ ಸಕಲಾನುಭೇದ್ಯಾಂ
ಪಂಚಾಕ್ಷರೀಂ ಮೇ ಭವರೋಗವೈದ್ಯಾಂ ॥೨೫॥

---

ಮಂತ್ರೋಪದೇಶಕ್ಕೆ ಔಚಿತ್ಯಾದಿಗಳನ್ನು ಅಷ್ಟಾಗಿ ಗಮನಿಸಬೇಕಾಗಿಲ್ಲವಾದರೂ ಈ ಮಂತ್ರವನ್ನು ದುಷ್ಟರಾದ ಅಪಾತ್ರರಲ್ಲಿ, ಫಲವಿಮುಖರಾದವರಲ್ಲಿ, ಶ್ರದ್ಧೆಯಿಲ್ಲದವರಲ್ಲಿ ದುಡುಕಿ ಉಪದೇಶಿಸಬಾರದು. ಏತಕ್ಕೆಂದರೆ ಇದು ಮಹತ್ತಾದ ಫಲವುಳ್ಳದ್ದು. ಬಹಳ ಪವಿತ್ರವಾದುದು. ॥೧೯-೨೦-೨೧॥

ಈ ರೀತಿ ಸಾಕ್ಷಾತ್ತ್ರಿಶೂಲಪಾಣಿಯಾದ ಮಹಾದೇವನು ಮಹೇಶ್ವರಿಗೆ ಪ್ರಪಂಚದ ಹಿತಕ್ಕೋಸ್ಕರ ಪಂಚಾಕ್ಷರಮಂತ್ರವಿಧಿಜ್ಞಾನವನ್ನು ವಿಸ್ತಾರವಾಗಿ ಹೇಳಿದನು. ಇದನ್ನು ಸಮಾಧಾನಚಿತ್ತದಿಂದ ಹೇಳುವ ವಿದ್ವಾಂಸನೂ ಕೇಳುವ ಭಕ್ತವರ್ಯನೂ ಐಹಿಕವಾದ ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಇತರ ಜನಗಳಿಗೆ ಸಾಧ್ಯವಲ್ಲದ ಪರಮಪದವನ್ನೈದುವನು. ಇದರಲ್ಲಿ ಸಂಶಯವಿಲ್ಲ. ಹೀಗೆಂದು ಸ್ಕಂದಸ್ವಾಮಿಯು ಶಿವೋಕ್ತಿಯನ್ನೇ ಮುಂದುವರಿಸುತ್ತಾ ಗುರುಶಿಷ್ಯರ ಸ್ವರೂಪವನ್ನು ಈ ರೀತಿ ಅನುವಾದಮಾಡಿದನು. ॥೨೨-೨೩-೨೪॥

ಪಾರ್ವತಿಯೇ ಕೇಳು, ಈ ಮಂತ್ರೋಪದೇಶವನ್ನು ಪಡೆಯಬೇಕೆಂಬ ಕುತೂಹಲವುಳ್ಳವನು ವಿಧಿಪ್ರಕಾರವಾಗಿ ಬಹುಕಾಲ ಗುರುವಿನ ಬಳಿ ವಾಸಮಾಡಿಕೊಂಡು ಅವರ ಶುಶ್ರೂಷೆಯಲ್ಲಿ ನಿರತನಾಗಿರಬೇಕು. ಹಾಗೆ ಶಾಂತನೂ, ಜಿತೇಂದ್ರಿಯನೂ, ಸಂಸಾರತಾಪತಪ್ತನೂ ಆಗಿರುವ ಶಿಷ್ಯನನ್ನು ಗುರುವು ನಾನಾರೀತಿ ಪರೀಕ್ಷೆ

ಗುರುಂ ಪರೀಕ್ಷೇತ ವಿಶೇಷ್ಯ ಶಿಷ್ಯೋ
ಭವೈಕಶೋಷಾಯ ವಿಶೋಷ್ಯಮಾನಸಂ ।
ಶಾಂತಂ ಚ ದಾಂತಂ ಜಿತಮಾನಮೋಹ-
ಮದಾದ್ಯವಿದ್ಯಾಚ್ಛಿದಮೀಕ್ಷಣೇನ ॥೨೬॥

ಭಸ್ಮತ್ರಿಪುಂಡ್ರಪರಿಮಂಡಿತಫಾಲದೇಶಂ
ಉಗ್ರಾರ್ಚಕಾನುಗ್ರಹನಿಗ್ರಹೇರತಂ ।
ಮೈತ್ರಂ ತ್ರಿನೇತ್ರಪದಪಂಕಜಭಾವಪಾತ್ರಂ
ತ್ರಾತಾರಮತ್ರ ಚ ಪರತ್ರ ಚ ತಂ ಪ್ರಪದ್ಯೇತ್ ॥೨೭॥

ಸ ಏವ ಪಶುಪಾಶಹೃದ್ಭವತಿ ಭಕ್ತಮುಕ್ತಿಪ್ರದೋ
ಭವೇತ ಕಿಲ ಶಕ್ತಿತೋ ವಿಮಲಪಾತಭಾವಾಚ್ಛಿವೇ ।

---

ಮಾಡಿ ಅಭೇದ್ಯವೂ, ಭವರೋಗಕ್ಕೆ ವೈದ್ಯಪ್ರಾಯವೂ ಆಗಿರುವ ಈ ನನ್ನ ಪವಿತ್ರ ವಾದ ಪಂಚಾಕ್ಷರೀವಿದ್ಯೆಯನ್ನು ಅವನಿಗೆ ಉಪದೇಶದಿಂದ ದಾನಮಾಡಬೇಕು.॥೨೫॥

ಶಿಷ್ಯನೂ ಸಹ ಈ ಸಾಂಸಾರಿಕವಾದ ತಾಪವನ್ನು ಮುಖ್ಯವಾಗಿ ಹೋಗಲಾಡಿಸುವ ಮನಸ್ಸುಳ್ಳವನಾಗಿಯೂ ಶಮದಮಾದಿಗಳಿಂದ ಕೂಡಿ ಜಿತೇಂದ್ರಿಯನಾಗಿಯೂ ಮಾನ, ಮೋಹ, ಮದ ಮುಂತಾದ ಅವಿದ್ಯೆಗಳನ್ನು ದರ್ಶನ ಮಾತ್ರದಿಂದ ಜಯಿಸಿರುವವನಾಗಿಯೂ ಇರುವ ಸದ್ಗುರುವನ್ನು ವಿಶೇಷಗುಣಗಳಿಂದ ತಿಳಿದು ಅವನಿಂದ ಈ ಮಂತ್ರೋಪದೇಶವನ್ನು ಪಡೆಯಬೇಕು. ॥೨೬॥

ಈ ಮಂತ್ರೋಪದೇಶಮಾಡುವ ಸದ್ಗುರುವು ಭಸ್ಮತ್ರಿಪುಂಡ್ರಗಳಿಂದಲಂಕೃತವಾದ ಹಣೆಯುಳ್ಳವನಾಗಿರಬೇಕು. ಸರ್ವದಾ ಶಿವಪೂಜಕನೂ, ದುಷ್ಟನಿಗ್ರಹ ಮತ್ತು ಶಿಷ್ಟಾನುಗ್ರಹಗಳನ್ನೆಸಗುವುದರಲ್ಲಿ ಆಸಕ್ತನೂ, ಮೈತ್ರಿಯಿಂದ ಮಹೇಶ್ವರ ಪಾದಕಮಲಭಕ್ತಿಗೆ ಪಾತ್ರನೂ, ಇಹಪರಗಳೆರಡರಲ್ಲೂ ಭಕ್ತರಿಗೆ ರಕ್ಷಣೆಯನ್ನುಂಟು ಮಾಡುವವನೂ ಆದ ಗುರುವೇ ಈ ಮಂತ್ರೋಪದೇಶಕ್ಕೆ ಅರ್ಹನು. ಅಂತಹ ಗುರುವನ್ನು ಶಿಷ್ಯನು ಹುಡುಕಬೇಕು. ॥೨೭॥

ದೇವಿಯೇ ಕೇಳು! ಅಂತಹ ಗುರುವೇ ಅಜ್ಞಾನಿಗಳ ಸಾಂಸಾರಿಕಪಾಶ ವನ್ನು ತೊಲಗಿಸಿ, ಭಕ್ತನಿಗೆ ಮುಕ್ತಿಯನ್ನುಂಟುಮಾಡುವವನು ಆದರೆ ಪರಿಶುದ್ಧ ವಾದ ನಿನಯದಿಂದ ಶಕ್ತಿಗನುಗುಣವಾಗಿ ಶಿಷ್ಯನಾದವನು ಆ ಗುರುವಿನಲ್ಲಿ ಭಕ್ತಿ

ನ ತಂ ಗುರುಜನಂ ದ್ರುಹೇತ್ಸಕಲಕಾಯಕರ್ಮೇಂದ್ರಿಯೈ-
ರ್ವಿಶಿಷ್ಯಮನಸಾಪಿ ವಾ ವಿಧಿರಮುಷ್ಯ ಶಿಷ್ಯಸ್ಯ ಹಿ ॥೨೮॥

ಯಸ್ಯ ಸ್ಯಾನ್ಮಯಿ ಭಕ್ತಿರದ್ರಿವರಜೇ ತಸ್ಮಿನ್ಭವೇತ್ಸಾ ಗುರೌ
ತಸ್ಯಾಯಂ ಮನುರೇವ ಮುಕ್ತಿಪರಮಾನಂದಂ ದಿಶೇತ್ಕೇವಲಂ ।
ವೇದಾನಂತರಹಸ್ಯಮಸ್ಯ ಹೃದಿಗಂ ತಸ್ಯಾಸ್ಯಪದ್ಮೇ ವಸೇ-
ನ್ನಿತ್ಯಂ ಯಸ್ಯ ಮನೋಃ ಪ್ರಭಾವಭವನಂ ತಸ್ಯಾರ್ಥ ಏವಂ ಸ್ಫುರೇತ್
॥೨೯॥

ನಾಧನ್ಯಃ ಕಿಲ ಸಂಶ್ರಯೇತ ಭುವನೇಪಂಚಾಕ್ಷರಂ ಕೇವಲಂ
ಮಾನ್ಯಸ್ತ್ವನ್ಯಮನುಂ ವಿಹಾಯ ಜಪಕೃತ್ತಸ್ಯಾನ್ಯಧರ್ಮೈಶ್ಚ ಕಿಂ ।
ಕಿಂ ವರ್ಣಾಶ್ರಮಧರ್ಮಸಂಭವಫಲೈಃ ಸಂನ್ಯಾಸವಿನ್ಯಾಸತೋ
ಸ್ತೀರ್ಥಸ್ನಾನಪ್ರಪ್ಲುತವಿಗ್ರಹಾಗ್ರಹಪರೈಸ್ತೀರ್ಥಾಟನೇನಾಪಿ ಕಿಂ ॥೩೦॥

---

ತೋರಿಸಬೇಕು. ಶರೀರ, ಕಾರ್ಯ, ಮತ್ತು ಮನಸ್ಸು, ಇಂದ್ರಿಯ ಈ ರೂಪವಾದ ಯಾವ ರೀತಿಯಿಂದಲೂ ಆ ಗುರುಗಳಿಗೆ ದ್ರೋಹಮಾಡಬಾರದು. ದೇವಭಾವನೆಯಿಂದಲೇ ಗುರುವನ್ನು ಸೇವಿಸಬೇಕು. ಹೀಗೆ ಮಂತ್ರಸಿದ್ಧಿಪಡೆಯುವ ಶಿಷ್ಯನು ವಿಧಿವತ್ತಾಗಿ ಗುರುವನ್ನು ಮೊದಲು ಸೇವಿಸಬೇಕು. ॥೨೮॥

ಪರ್ವತರಾಜಕುಮಾರಿಯೇ ! ನನ್ನಲ್ಲಿ ಯಾರಿಗೆ ವಿಶೇಷ ಭಕ್ತಿಯಿರುವುದೋ ಅವನಿಗೆ ಸದ್ಗುರುವಿನಲ್ಲಿಯೂ ಭಕ್ತಿಯುಂಟಾಗುವುದು. ಅಂತಹವನಿಗೇ ಈ ಪಂಚಾಕ್ಷರಮಂತ್ರವು ಮುಕ್ತಿಯುಪರಮಾನಂದಸುಖವನ್ನು ಸಂಶಯವಿಲ್ಲದೆ ಕೊಡುವುದು. ಸಮಸ್ತವೇದಗಳ ಒಳತಿರುಳಿನಂತಿರುವ ಈ ಪಂಚಾಕ್ಷರವು ಅಂತಹವನ ಹೃದಯದಲ್ಲಿಯೇ ನೆಲಸಿ, ಅವನ ಮುಖಕಮಲದಲ್ಲಿ ಸರ್ವದಾ ವಾಸಮಾಡುವುದು. ನಿಶ್ಚಯವೂ ಯಾವನಿಗೆ ಈ ಮಂತ್ರದ ಪ್ರಭಾವವು ಮುಂದಟ್ಟಾಗುವುದೋ ಅವನಿಗೆ ಇದರ ನೈಜವಾದ ಮಂತ್ರಾರ್ಥವು ಹೊಳೆದು ತನ್ಮೂಲಕ ಸಕಲಸಿದ್ಧಿಯೂ ಪ್ರಾಪ್ತವಾಗುವುದು. ॥೨೯॥

ಅಧಮನಾದವನು ಅಂದರೆ ಮೇಲೆಹೇಳಿದಂತೆ ನಡೆಯದವನು ಲೋಕದಲ್ಲಿ ಈ ಪಂಚಾಕ್ಷರಮಂತ್ರವನ್ನು ಮುಖ್ಯವಾಗಿ ಆಶ್ರಯಿಸಬಾರದು. ಆದರೆ ಸುಕೃತವಶದಿಂದ ಆಸ್ತಿಕನೆನಿಸಿ ಮಾನ್ಯನಾದವನು ಇತರ ಮಂತ್ರಗಳನ್ನು ಬಿಟ್ಟು ಸರ್ವದಾ

ತ್ಯಕ್ತ್ವಾ ಪಂಚಾಕ್ಷರಂ ಮೇ ಕ್ಷರಮನುವಿಭವಂ ಭಾವಯಂತೋಽಪ್ಯಭವ್ಯಾ
ಆಧಿವ್ಯಾಧ್ಯಾದಿವಿದ್ಧಾಃ ಸ್ದೃಢತರನಿಯಮೈರ್ಯಾಮ್ಯಧಾಮೇಷು ಸಕ್ತಾಃ ।
ಬುದ್ಧಾ ಬೌದ್ಧಾಸ್ತ ಏವಕ್ಷಿತಿಸುರನಿಕರಾಭಾಸುರಾಚಾರಚೌರಾಃ
ಘೋರಾ ದುಃಖಾದಿರುದ್ಧಾ ಕ್ಷಿತಿಧರರಮಣಂ ಯಾಂತಿ ನೋ ಧಾಮಮೀಶಿ ॥೩೧॥
ಜಾತ್ಯಂಧೋ ನಹಿ ವೇತ್ತಿ ರತ್ನವಿಷಯಂ ಷಂಡಃ ಕುತಃ ಸ್ತ್ರೀಸುಖಂ
ಕನ್ಯಾ ಸತ್ಪುರುಷೇಣ ಸೌಖ್ಯಪದವೀಂ ವಂಧ್ಯಾಪ್ರಸೂತಿಕ್ರಿಯಾಂ ।
ಕಾಕೋ ಹಂಸಗತಿಂ ಖರೋ ಮೃದುರವಂ ಸೌಖ್ಯಂ ದರಿದ್ರೋ ಯಥಾ
ಶ್ವಾನಃ ಸಿಂಹಪರಾಕ್ರಮಂ ಭುವಿತಥಾ ನೋ ಜಾನತೇ ಮನ್ಮನುಂ ॥೩೨॥

---

ಇದನ್ನೇ ಜಪಮಾಡಬೇಕು. ಈ ಮಂತ್ರಜಪಮಾಡುವ ಧನ್ಯನಿಗೆ ಇತರ ಧರ್ಮ ಕಾರ್ಯಗಳು, ಅರಣ್ಯವಾಸ ಅಥವಾ ಬ್ರಹ್ಮಚರ್ಯಾದಿ ಆಶ್ರಮಧರ್ಮಗಳಫಲಗಳಿಂದೇನೂ ಹೆಚ್ಚು ಫಲವಾಗಲಾರದು. ಒಂದುವೇಳೆ ಸಂನ್ಯಾಸಸ್ವೀಕಾರಮಾಡಿದರೂ ಗಂಗಾನದಿ ಯಲ್ಲಿ ಮಿಂದು ವಿಗ್ರಹಾರಾಧಕರಾಗಿ ತೀರ್ಥಯಾತ್ರೆಮಾಡುವುದರಿಂದಲೂ ವಿಶೇಷ ವಾದ ಯಾವಪ್ರಯೋಜನವೂ ಅವನಿಗೆ ಲಭಿಸಲಾರದು. ॥೩೦॥

ದೇವಿ ! ಇಂತಹ ನನ್ನ ಪಂಚಾಕ್ಷರಮಂತ್ರವನ್ನು ಜಪಮಾಡದೇ ಚಂಚಲ ವಾದ ವೈಭವವುಳ್ಳ ಇತರಮಂತ್ರಗಳನ್ನು ಧ್ಯಾನಿಸುವವರು ನಿಜವಾಗಿಯೂ ಅಧನ್ಯ ರೆನಿಸುವರು. ಅವರು ಸರ್ವದಾ ಮನೋವ್ಯಥೆ, ರೋಗ, ಮುಂತಾದವುಗಳಿಂದ ಯುಕ್ತರಾಗಿ ಅತಿದೃಢನಿಯಮಾಸಕ್ತರಾಗಿದ್ದರೂ ಯಮನಲೋಕಗಳಲ್ಲಿ ಬಿದ್ದು ದುಃಖಕ್ಕೀಡಾಗುವರು. ಅಂದರೆ ಅಂತಹವರಿಗೆ ಎಂದಿಗೂ ನರಕವು ತಪ್ಪಲಾರದು. ಅನಂತರ ಅವರೇ ಬುದ್ಧಮತಾನುಯಾಯಿಗಳಾದ ಬೌದ್ಧರೆನಿಸಿ ಬ್ರಾಹ್ಮಣರ ಆಚಾರಸಮೂಹವನ್ನಪಹಾಸ್ಯಮಾಡುತ್ತಾ, ಭಯಂಕರರಾಗಿ ದುಃಖಾದಿಗಳಿಂದ ಸಂಕಟಪಡುತ್ತಾ ನರಕದಲ್ಲಿ ಕೊಳೆಯುವರು. ಅಂತಹವರಿಗೆ ಎಂದಿಗೂ ಪರ್ವತ ಶ್ರೇಷ್ಠವೆನಿಸಿದ ಕೈಲಾಸವಾಸವು ಲಭಿಸಲಾರದು. ॥೩೧॥

ಹುಟ್ಟುಕುರುಡನು ರತ್ನದ ಸೊಬಗನ್ನು ಹೇಗೆ ಅರಿಯಲಾರನೋ, ನಪುಂಸ ಕನಿಗೆ ಸ್ತ್ರೀಸುಖದ ಪರಿಚಯವೇ ಹೇಗೆ ಇರುವುದಿಲ್ಲವೋ, ಕನ್ಯೆಯು ಸತ್ಪುರುಷ ನಿಂದ ಅಂದರೆ ಶಮದಮಾದಿ ಗುಣಗಳಿಂದ ವೈರಾಗ್ಯವನ್ನು ಪಡೆದವನಿಂದ ಯಾವ ಸುಖವನ್ನೂ ಹೇಗೆ ಪಡೆಯಲಾರಳೋ, ಬಂಜೆಯು ಪ್ರಸವವೇದನೆಯನ್ನು ಹೇಗೆ

ಕೇದಾರೇ ತು ಹಿಮಾದ್ರಿಶೇಖರಭವಾಸಂಗೇ ತಥಾ ಸಾಗರೇ
ವಾರಾಣಸ್ಯಾಂ ಪ್ರಯಾಗೇ ಕುರುವರಸದನೇ ಪುಷ್ಕರೇ ನೈಮಿಷೇ ವಾ ।
ಓಂಕಾರೇ ಭೃಗುತುಂಗಚಾಮರ ಮಹಾಕಾಲೇ ತಥಾ ತ್ರ್ಯಂಬಕೇ
ಶ್ರೀರುದ್ರೋತ್ತಮಕೋಟಿಕೇ ಮನು ಶಿವೇ ಪಂಚಾಕ್ಷರಾವೃತ್ತಿಭಾಕ್ ॥೩೩॥

ಶ್ರೀಕಂಠೇ ಗಜಕಾನನೇ ದ್ರುತಿವನೇ ಜಪ್ಯೇ ಚ ಕುಂಭೀಶ್ವರೇ
ಶ್ವೇತಾಖ್ಯೇ ವಿಪಿನೇ ತಥಾಽರ್ಜುನವನೇ ವೃದ್ಧಾಚಲೇ ಗೋನಗೇ ।
ಕಾಂಚ್ಯಾಂ ಶೋಣಾಚಲೇ ವಾ ಶ್ರುತಿವನ ಕಮಲೇ ಕಾಲಹಸ್ತ್ಯಾಂ ತಥಾಭ್ರೇ
ಹಾಲಾಸ್ಯೇ ವರಸಿಂಧುಕೋಣಗೇ ಶಿವೇ ರಾಮೇಶ್ವರೇ ಜಾಪ್ಯತಃ ॥೩೪॥

ತತ್ರೈವಂ ಯದಿ ಚಂದ್ರಚೂಡಚರಣಾಂಭೋಜಾರ್ಚಕೋ ಭಸ್ಮಧೃಕ್
ರುದ್ರಾಕ್ಷಾಮಲದೇಹಯುಕ್ತಹೃದಯಃ ಪಂಚಾಕ್ಷರಾಷ್ಟಾ ಶತಂ ।
ಜಪ್ತ್ವಾ ದೇವಮಥೋ ಪ್ರದಕ್ಷಿಣನಮಸ್ಕಾರೈಶ್ಚ ಮುಕ್ತಾಘಕಃ ॥೩೫॥

---

ಅನುಸರಿಸಲಾರದೋ, ಕತ್ತೆಯು ಮೃದುಧ್ವನಿಯನ್ನೂ, ಬಡವನು ಸೌಖ್ಯವನ್ನೂ, ನಾಯಿಯು ಸಿಂಹದ ಪರಾಕ್ರಮವನ್ನೂ ಹೇಗೆ ಪಡೆಯಲಾರವೋ ಹಾಗೆ ನನ್ನ ಮಂತ್ರವನ್ನು ಅಜ್ಞಾನಿಗಳಾದ ಜನಗಳು ಎಂದಿಗೂ ತಿಳಿಯಲಾರರು. ॥೩೨॥

ಹಿಮಾಲಯದಲ್ಲಿರುವ ಕೇದಾರಕ್ಷೇತ್ರ, ಗಂಗಾನದಿಯ ದಡ, ಗಂಗಾ ಸಾಗರ ಸಂಗಮ, ಕಾಶಿ, ಪ್ರಯಾಗ, ಕುರುಕ್ಷೇತ್ರ, ಪುಷ್ಕರಕ್ಷೇತ್ರ, ನೈಮಿಷಾರಣ್ಯ, ಓಂಕಾರ ಕ್ಷೇತ್ರ, ಭೃಗು, ತುಂಗ, ಚಾಮರ, ಮಹಾಕಾಲ, ತ್ರ್ಯಂಬಕ ಮತ್ತು ಶ್ರೀರುದ್ರೋ ತ್ತಮಕೋಟಿಕ್ಷೇತ್ರಗಳಲ್ಲಿ ನನ್ನ ಈ ಪಂಚಾಕ್ಷರಮಂತ್ರವನ್ನು ಧನ್ಯನಾದವನು ಆವೃತ್ತಿಮಾಡುತ್ತಾ ಜಪಿಸುತ್ತಾನೆ. ॥೩೩॥

ಶ್ರೀಕಂಠಕ್ಷೇತ್ರ, ಗಜಾರಣ್ಯಕ್ಷೇತ್ರ. ದ್ರುತಿವನ, ಕುಂಭೀಶ್ವರಕ್ಷೇತ್ರ, ಶ್ವೇತಾರಣ್ಯ, ಅರ್ಜುನವನ, ವೃದ್ಧಾಚಲ, ವೃಷಾಚಲ, ಕಾಂಚೀ, ಶೋಣಾಚಲ, ವೇದಾರಣ್ಯ, ಕಮಲಾಲಯ, ಕಾಲಹಸ್ತೀ, ಅಭ್ರ, ಹಾಲಾಸ್ಯ, ಶ್ರೇಷ್ಠವಾದ ಸಮುದ್ರತೀರ ಮತ್ತು ರಾಮೇಶ್ವರ ಇಂತಹ ಶಿವಕ್ಷೇತ್ರಗಳಲ್ಲಿ ಜಪಮಾಡುವುದೂ ಶ್ರೇಷ್ಠವೆನಿಸುವುದು. ॥೩೪॥

ಆ ಕ್ಷೇತ್ರಗಳಲ್ಲಿ ಈರೀತಿ ಚಂದ್ರಶೇಖರನ ಪಾದಕಮಲಾರ್ಚನನಿರತನಾಗಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಧಾರಣೆಯಿಂದ ಪವಿತ್ರವಾದ ದೇಹವಿಶಿಷ್ಟ

ಗಂಗಾಂ ತುಂಗಾಂ ಚ ಕೃಷ್ಣಾಂ ಕಮಲಜವನಿತಾಂ ನರ್ಮದಾಂ
ಬಾಹುದಾಂತಾಂ
ತಾಂಪೀಂ ವೇಣಾಂ ಚ ನೀರಾಂ ಭವಿಭವವಹಿನೀ ಗೋದಕಾಸಹ್ಯಜಾತಾಂ ।
ಪಂಪಾಂ ಕಂಪಾಂ ಚ ತಾಮ್ರಾಂ ಶಿವಗಿರಿತನಯಾ ನಾಮ್ನಿಕಾಸೀಗರಾಣಾಂ
ತೀರ್ಥೇ ಸ್ನಾನಂ ತಥಾಸಾಂ ತಟಗತ ಶಿವಹೃದ್ದಿವ್ಯಪಂಚಾಕ್ಷರಾಸ್ಯಃ ॥೩೬॥

ಭವೇತ ಭಸಿತಾಂಗತೋ ವಿಮಲಪುಣ್ಯ ರುದ್ರಾಕ್ಷಭಾಕ್
ಶತಶ್ರುತಿಶಿರೋಗತಂ ಪರಮರುದ್ರಮಧ್ಯಸ್ಥಿತಂ ।
ಷಡಕ್ಷರಜಪಾದರೋ ಭವತಿ ಭಾಗ್ಯಪೂರ್ಣೋ ಜನಃ
ಶತಂ ತ್ರಿಶತಮಂಬಿಕೇ ಜಪತಿ ಪಾಪತೂಲಾನಲಂ ॥೩೭॥

---

ಹೃದಯನಾಗಿ ನೂರೆಂಟು ಅಥವಾ ಎಂಟುನೂರು ಪಂಚಾಕ್ಷರಮಂತ್ರಜಪಮಾಡಿ ಆ ಮಹಾದೇವನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನೆಸಗುವವನು ನಿಜವಾಗಿಯೂ ಪಾಪ ರಹಿತನಾಗುವನು. ॥೩೫॥

ಗಂಗಾ, ತುಂಗಾ, ಕೃಷ್ಣಾ, ಬ್ರಹ್ಮಪುತ್ರ, ನರ್ಮದಾ, ಬಾಹುದಾ, ತಾಂಪೀ ವೇಣಾ, ಭವಾನೀ, ಶಿವಕ್ಷೇತ್ರದಲ್ಲಿ ಪ್ರವಹಿಸುವ ನದೀ, ಗೋದಾವರೀ, ಕಾವೇರೀ, ಪಂಪಾ, ಕಂಪಾ, ತಾಮ್ರಾ, ಶಿವಗಂಗಾ, ಆಹ್ನಿಕಾ, ಸೀಗರ ಮುಂತಾದ ನದಿ ಮತ್ತು ಶಿವಕ್ಷೇತ್ರಗಳು, ಅಲ್ಲದೇ ಆಯಾ ತೀರ್ಥಗಳಲ್ಲಿ ಸ್ನಾನಮಾಡಿ, ಅವುಗಳ ದಡದಲ್ಲಿ ಶಿವನಲ್ಲಿ ನೆಲಸಿದ ಹೃದಯನಾಗಿ ದಿವ್ಯವಾದ ಪಂಚಾಕ್ಷರಮಂತ್ರವನ್ನು ಜಪಮಾಡ ಬೇಕು. ॥೩೬॥

ಈ ಕ್ಷೇತ್ರಾದಿಗಳಲ್ಲಿ ಶುಭ್ರವಾದ ಭಸ್ಮತ್ರಿಪುಂಡ್ರಧಾರಿಯಾಗಿ, ಭಸ್ಮಲೇಪನ ಮಾಡಿಕೊಂಡು, ನಿರ್ಮಲವಾದ ಪುಣ್ಯಸ್ವರೂಪವೆನಿಸಿದ ರುದ್ರಾಕ್ಷಗಳನ್ನು ಧರಿಸಿ, ಸಕಲ ಉಪನಿಷತ್ತುಗಳಿಗೂ ಶಿರಸ್ಸ್ಥಾನೀಯವಾದ ರುದ್ರಮಂತ್ರದ ಮಧ್ಯದಲ್ಲಿರುವ ಷಡಕ್ಷರಮಂತ್ರವನ್ನು ಜಪಮಾಡಲು ಭಾಗ್ಯವಂತನಾದ ಮಾನವನಿಗೆ ಮಾತ್ರ ಆದರವುಂಟಾಗುವುದು. ಅಂಬಿಕೆ! ಅಂತಹವನು ಪಾಪಗಳೆಂಬ ಹತ್ತಿಗೆ ಅಗ್ನಿ ಯಂತಿರುವ ಈ ಮಂತ್ರವನ್ನು ನೂರು ಅಥವಾ ಮುನ್ನೂರು ಸಂಖ್ಯೆಯಲ್ಲಿ ತಪ್ಪದೆ ಜಪಮಾಡಬೇಕು. ॥೩೭॥

ದ್ವಿಜೋಽಂತ್ಯಜವರೋಽಪಿ ವಾ ಪರಮಸಂಕರಸ್ತಸ್ಕರೋ
ಮಯಸ್ಕರಪದಾರ್ಚಕೋ ಯದಿ ಭವೇತ್ಸಧನ್ಯೋ ಜನಃ ॥೩೮॥

ಜಪನ್ನಕ್ತಂ ಭಕ್ತಂ ಫಲಕುಲಮಥಾಶ್ನನ್ದ್ವಿಜವರೋ
ಭಜೇಚ್ಛಕ್ತ್ಯೋ ರಿಕ್ತೋಽಪಿ ಚ ಸಮುಕ್ತೋಽಪಿ ಭವತಿ ।
ಮಮ ಕ್ಷೇತ್ರೇಷ್ವೀಶೇ ಸತಿ ಶರದಂಚೈಕಮಧುನಾ
ಮನುಂ ಧನ್ಯೋ ಮಾನ್ಯೋ ಭವತಿ ಕಿಲ ಸಾಮಾನ್ಯಮನುಭಾಕ್॥೩೯॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಶ್ರೀಮತ್ಪಂಚಾಕ್ಷರೀ
ಮಾಹಾತ್ಮ್ಯಕಥನಂ ನಾಮ ಚತ್ವಾರಿಂಶೋಽಧ್ಯಾಯಃ

---

ಶಿವನ ಪಾದಪೂಜೆಮಾಡುವ ಭಕ್ತನು ಬ್ರಾಹ್ಮಣನಾಗಲಿ, ಅಂತ್ಯಜನಾಗಲಿ, ಪರಮಸಂಕರಜಾತಿಯಲ್ಲಿ ಹುಟ್ಟಿದವನಾಗಲಿ, ಕಳ್ಳನಾಗಲಿ ಇವರಲ್ಲಿ ಯಾರೇ ಆದರೂ ಅವರು ಧನ್ಯರೇ ಎನಿಸುವರು. ಆದ್ದರಿಂದ ನನ್ನ ಭಕ್ತರಲ್ಲಿ ಎಂದಿಗೂ ಜಾತಿಕೃತ ವಾದ ತಾರತಮ್ಯವನ್ನಿಡಬಾರದು. ॥೩೮॥

ಈಶ್ವರಿ, ನನ್ನ ಕ್ಷೇತ್ರಗಳಲ್ಲಿ ಈ ಷಡಕ್ಷರ ಅಥವಾ ಪಂಚಾಕ್ಷರ ಮಂತ್ರಗಳನ್ನು ಜಪಿಸುತ್ತಾ ರಾತ್ರಿವೇಳೆ ಹಣ್ಣುಹಂಪಲುಗಳನ್ನು ತಿಂದುಕೊಂಡು ನಿಯಮದಿಂದ ಶಕ್ತ್ಯನುಸಾರ ಭಜನೆಮಾಡುವ ಬ್ರಾಹ್ಮಣೋತ್ತಮನು ಬಡವನಾದರೂ ಮುಕ್ತ ನಾಗುವನು. ದೇವಿ, ಒಂದು ವರ್ಷಕಾಲ ಈ ನನ್ನ ಮಂತ್ರವನ್ನು ಸಾಮಾನ್ಯವಾಗಿ ಜಪಮಾಡುವ ಮಾನವನು ಧನ್ಯನೂ, ಮಾನ್ಯನೂ ಆಗುವನಲ್ಲದೇ ಅವನು ನನ್ನ ಭಕ್ತವರ್ಯನೆನಿಸುವನು, ಎಂದು ಶಿವನು ಪಾರ್ವತಿಗೆ ಹೇಳಿದನು. ॥೩೯॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಹತ್ತನೆಯ ಅಂಶದ
ಪೂರ್ವಾರ್ಧದಲ್ಲಿ ಶ್ರೀಮತ್ಪಂಚಾಕ್ಷರೀಮಂತ್ರದ ಮಾಹಾತ್ಮ್ಯವರ್ಣನೆಯೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಏಕಚತ್ವಾರಿಂಶೋಽಧ್ಯಾಯಃ

॥ ಮುನಿರುವಾಚ ॥

ನಮಸ್ತೇ ತಾರಕಾರಾತೇ ಶ್ರುತಃ ಪಂಚಾಕ್ಷರೋದ್ಭವಃ ।
ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಶಿವವಿದ್ಯಾಶ್ರವಾದಹಂ ॥೧॥

ಕೇಷು ಸ್ಥಾನೇಷು ಭಗವಾನ್ಪೂಜನೀಯೋ ಮಹೇಶ್ವರಃ ।
ತತ್ರ ಸಂಪೂಜಿತೋ ದೇವಃ ಕಥಂ ತುಷ್ಯತಿ ಮೇ ವದ ॥೨॥

ಸಂವಿಧಾನಂ ರಹಸ್ಯಂ ವೈ ಯದಿ ಸ್ಯಾನ್ಮಯಿ ತೇ ದಯಾ ॥೩॥

---

## ನಲವತ್ತೊಂದನೆಯ ಅಧ್ಯಾಯ

ಶಿವಪಂಚಾಕ್ಷರಮಂತ್ರಮಹಿಮೆ, ಸ್ವರೂಪ, ಅದರ ಜಪವಿಧಾನ ಇವುಗಳನ್ನೆಲ್ಲಾ ಪೂರ್ಣವಾಗಿ ತಿಳಿದುಕೊಂಡ ಜೈಗೀಷವ್ಯನು ಪುನಃ ಷಣ್ಮುಖನನ್ನು ಕುರಿತು "ತಾರಕಾಸುರ ಶತ್ರುವಾದ ಕುಮಾರನೆ, ನಿನಗೆ ನಮಸ್ಕಾರ ಮಾಡುತ್ತೇನೆ. ಸ್ವಾಮಿ, ಪಂಚಾಕ್ಷರ ಮಂತ್ರದ ಉತ್ಪತ್ತಿಯು ಈಗ ನನಗೆ ತಿಳಿದಂತಾಯಿತು. ನಿನ್ನಿಂದ ಶಿವವಿದ್ಯಾಶ್ರವಣಮಾಡಿ ನಾನು ಧನ್ಯನೂ, ಕೃತಕೃತ್ಯನೂ ಆಗಿರುವೆನು. ಸ್ಕಂದದೇವನೇ, ಯಾವ ಯಾವ ಸ್ಥಳಗಳಲ್ಲಿ ಭಗವಂತನಾದ ಮಹೇಶ್ವರನನ್ನು ಭಕ್ತಿಯಿಂದ ವಿಶೇಷವಾಗಿ ಪೂಜೆಮಾಡಬೇಕು ? ಎಲ್ಲಿ ಪೂಜಿಸಿದರೆ ಮಹಾದೇವನು ಕ್ಷಿಪ್ರದಲ್ಲಿ ಸಂತುಷ್ಟನಾಗುವನು ? ಅದರ ರೀತಿಯು ಯಾವುದು ? ಅದರ ವಿಧಾನವನ್ನೂ ರಹಸ್ಯವನ್ನೂ ನನ್ನಲ್ಲಿ ನಿನಗೆ ದಯೆಯಿದ್ದಲ್ಲಿ ತಿಳಿಸು" ಎಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ವಿಶೇಷಾದರದಿಂದ ಪ್ರಶ್ನಿಸಿದನು. ॥೧-೨-೩॥

॥ ಸೂತ ಉವಾಚ ॥

ತದಾ ಮುನೇರ್ವಚಃ ಶ್ರುತ್ವಾ ಧ್ಯಾತ್ವಾ ನತ್ವಾ ಮಹೇಶ್ವರಂ ।
ಜೈಗೀಷವ್ಯಾಯ ಮುನಯೇ ಪ್ರಾಹ ಲಿಂಗಾರ್ಚನಕ್ರಮಂ ॥೪॥

ಸಂಧ್ಯಾನಂ ಮಂತ್ರಯಂತ್ರಾದಿಪ್ರದಕ್ಷಿಣನತೇಃ ಫಲಂ ।
ಕಾಲಾಧಿಕಾರಭೇದಂ ಚ ದ್ವಿಜಾಃ ಶಂಕರಸಂಭವಃ ॥೫॥

॥ ಶ್ರೀ ಸ್ಕಂದ ಉವಾಚ ॥

ಅಥ ತೇ ಸಂಪ್ರವಕ್ಷ್ಯಾಮಿ ಶಿವಲಿಂಗಂ ಸಮಾಸತಃ ।
ಯಸ್ಯ ವಿಜ್ಞಾನಮಾತ್ರೇಣ ವಿಮುಕ್ತೋ ಮಾನವೋ ಭವೇತ್ ॥೬॥

ಶಿವ ಏವ ಸ್ವಯಂ ಲಿಂಗಂ ಲಿಂಗಂ ಗಮನಶಬ್ದತಃ ।
ಲಯನಾತ್ಸರ್ವಜಗತಾಂ ಲಿಂಗಮಿತ್ಯುಚ್ಯತೇ ಮುನೇ ॥೭॥

---

ಓ ವಾಜಶ್ರವಸಾದಿ ಮುನಿಗಳಿರಾ, ಈ ರೀತಿಯಾಗಿ ಪ್ರಶ್ನಿಸಿದ ಜೈಗೀಷವ್ಯ ಮುನಿಯ ಮಾತನ್ನು ಕೇಳಿ ಶಂಕರಸೂನುವಾದ ಸ್ಕಂದನು, ಮಹೇಶ್ವರನಿಗೆ ನಮಸ್ಕರಿಸಿ, ಹಾಗೆಯೇ ಧ್ಯಾನಮಾಡಿ ಶಿವಲಿಂಗಪೂಜಾಕ್ರಮ, ಅದರ ಸಂಪೂರ್ಣಧ್ಯಾನ, ಮಂತ್ರಯಂತ್ರಾದಿಗಳು, ಪ್ರದಕ್ಷಿಣ ನಮಸ್ಕಾರಗಳ ಕ್ರಮ ಮತ್ತು ಅದರ ಫಲ, ಪೂಜಾಯೋಗ್ಯವಾದ ಕಾಲ, ಅಧಿಕಾರ ಇವುಗಳ ಭೇದ ಮುಂತಾದ ವಿಷಯಗಳನ್ನೆಲ್ಲಾ ಜೈಗೀಷವ್ಯಾದಿಗಳಿಗೆ ಇಂತು ಹೇಳಿದನೆಂದು ಸೂತರು ವಾಜಶ್ರವಸಾದಿಗಳಿಗರುಹಿದರು. ॥೪-೫-೬॥

ಜೈಗೀಷವ್ಯಮುನಿಯೇ, ಕೇವಲ ವಿಜ್ಞಾನಮಾತ್ರದಿಂದಲೇ ಮಾನವನು ಮುಕ್ತಿಹೊಂದುವ ಶಿವಲಿಂಗಸ್ವರೂಪವನ್ನು ಈಗ ಸಂಕ್ಷೇಪವಾಗಿ ಹೇಳುವೆನು ಕೇಳು. ಗಮನಾರ್ಥವಿಶಿಷ್ಟವಾದ ಲಿಂಗಶಬ್ದವು ಸಾಕ್ಷಾಚ್ಛಿವಸ್ವರೂಪವನ್ನೇ ಬೋಧಿಸುವುದು. ಸಕಲ ಲೋಕಗಳನ್ನೂ ಲಯಗೊಳಿಸುವುದರಿಂದಲೇ ಲಿಂಗವೆಂದು ಹೇಳಲ್ಪಡುವುದು. ಅಂದರೆ ಸ್ಪಷ್ಟವಾದ ಪ್ರಪಂಚವನ್ನೆಲ್ಲಾ ತನ್ನಲ್ಲಿ ಅಡಗಿಸಿಕೊಳ್ಳುವ ಸಾಮರ್ಥ್ಯವು ಆ ಶಿವಲಿಂಗಕ್ಕಿರುವುದು. ॥೬-೭॥

ಶಿವಶ್ಚೇತನರೂಪೋ ಹಿ ಜಡಂ ಜಗದಿತಿ ಸ್ಥಿತಂ ।
ತೇನ ಚೈತನ್ಯರೂಪೇಣ ಜಡಮೇತದ್ವಿಭಾಸತೇ ॥೮॥

ಶಿವೋ ನೈವ ಜಡಃ ಸಾಕ್ಷಾತ್ಸ್ವಪ್ರಕಾಶೈಕಲಕ್ಷಣಃ ।
ಅತಃ ಸಾಕ್ಷೀ ಶಿವಃ ಸಾಕ್ಷಾತ್ಸ್ವೇಧಾಮ್ನಿ ಸಮುವಸ್ಥಿತಃ ॥೯॥

ಸ್ವಯಂ ಜ್ಯೋತಿರ್ಮಹಾದೇವ ಅಲಿಂಗೋ ಲಿಂಗಸಂಗತಃ ।
ತಸ್ಯ ಭಾಸಾ ಜಗದ್ಭಾತಿ ಜಗಜ್ಜಡಮಿದಂ ಮುನೇ ॥೧೦॥

ಅಲಿಂಗಸ್ಯಾಪಿ ದೇವಸ್ಯ ಲಿಂಗಂ ಶ್ರುತಿಶಿರೋಗತಂ ।
ಯೋಗಿಧ್ಯೇಯಮಿದಂ ಲಿಂಗಂ ಶಂಭೋರ್ನಿಗಮಚೋದಿತಂ ॥೧೧॥

ಆಗಮೋಕ್ತಾನಿ ಲಿಂಗಾನಿ ಭೌತಿಕಾನಿ ಮುನೀಶ್ವರ ।
ಅಯೋಗೀ ಭೌತಿಕೇ ಲಿಂಗೇ ಯೋಗೀ ಸರ್ವತ್ರ ಭಾವಯೇತ್ ॥೧೨॥

---

ಪರಶಿವನು ಚೈತನ್ಯರೂಪಿಯು. ಚರಾಚರಾತ್ಮಕವಾದ ಈ ಜಗತ್ತು ಜಡವಾಗಿದೆ. ಆ ಚೈತನ್ಯರೂಪಿಯಾದ ಶಿವನಿಂದಲೇ ಜಡವಾದ ಈ ಪ್ರಪಂಚವು ಪ್ರಕಾಶಗೊಳ್ಳುತ್ತಿದೆ. ಸ್ವಯಂಪ್ರಕಾಶರೂಪವೇ ಮುಖ್ಯ ಲಕ್ಷಣವುಳ್ಳ ಶಿವನು ಜಡನಲ್ಲ. ಸರ್ವಸಾಕ್ಷಿಯಾದ್ದರಿಂದಲೇ ಶಿವನು ಸರ್ವ ಸ್ಥಾನದಲ್ಲಿಯೂ ನೆಲಸಿ, ಸರ್ವವನ್ನೂ ನೋಡುವನು. ಸ್ವಯಂತೇಜಃಸ್ವರೂಪಿಯಾದ ಮಹಾದೇವನು ಮೊದಲು ಲಿಂಗಾಕೃತಿಯಲ್ಲಿರಲಿಲ್ಲ. ಅಂದರೆ ಅವನಿಗೆ ನಾಮರೂಪಾದಿಗಳಿರಲಿಲ್ಲ. ಉಪಾಧಿವಶದಿಂದ ಅವನು ನಾನಾರೂಪದಲ್ಲಿ ಗೋಚರಿಸಲಾರಂಭಿಸಿದನು. ಜಡರೂಪವಾದ ಈ ಪ್ರಪಂಚದಲ್ಲಿ ಸ್ವಯಂಜ್ಯೋತೀರೂಪನಾದ ಪರಮಾತ್ಮನು ಪ್ರತಿಫಲಿಸಿ, ಜಡಪ್ರಪಂಚವೂ ಚೇತನವಸ್ತುವಿನಂತೆ ತೋರ್ಪಡಿಸುವನು. ॥೮-೯-೧೦॥

ಸ್ವಯಂ ತೇಜೋರೂಪಿಯಾಗಿ, ನಾಮರೂಪಗುಣಾದಿರಹಿತನಾಗಿರುವ ಮಹಾದೇವನಿಗೂ ನಾಮರೂಪಾದ್ಯಾಕಾರಗಳು ವೇದಾಂತಪ್ರತಿಪಾದ್ಯಗಳಾಗಿವೆ. ಹಾಗೆಯೇ ಪರಶಿವನು ಶಿವಲಿಂಗರೂಪದಲ್ಲಿರುವನೆಂದೂ ಶ್ರುತಿಯು ಸಾರುತ್ತಿರುವುದು. ಶಂಭುವಿನ ವೇದಾಂತಪ್ರತಿಪಾದ್ಯವಾದ ಈ ಲಿಂಗರೂಪವು ಯೋಗಿಗಳಿಗೂ ಧ್ಯಾನಾರ್ಹವಾಗಿದೆ. ಅಯ್ಯ ಮುನಿಪುಂಗವನೇ, ಆಗಮಪ್ರತಿಪಾದ್ಯವಾದ ಶಿವಲಿಂಗಗಳು ಪಂಚಭೂತಾತ್ಮಕಗಳೆನಿಸಿ ಭೌತಿಕಲಿಂಗಗಳೆನಿಸುವುವು. ಯೋಗಿಯಲ್ಲದವನು ಈ ಭೌತಿಕಲಿಂಗಗಳಲ್ಲಿ ಶಿವಸ್ವರೂಪವನ್ನು ಅನುಸಂಧಾನಮಾಡಬೇಕು. ಆದರೆ

ಸರ್ವಾವಭಾಸಕೋ ದೇವೋ ಯಥಾ ಹೃದಿ ವಿರಾಜತೇ ।
ತಥಾ ಸರ್ವಗತಃ ಶಂಭುರ್ದೇಶದಿಕ್ಕಾಲವರ್ಜಿತಃ ॥೧೩॥

ಲಿಂಗೇ ಸಂಪೂಜಿತೋ ವಿಪ್ರೈರ್ಭುಕ್ತಿಂ ಮುಕ್ತಿಂ ಪ್ರಯಚ್ಛತಿ ।
ಅಲಿಂಗೋಽಪಿ ಮಹಾದೇವಃ ಶಿವಲಿಂಗೇ ಸಮರ್ಚಿತಃ ॥೧೪॥

ಭಸ್ಮತ್ರಿಪುಂಡ್ರರುದ್ರಾಕ್ಷಧಾರಕೇಣಾರ್ಚಿತಂ ಯದಿ ।
ಲಿಂಗಂ ಶಂಭೋರ್ಮುಕ್ತಿದಾಯಿ ಬಿಲ್ವಪತ್ರಾಕ್ಷತಾರ್ಚಿತಂ ॥೧೫॥

ಭೌತಿಕೇಷ್ವಪಿ ಲಿಂಗೇಷು ಪೂಜನೀಯೋ ಮಹೇಶ್ವರಃ ।
ದೇವ್ಯಾ ಕೈಲಾಸಶಿಖರೇ ಪೃಷ್ಟಸ್ತುಷ್ಟೋ ಮಹೇಶ್ವರಃ ॥೧೬॥

---

ಜ್ಞಾನಿಯಾದ ಯೋಗಿಯು ಮಾತ್ರ ಸರ್ವವ್ಯಾಪಿಯಾದ ಪರಮಾತ್ಮನಿಗೆ ಅಖಂಡ ಪ್ರಪಂಚವೇ ಒಂದು ಲಿಂಗ ಎಂದರಿತು ಪ್ರಪಂಚವೇ ಶಿವಸ್ವರೂಪವೆಂದು ತಿಳಿದು ಸರ್ವದಾ ಶಿವಧ್ಯಾನ ಮಾಡಬೇಕು. ॥೧೧-೧೨॥

ಸಕಲ ಪ್ರಪಂಚವನ್ನೂ ಬೆಳಗಿಸುವ ಮಹಾದೇವನು ಸರ್ವರ ಹೃದಯದಲ್ಲಿಯೂ ವಿರಾಜಿಸುವನು. ಸರ್ವವ್ಯಾಪಿಯಾದ ಶಂಭುವಿನ ಆರಾಧನೆಗೆ ಪ್ರತ್ಯೇಕ ದೇಶ, ದಿಕ್ಕು, ಕಾಲಾದಿನಿಯಮಗಳಿಲ್ಲ. ಆದರೂ, ಧ್ಯೇಯವಸ್ತುವೊಂದನ್ನು ಪ್ರತ್ಯಕ್ಷ ಗೋಚರವಾಗುವಂತೆಮಾಡಿಕೊಡು ಒಂದು ಆಕಾರದಿಂದ ಆರಾಧಿಸುವುದು ಒಂದು ಸುಲಭಮಾರ್ಗ. 'ಅದಕ್ಕಾಗಿ ಲಿಂಗದಲ್ಲಿ ವಿವೇಕಿಗಳಾದವರು ಪರಬ್ರಹ್ಮವಸ್ತುವನ್ನು ಪೂಜಿಸಬೇಕು. ಹಾಗೆ ಪೂಜಿಸುವುದರಿಂದ ಶಿವನು ಭುಕ್ತಿಮುಕ್ತಿಗಳನ್ನು ಆ ಪೂಜಕರಿಗೆ ಕೊಡುವನು. ವಸ್ತುತಃ ತಾನು ಮೊದಲು ಲಿಂಗರೂಪಿಯಲ್ಲದಿದ್ದರೂ ಶಿವಲಿಂಗದಲ್ಲಿ ತನ್ನನ್ನು ಪೂಜಿಸಿದವರಿಗೆ ಮಹಾದೇವನು ಭೋಗಮೋಕ್ಷಗಳನ್ನು ತಪ್ಪದೆ ಕೊಡುತ್ತಾನೆ. ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಿಗಳನ್ನು ಧರಿಸಿದವನಾಗಿ ಶಿವಲಿಂಗವನ್ನು ತುಂಡಾಗದ ಬಿಲ್ವದಳಗಳಿಂದ ಪೂಜೆಮಾಡಿದರೆ ಅವನಿಗೆ ಸ್ಥಿರಮೋಕ್ಷಪ್ರಾಪ್ತಿಯಾಗುವುದರಲ್ಲಿ ಸಂಶಯವಿಲ್ಲ. ಇತರ ನಾನಾರೀತಿಯ ಆಕಾರಗಳು ಪರಮೇಶ್ವರನಿಗೆ ಪುರಾಣಾದಿಗಳಲ್ಲಿ ಉಕ್ತವಾಗಿದ್ದರೂ, ಶ್ರುತಿಯಲ್ಲಿಮಾತ್ರ ಮುಖ್ಯವಾಗಿ ಪರಶಿವನಿಗೆ ಶಿವಲಿಂಗರೂಪವೇ ಪ್ರತಿಪಾದಿತವಾಗಿರುವುದು. ॥೧೩-೧೪-೧೫॥

ಅಯ್ಯ ಜೈಗೀಷವ್ಯನೆ! ಆಗಮೋಕ್ತಗಳಾದ ಪಾಂಚಭೌತಿಕ ಶಿವಲಿಂಗಗಳಲ್ಲಿ ಮಹೇಶ್ವರನನ್ನು ಎಲ್ಲರೂ ಪೂಜೆಮಾಡಬಹುದು. ಇದೇವಿಷಯವನ್ನೇ ಕೈಲಾಸ

ಶಿವಲಿಂಗಾರ್ಚನಸ್ಯಾಸ್ಯ ಪ್ರಭಾವಂ ಕಥಯಸ್ವ ಮೇ ॥೧೭॥

॥ ದೇವ್ಯುವಾಚ ॥

ದೇವದೇವ ಮಹಾದೇವ ಕೇಷು ಸ್ಥಾನೇಷು ಪೂಜಿತಃ ।
ದದಾಸಿ ಭುಕ್ತಿಂ ಮುಕ್ತಿಂ ಚ ಶಿವಜ್ಞಾನಂ ಚ ಶಂಕರ ॥೧೮॥

ಕಿಂ ತಲ್ಲಿಂಗಂ ಕಶ್ಚ ಲಿಂಗೀ ತದರ್ಚನವಿಧಿಂ ಶಿವ ।
ನೈವೇದ್ಯಭುಕ್ತಿಂ ಶಕ್ತಿಂ ಚ ವದ ಮೇ ಕರುಣಾಕರ ॥೧೯॥

॥ ಈಶ್ವರ ಉವಾಚ ॥

ಲಿಂಗೋತ್ಪತ್ತಿಂ ಪ್ರವಕ್ಷ್ಯಾಮಿ ಶೃಣುಷ್ವ ಕಮಲಾನನೇ ।
ಯಚ್ಛ್ರುತ್ವಾ ಮನುಜಃ ಸದ್ಯೋ ಹ್ಯಜ್ಞಾನಂ ಜಹಾತಿ ಚ ॥೨೦॥

ಪೂರ್ವಮೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।
ವಿವಾದಃ ಸುಮಹಾನಾಸೀದ್ಬ್ರಹ್ಮವಿಷ್ಣ್ವೋಃ ಪರಸ್ಪರಂ ॥೨೧॥

---

ಶಿಖರದಲ್ಲಿ ಕುಳಿತಿದ್ದ ಪಾರ್ವತೀದೇವಿಯು ಒಂದುಸಾರಿ ಪರಶಿವನನ್ನು ಪ್ರಶ್ನಿಸಲು ಆದರಿಂದ ಸಂತುಷ್ಟನಾದ ಮಹೇಶ್ವರನು ದೇವಿಗೆ ಈ ಶಿವಲಿಂಗಾರ್ಚನೆಯ ಮಹಿಮೆಯನ್ನು ಈರೀತಿ ಹೇಳಿದನು. ಅದನ್ನು ಈಗ ನಿನಗೆ ತಿಳಿಸುವೆನು ಕೇಳು.॥೧೬-೧೭॥

"ದೇವಾದಿದೇವನಾದ ಮಹೇಶನೆ! ಯಾವ ಸ್ಥಳಗಳಲ್ಲಿ ಶಿವಲಿಂಗವನ್ನು ಪೂಜಿಸಿದರೆ ಭಕ್ತರಿಗೆ ಮುಕ್ತಿಯನ್ನೂ, ಶಿವಜ್ಞಾನವನ್ನೂ ಮಂಗಳಕರನಾದ ನೀನು ದಯಪಾಲಿಸುವೆ? ನಿನ್ನನ್ನು ಪೂಜಿಸುವ ಆ ಶಿವಲಿಂಗದ ಲಕ್ಷಣವೇನು? ಆ ಲಿಂಗವುಳ್ಳವನಾವನು? ಪರಶಿವನೆ! ಅದನ್ನು ಪೂಜೆಮಾಡುವ ವಿಧಿ, ನೈವೇದ್ಯ ಮಾಡುವ ಕ್ರಮ, ಪ್ರಾರ್ಥನಾಶಕ್ತಿ ಮುಂತಾದವುಗಳನ್ನು ದಯಾರ್ಣವನಾದ ನೀನು ನನಗೆ ಹೇಳು" ಎಂದು ಪಾರ್ವತಿಯು ಮಹೇಶನನ್ನು ಪ್ರಾರ್ಥಿಸಿದಳು. ಆಗ ಭವಾನೀವಲ್ಲಭನಾದ ಪರಶಿವನು ಪಾರ್ವತೀದೇವಿಗೆ ಈರೀತಿ ಹೇಳಿದನು. ॥೧೮-೧೯॥

"ಎಲೌ ಪದ್ಮಮುಖಿಯೇ! ಯಾವವಿಚಾರದ ಶ್ರವಣಮಾತ್ರದಿಂದಲೇ ಮಾನವನು ಕೂಡಲೇ ತಮ್ಮ ಹೃದಯದಲ್ಲಿನ ಅಜ್ಞಾನವನ್ನು ಕಳೆದುಕೊಳ್ಳುವನೋ ಅಂತಹ ಶಿವಲಿಂಗೋತ್ಪತ್ತಿಯ ವಿಷಯವನ್ನು ಹೇಳುವೆನು ಕೇಳು ; ದೇವಿಯೇ,

ಅಹಂಕರ್ತಾ ಹ್ಯಹಂ ಹರ್ತಾ ನ ಮತ್ತಾನ್ಯೋ ಜಗತ್ಪ್ರಭುಃ ।
ಏವಮಾಹ ಹರಿಂ ಬ್ರಹ್ಮಾ ಬ್ರಹ್ಮಾಣಂ ಚ ಹರಿಸ್ತಥಾ ॥೨೨॥

ತಯೋರ್ದರ್ಪಾಪಹಾರಾಯ ಪ್ರಬೋಧಾರ್ಥಂ ಚ ದೇವಯೋಃ ।
ಕಂದರ್ಪದರ್ಪಹಾ ದೇವಃ ಶರ್ವಃ ಶರ್ವಾಣಿಕಲ್ಪಕಃ ॥೨೩॥

ಮಧ್ಯೇ ಪ್ರಾದುರ್ಬಭೌ ಸಾಂಬೋ ಜ್ಯೋತಿರ್ಲಿಂಗಾಕೃತಿಃ ಶಿವಃ ।
ತಯೋಃ ಸಮುಭವಂ ಲಿಂಗಂ ಐಶ್ವರಂ ತೈಜಸಂ ಪರಂ ॥೨೪॥

ಜ್ವಾಲಾಮಾಲಾವೃತಂ ದಿವ್ಯಂ ಅಪ್ರಮೇಯಮನೂಪಮಂ ।
ಯೋಜನಾಯತವಿಸ್ತೀರ್ಣಂ ಜ್ವಾಲಾಮಾಲಾವಿರಾಜಿತಂ ॥೨೫॥

---

ಹಿಂದೆ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನಾಶವಾಗಿ ಭಯಂಕರವಾದ ಜಲರಾಶಿಯು ದೊಡ್ಡಸಾಗರರೂಪವಾಗಿ ತೋರುತ್ತಿರಲು, ಆದೇಸಮಯದಲ್ಲಿ ಬ್ರಹ್ಮ ವಿಷ್ಣುಗಳಿಗೆ ಇಂತು ಪರಸ್ಪರ ಸಂಭಾಷಣೆನಡೆಯಿತು. ॥೨೦-೨೧॥

'ನಾನೇ ಸೃಷ್ಟಿ ಮತ್ತು ಸಂಹಾರಕರ್ತನು; ನನಗಿಂತ ಬೇರೆ ಯಾರೂ ಜಗತ್ತಿಗೆ ಪ್ರಭುವೇ ಇಲ್ಲ' ವೆಂದು ಬ್ರಹ್ಮನು ವಿಷ್ಣುವಿಗೂ, ವಿಷ್ಣುವು ಬ್ರಹ್ಮನೊಡನೆಯೂ ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು. ಆಗ ಆ ಬ್ರಹ್ಮವಿಷ್ಣುಗಳ ಅಹಂಕಾರವನ್ನು ಹೋಗಲಾಡಿಸುವುದಕ್ಕೋಸ್ಕರವೂ ಅಲ್ಲದೇ ಅವರಿಗೆ ಜ್ಞಾನೋದಯವನ್ನುಂಟು ಮಾಡುವುದಕ್ಕಾಗಿಯೂ, ಮನ್ಮಥನ ಸೊಕ್ಕನ್ನು ಮುರಿದ ಸರ್ವಾಂತರ್ಯಾಮಿಯೂ ಅಂಬಿಕಾರಮಣನೂ ಆದ ಮಹಾದೇವನು (ನಾನು) ಅವರಿಬ್ಬರ ಮಧ್ಯದಲ್ಲಿ ಜ್ಯೋತಿರ್ಮಯವಾದ ಲಿಂಗಾವತಾರದಿಂದ ಪ್ರತ್ಯಕ್ಷನಾದನು. ॥೨೨-೨೩॥

ಅವರಿಬ್ಬರ ಮಧ್ಯದಲ್ಲಿ ದಿವ್ಯತೇಜಸ್ಸಿನಿಂದ ಬೆಳಗುತ್ತಿರುವ (ನನ್ನ) ಈಶ್ವರನ ಆ ಶಿವಲಿಂಗವು ಜ್ವಾಲೆಗಳಸಮೂಹದಿಂದ ಆವೃತವಾಗಿ, ಪ್ರಮಾಣಾತೀತವೂ ಅಸದೃಶವೂ ಎನಿಸಿ ಯೋಜನಪ್ರಮಾಣ ಅಗಲ ಮತ್ತು ವಿಸ್ತೀರ್ಣವುಳ್ಳದ್ದಾಗಿ ಜ್ವಾಲೆಗಳ ಮಾಲೆಗಳಿಂದ ವಿರಾಜಿಸುತ್ತಾ ಕಂಗೊಳಿಸಿತು. ಮತ್ತು ಅದರ ನಿಜವಾದ ಪ್ರಮಾಣವನ್ನು ಇಷ್ಟೆಂದು ಹೇಳಲು ಸಾಧ್ಯವಿಲ್ಲವಾಯಿತು. ॥೨೪-೨೫॥

ಜ್ವಾಲಾಭಿರ್ಮೋಹಿತೌ ತಸ್ಯ ಲಿಂಗಸ್ಯ ಸುರಸತ್ತಮೌ ।
ತದಾ ವಿಸ್ಮಯಮಾಪನ್ನೌ ಪಶ್ಯಂತಾವಮರೌ ತದಾ ॥೨೬॥

ಗತಾವೂರ್ಧ್ವಮಧಸ್ತಸ್ಯ ಸಂಪ್ರಧಾರ್ಯ ಪರಸ್ಪರಂ ।
ಅಧೋದ್ರಷ್ಟುಮಗಾದ್ವಿಷ್ಣುರೂರ್ಧ್ವಮಸ್ಯ ಪಿತಾಮಹಃ ॥೨೭॥

ಅದೃಷ್ಟ್ವಾ ತಮಥಶ್ಚೋರ್ಧ್ವಂ ತೌ ಸಮೇತ್ಯ ಪರಸ್ಪರಂ ।
ಕೃತಾಂಜಲಿಪುಟೌ ಭೂತ್ವಾ ಸ್ತೋತ್ರಮೇತದಗಾಯತಾಂ ॥೨೮॥

ಅನಾದಿದೇವದೇವೇಶ ವಿಶ್ವೇಶ್ವರ ಮಹೇಶ್ವರ ।
ಸರ್ವಜ್ಞ ಜ್ಞಾನವಿಜ್ಞಾನ ಪ್ರಜ್ಞಾಜ್ಞಾನನಿವರ್ತಕ ॥೨೯॥

॥ ಬ್ರಹ್ಮಾವಿಷ್ಣೂ ಊಚತುಃ ॥

ಅನೇಕಕಾಂತಿಸಂಪನ್ನ ಅನಂತಾಸನಸಂಸ್ಥಿತ ।
ಅನಂತಶಕ್ತಿಸಂಭೋಗಪರಮೇಶ ನಮೋಽಸ್ತುತೇ ॥೩೦॥

---

ಅಂತಹ ಶಿವಲಿಂಗದ ತೇಜೋಮಯವಾದ ಜ್ವಾಲೆಗಳಿಂದ ಮೂರ್ಛಿತರಾದ ದೇವತೋತ್ತಮರಿಬ್ಬರೂ ಆಶ್ಚರ್ಯಚಕಿತರಾದರು. ಅನಂತರ ಮೇಲಿಂದ ಕೆಳಗಿನ ವರೆಗೂ ವ್ಯಾಪಿಸಿರುವ ಆ ತೈಜಸಲಿಂಗವನ್ನು ಬ್ರಹ್ಮವಿಷ್ಣುಗಳಿಬ್ಬರೂ ಪರಸ್ಪರವಾಗಿ ಚೆನ್ನಾಗಿ ನೋಡಿ, ಅದರ ಸ್ವರೂಪವನ್ನು ಪರೀಕ್ಷಿಸಲು ಬ್ರಹ್ಮನು ಮೇಲುಭಾಗಕ್ಕೂ ವಿಷ್ಣುವು ಕೆಳಭಾಗಕ್ಕೂ ಹೊರಟರು. ಆದರೆ ಎಷ್ಟು ಹೊತ್ತು ಪ್ರಯಾಣ ಮಾಡಿದರೂ ಅವರು ಲಿಂಗದ ಮೇಲು ಮತ್ತು ಕೆಳಭಾಗಗಳನ್ನು ಕಾಣದೇ ಅವರಿಬ್ಬರೂ ನನ್ನ ಬಳಿಗೆ ಬಂದು ಪರಸ್ಪರವಾಗಿ ಕೈಮುಗಿದುಕೊಂಡು ಈರೀತಿ ಸ್ತೋತ್ರಮಾಡಿದರು. ॥೨೬-೨೭-೨೮॥

ಅನಾದಿಯೂ ಅನಂತನೂ ಆಗಿರುವ ದೇವದೇವೇಶ್ವರನೆ, ಜಗದೊಡೆಯನೆ, ಮಹೇಶ್ವರನೆ, ಸರ್ವವನ್ನೂ ತಿಳಿದ ಸ್ವಾಮಿಯೇ, ಜ್ಞಾನ ಮತ್ತು ವಿಜ್ಞಾನ ಸ್ವರೂಪನೆ, ಜ್ಞಾನೋಪದೇಶದಿಂದ ಅಜ್ಞಾನವನ್ನು ತೊಲಗಿಸುವ ಮಹಾಪ್ರಭುವೆ, ಅನೇಕ ಕಾಂತಿವಿಶಿಷ್ಟನೆ, ಅನಂತವಾದ ಆಸನದಲ್ಲಿ ಮಂಡಿಸಿದವನೆ, ಅಪರಿಮಿತವಾದ ಶಕ್ತಿಸಮುದಾಯಗಳ ಸಮಾಲಿಂಗನವುಳ್ಳ ಪರಮೇಶ್ವರನೆ, ನಿನಗೆ ನಮಸ್ಕಾರ ಮಾಡುತ್ತೇವೆ. ॥೨೯-೩೦॥

ಪರಾತ್ಪರ ಪುರಾತೀತ ಮಾಯಾತೀತ ವಿವರ್ಜಿತ ।
ಸ್ವಭಾವ ನಿರ್ಮಲಾಮೇಯ ನಿರ್ಗುಣಾಕಾಶಮಧ್ಯಗ ॥೩೧॥

ಯೋಗಸಾಂಖ್ಯೈರ್ದುರಾಪಾತ್ಮನ್ನಿಗಮಾಂತೈಕಗೋಚರ ।
ನಿರಂಜನ ನಿರಾಧಾರ ಸ್ವಾಧಾರ ನಿರುಪಪ್ಲವ ॥೩೨॥

ಸ್ವಭಾವಭಾಸಕಾಮೇಯ ಭಾಸ್ಯಭಾಸಕವರ್ಜಿತ ।
ಸರ್ವೇಂದ್ರಿಯಾದಿರಹಿತ ಭಾವಾಭಾವವಿವರ್ಜಿತ ॥೩೩॥

ನಮಸ್ತೇ ಶಿವಲಿಂಗಾಯ ಅಲಿಂಗಾಯ ನಮೋಽಸ್ತು ತೇ ।
ನಮಸ್ತೇ ಗುಹ್ಯಲಿಂಗಾಯ ಪರಲಿಂಗಾಯ ಲಿಂಗಿನೇ ॥೩೪॥

---

ಮಹೇಶ್ವರನೇ, ನೀನು ಪರಮಶ್ರೇಷ್ಠನು. ತ್ರಿಪುರಗಳನ್ನೂ ತ್ರಿಪುರಾಸುರರನ್ನೂ ಧ್ವಂಸಮಾಡಿದವನು, ಮಾಯೆಯನ್ನು ಅತಿಕ್ರಮಿಸಿದವನು, ನಿನಗೆ ನಿಜವಾಗಿ ಮಾಯಾಸಂಬಂಧವಿಲ್ಲ: ಅದರಿಂದಲೇ ಪ್ರಾಪಂಚಿಕ ಕ್ಲೇಶವಿವರ್ಜಿತನಾಗಿರುವೆ. ಸ್ವಭಾವಶುದ್ಧನೂ, ಗುಣರಹಿತನೂ, ಪ್ರಮಾಣಾಗೋಚರನೂ, ಆಕಾಶದಂತೆ ಸರ್ವ ವ್ಯಾಪಕನೂ ನೀನು ಆಗಿರುವೆ. ಯೋಗ ಮತ್ತು ಸಾಂಖ್ಯಶಾಸ್ತ್ರಗಳ ಸಹಾಯ ದಿಂದಲೂ ಹೊಂದಲಸಾಧ್ಯವಾದ ಸ್ವರೂಪವು ನಿನ್ನದು. ಆದರೆ ವೇದಾಂತಪ್ರತಿಪಾದ್ಯ ಮಾನವಾದ ಜ್ಞಾನಕ್ಕೆ ಮಾತ್ರ ಗೋಚರನೆನಿಸಿರುವೆ. ಮಾಯಾಕಾರ್ಯಗಳಿಂದ ನಿರ್ಲಿಪ್ತನೂ, ಆಧಾರಶೂನ್ಯನೂ, ಸಕಲ ಪ್ರಪಂಚಕ್ಕೂ ಆಧಾರನಾದರೂ ತನಗೆ ತಾನೇ ಆಶ್ರಯನೂ, ವ್ಯಾಧ್ಯಾದಿ ಉಪಪ್ಲವಗಳಿಂದ ರಹಿತನೂ ಆದ ನಿನಗೆ ಭಕ್ತಿ ಯಿಂದ ನಮಸ್ಕಾರಮಾಡುತ್ತೇವೆ. ॥೩೧-೩೨॥

ಮಹಾದೇವನೇ, ನೀನು ಸ್ವಭಾವವಾಗಿ ಪ್ರಪಂಚವನ್ನೆಲ್ಲಾ ಬೆಳಗಿಸುವವನು. ಯಾವ ಖಚಿತವಾದ ಅಳತೆಯೂ ನಿನ್ನಲ್ಲಿಲ್ಲ. ಸ್ವಪ್ರಕಾಶಕನಾದುದರಿಂದ ಪ್ರಕಾಶ್ಯ ಪ್ರಕಾಶಕಭಾವಶೂನ್ಯನಾಗಿರುವೆ. ಸಕಲ ಇಂದ್ರಿಯಗಳಿಗೂ ಅಗೋಚರನು. ಮತ್ತು ಸ್ವಯಂ ಇಂದ್ರಿಯಶೂನ್ಯನು. ಅಸ್ತಿ, ನಾಸ್ತಿ ಎಂಬ ಪ್ರತೀತಿಗೆ ಸರ್ವದಾ ಶಾಶ್ವತ ನಾದುದರಿಂದ ಅಗೋಚರನೆನಿಸಿರುವೆ. ಅಂತಹ ನಿನಗೆ ಈಗ ನಮಸ್ಕಾರಮಾಡುತ್ತೇವೆ. ಸ್ವಾಮಿ, ಶಿವಲಿಂಗರೂಪಿಯಾದ ನಿನಗೆ ಪ್ರಣಾಮವು; ಉಪಾಧಿವಶದಿಂದ ಲಿಂಗ ರೂಪಿಯಾಗಿ ಕಂಡುಬಂದರೂ ಮೊದಲು ಯಾವ ಚಿಹ್ನೆಯೂ ನಿನಗೆ ಇರಲಾರದು.

ನಮಸ್ತೇ ಜ್ಯೋತಿರ್ಲಿಂಗಾಯ ಅಲಿಂಗಾಯ ನಮೋಽಸ್ತು ತೇ ।
ನಮಃ ಪರ್ವತಲಿಂಗಾಯ ಬುದ್ಧಿಲಿಂಗಾಯ ತೇ ನಮಃ ॥೩೫॥

ನಮಸ್ತೇ ಸೂಕ್ಷ್ಮಲಿಂಗಾಯ ಭಾವಲಿಂಗಾಯ ತೇ ನಮಃ ।
ಜಗತ್ಕಾರಣಲಿಂಗಾಯ ಜಗತಾಂ ಪತಯೇ ನಮಃ ॥೩೬॥

ನಮೋ ಹಿರಣ್ಯಲಿಂಗಾಯ ದಿವ್ಯಲಿಂಗಾಯ ತೇ ನಮಃ ।
ನಮಸ್ತೇ ರುದ್ರಮನ್ಯವ ಉತೋತ ಇಷವೇ ನಮಃ ॥೩೭॥

ನಮಸ್ತೇ ಅಸ್ತು ಧನ್ವನೇ ಕರಾಭ್ಯಾಂ ತೇ ನಮೋ ನಮಃ ।
ಯಾತೇ ರುದ್ರ ಶಿವಾಽಘೋರಾ ತನೂಭ್ಯಾಂ ತೇ ನಮೋ ನಮಃ ॥೩೮॥

ನಮೋಽಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ತೇ ನಮಃ ।
ಸಹಸ್ರಪಾಣಯೇ ತುಭ್ಯಂ ನಮೋ ಮೀಢುಷ್ಟಮಾಯ ತೇ ॥೩೯॥

---

ಗೋಪ್ಯವಾಗಿ ಯಾರಿಗೂ ಗೋಚರವಾಗದ ಶಿವಲಿಂಗರೂಪಿಯೂ, ಪರಮಲಿಂಗ ಸ್ವರೂಪಿಯೂ ಆಗಿ ಈಗ ಲಿಂಗಾಕೃತಿಯಾಗಿ ತೋರುತ್ತಿರುವ ನಿನಗೆ ನಮಸ್ಕಾರ ಮಾಡುವೆವು. ಲಿಂಗರಹಿತನಾದರೂ ಜ್ಯೋತಿರ್ಲಿಂಗರೂಪಿಯಾದ ನಿನಗೆ ಪ್ರಣಾಮ ಮಾಡುವೆವು. ಪರ್ವತಲಿಂಗರೂಪಿಯೂ, ಬುದ್ಧಿಲಿಂಗಸ್ವರೂಪವುಳ್ಳವನೂ ಆದ ನಿನಗೆ ಪ್ರಣಾಮವನ್ನು ಸಲ್ಲಿಸುವೆವು. ॥೩೩-೩೪-೩೫॥

ಸೂಕ್ಷ್ಮಲಿಂಗ, ಭಾವ (ಭಕ್ತಿ) ಲಿಂಗ, ಜಗತ್ಸೃಷ್ಟಿಕಾರಣಭೂತವಾದ ಆತ್ಮ ಲಿಂಗರೂಪಿಯಾಗಿರುವ ಜಗದೊಡೆಯನಾದ ನಿನಗೆ ನಮಸ್ಕಾರ ; ಸುವರ್ಣಲಿಂಗನೂ, ದಿವ್ಯಲಿಂಗನೂ ಆದ ನಿನಗೆ ಪ್ರಣಾಮವು ; ರುದ್ರದೇವನೆ, ನಿನ್ನ ಕೋಪಕ್ಕೆ ನಮಸ್ಕಾರಮಾಡುವೆನು. (ಆ ಕೋಪವು ನಮ್ಮಲ್ಲಿ ಬೀಳದೆ ನಮ್ಮ ಶತ್ರುಗಳ ಮೇಲೆ ಬೀಳಲಿ) ದೇವ, ನಿನ್ನ ಬಾಣಗಳಿಗೂ ನಮಸ್ಕಾರಮಾಡುವೆನು. ॥೩೬-೩೭॥

ನಿನ್ನ ಧನುಸ್ಸಿಗೂ, ಧನುರ್ಬಾಣಗಳುಳ್ಳ ನಿನ್ನ ತೋಳುಗಳಿಗೂ ನಮಸ್ಕಾರವು ; ರುದ್ರನೆ, ನಿನ್ನ ಹಿಂಸಾತ್ಮಕಗಳಲ್ಲದ ಸೌಮ್ಯದೇಹಗಳಿಗೆ ಪ್ರಣಾಮವು. ಪ್ರಪಂಚರಕ್ಷಣೆಗಾಗಿ ಕಾಲಕೂಟವಿಷವನ್ನು ಭಕ್ಷಿಸಿ ಕಪ್ಪುಗೊರಳಾದ ನಿನಗೆ ಪ್ರಣಾಮಮಾಡುವೆನು. ಇಂದ್ರರೂಪಧಾರಿಯಾಗಿ ಸಾವಿರನೇತ್ರಗಳಿಂದ ವಿರಾಜಿಸುತ್ತಾ

ಕಪರ್ದಿನೇ ನಮಸ್ತುಭ್ಯಂ ಕಾಲಾತೀತಾಯ ತೇ ನಮಃ ।
ನಮಸ್ತೇ ಚಾತ್ತಶೂಲಾಯ ವಿಜ್ಯಾಯ ಧನುಷೇ ನಮಃ ॥೪೦॥

ಹಿರಣ್ಯಬಾಹವೇ ತುಭ್ಯಂ ಹಿರಣ್ಯಪತಯೇ ನಮಃ ।
ಸೇನಾನ್ಯೈ ತೇ ನಮೋ ದೇವ ದಿಶಾಂ ಚ ಪತಯೇ ನಮಃ ॥೪೧॥

ನಮಸ್ತೇ ಹರಿಕೇಶಾಯ ನಮಸ್ತೇ ಉಪವೀತಿನೇ ।
ನಮೋ ಭವಸ್ಯ ಹೇತ್ಯೈ ತೇ ಜಗತಾಂ ಪತಯೇ ನಮಃ ॥೪೨॥

ಪುಷ್ಟಾನಾಂ ಪತಯೇ ಶಂಭೋ ಕ್ಷೇತ್ರಾಣಾಂ ಪತಯೇ ನಮಃ ।
ಪಶೂನಾಂ ಪತಯೇ ಶಂಭೋ ಪತ್ತೀನಾಂ ಪತಯೇ ನಮಃ ॥೪೩॥

---

ಲೋಕಕ್ಕೆ ಮಳೆಗರೆಯುವ ನಿನಗೆ ನಮಸ್ಕಾರ; ಸಕಲ ಜಗತ್ಸ್ವರೂಪನಾದ್ದರಿಂದ ಸಾವಿರತೋಳ್ಗಳುಳ್ಳ ನಿನಗೆ ಪ್ರಣಾಮವು; ವಿಶೇಷವಾಗಿ ಕಾಮವನ್ನು ಹೆಚ್ಚಿಸುವ ನಿನಗೆ ನಮಸ್ಕಾರವು; ಜಟಾಜೂಟವುಳ್ಳ ನಿನಗೆ ಪ್ರಣಾಮಮಾಡುವೆನು; ಯಮನನ್ನು ನಿಗ್ರಹಿಸಿದ ನಿನಗೆ ಪ್ರಣಾಮವು; ಶೂಲಾಯುಧಧಾರಿಯೂ, ಹೆದೆಯೇರಿಸಿದ ಬಿಲ್ಲುಬಾಣಗಳುಳ್ಳವನೂ ಆದ ನಿನಗೆ ನಮಸ್ಕಾರಮಾಡುತ್ತೇವೆ. ॥೩೮-೩೯-೪೦॥

ಸುವರ್ಣವರ್ಣವುಳ್ಳ ಬಾಹುವಿಶಿಷ್ಟನಾದ ನಿನಗೆ ನಮಸ್ಕಾರವು; ಸುವರ್ಣಗಳಿಗೆ ಅಧಿಪತಿಯಾದ ನಿನಗೆ ನಮಸ್ಕಾರ; ದೇವಸೇನಾಧಿಪತಿರೂಪನಾದ ನಿನಗೆ ಪ್ರಣಾಮವು; ದಿಕ್ಕುಗಳಿಗೆ ಒಡೆಯನಾದ ನಿನಗೆ ನಮಸ್ಕಾರಗಳು, ಹಸುರುಬಣ್ಣದ ಎಲೆಗಳೆಂಬ ಕೂದಲುಗಳುಳ್ಳ ವೃಕ್ಷರೂಪಿಯಾದ ನಿನಗೆ ನಮಸ್ಕಾರವು; ಮಂಗಳಕರವಾದ ಯಜ್ಞೋಪವೀತವನ್ನು ಧರಿಸಿರುವ ನಿನಗೆ ಪ್ರಣಾಮವು; ಸಾಂಸಾರಿಕ ಬಂಧನವನ್ನು ಹೋಗಲಾಡಿಸಿ ಉದ್ಧಾರಮಾಡುವವನೂ, ಜಗದೊಡೆಯನೂ ಆದ ನಿನಗೆ ನಮಸ್ಕಾರವು; ಪರಿಪೂರ್ಣಗುಣಶಾಲಿಗಳೊಡೆಯನಾದ ನಿನಗೆ ನಮಸ್ಕಾರವು; ಶಂಭುವೆ, ಕ್ಷೇತ್ರಪಾಲಕರೂಪಿಯಾದ ನಿನಗೆ ನಮಸ್ಕಾರವು; ಗೋಪಾಲರೂಪಿಯಾದ ನಿನಗೆ ನಮಸ್ಕಾರವು; ಶಂಕರನೇ, ಪಾದಚಾರಿಗಳೊಡೆಯನ ಸ್ವರೂಪನಾಗಿರುವ ನಿನಗೆ ಪ್ರಣಾಮಮಾಡುವೆನು. ॥೪೧-೪೨-೪೩॥

ಆತತಾಯಿನ್ನಮಸ್ತುಭ್ಯಂ ವನಾನಾಂ ಪತಯೇ ನಮಃ ।
ನಮಸ್ತೇ ರೋಹಿತಾಯಾಥ ವೃಕ್ಷಾಣಾಂ ಪತಯೇ ನಮಃ ॥೪೪॥

ನಮಸ್ತೇ ಮಂತ್ರಿಣೇ ದೇವ ಕಕ್ಷ್ಯಾಣಾಂ ಪತಯೇ ನಮಃ ।
ಔಷಧೀನಾಂ ಚ ಪತಯೇ ನಮಸ್ತೇಽಸ್ತು ಧನಂತಯೇ ॥೪೫॥

ಉಚ್ಚೈರ್ಘೋಷಾಯ ಚ ನಮೋ ಪತ್ತೀನಾಂ ಪತಯೇ ನಮಃ ।
ಸತ್ವನಾಂ ಪತಯೇ ತುಭ್ಯಂ ಧನ್ವನಾಂ ಪತಯೇ ನಮಃ ॥೪೬॥

ಸಹಮಾನಾಯ ಶಾಂತಾಯ ಶಂಭವೇ ತೇ ಮಯೋಭವೇ ।
ಆಧೀನಾಂ ಪತಯೇ ತುಭ್ಯಂ ವ್ಯಾಧೀನಾಂ ಪತಯೇ ನಮಃ ॥೪೭॥

ಭಿಷಜೇ ಭವರೋಗಾಣಾಂ ಪ್ರಥಮಾಯ ಪ್ರಮಾಥಿನೇ ।
ಕಕುಭಾಯ ನಮಸ್ತುಭ್ಯಂ ನಮಸ್ತೇಽಸ್ತು ನಿಷಂಗಿಣೇ ॥೪೮॥

---

ವಿಸ್ತಾರವಾದ ಧನುಸ್ಸಿನಿಂದ ಜಗದ್ರಕ್ಷಣೆಮಾಡುವ ನಿನಗೆ ನಮಸ್ಕಾರವು ; ವನಗಳಿಗೆ ಅಧಿಪತಿಯಾದ ನಿನಗೆ ಪ್ರಣಾಮವು ; ಕೆಂಪುಬಣ್ಣವುಳ್ಳ ಸ್ವಾಮಿಯಾದ ನಿನಗೆ ನಮಸ್ಕಾರವು ; ಮರಗಳಿಗಧಿಪತಿಯಾದ ನಿನಗೆ ಪ್ರಣಾಮವು ; ಮಂತ್ರಾಲೋಚನ ಕುಶಲನಾದ ಸಚಿವರೂಪಿಯಾದ ನಿನಗೆ ಪ್ರಣಾಮವು ; ದೇವ, ಅರಣ್ಯದಲ್ಲಿರುವ ಪೊದೆಗಳೇ ಮೊದಲಾದವುಗಳನ್ನು ಪಾಲನೆಮಾಡುವ ನಿನಗೆ ನಮಸ್ಕಾರ ; ಹಳ್ಳಿಗಳಲ್ಲಿ ಕಾಡುಗಳಲ್ಲಿ ಲತಾದಿಗಳನ್ನು ಕಾಪಾಡುವ ನಿನಗೆ ನಮಸ್ಕಾರವು ; ಭೂಮಿಯನ್ನು ಸೃಷ್ಟಿಮಾಡಿ ವಿಸ್ತಾರಗೊಳಿಸಿದ ನಿನಗೆ ನಮಸ್ಕಾರವು ; ಯುದ್ಧಕಾಲದಲ್ಲಿ ದೊಡ್ಡದಾಗಿ ಸಿಂಹನಾದಮಾಡುವ ನಿನಗೆ ಪ್ರಣಾಮವು ; ಪಾದಾಳುಗಳೊಡೆಯನಾದ ನಿನಗೆ ಪ್ರಣಾಮವು ; ಶರಣಾಗತರನ್ನು ರಕ್ಷಣೆಮಾಡುವ ನಿನಗೆ ನಮಸ್ಕಾರವು ; ಧನುರ್ಧಾರಿಗಳಿಗಧಿಪತಿಯಾದ ನಿನಗೆ ನಮಸ್ಕಾರವು. ॥೪೪-೪೫-೪೬॥

ವೈರಿಗಳನ್ನು ತಿರಸ್ಕರಿಸುವವನೂ, ಶಾಂತನೂ, ಮಂಗಳಪ್ರದನೂ, ಸುಖವನ್ನುಂಟುಮಾಡುವವನೂ, ಮನೋವ್ಯಥೆ ಮತ್ತು ವ್ಯಾಧಿಗಳೊಡೆಯನಾದ ನಿನಗೆ ನಮಸ್ಕಾರ ಮಾಡುವೆನು. ಸಂಸಾರವೆಂಬ ರೋಗಕ್ಕೆ ವೈದ್ಯನಾಗಿರುವವನೂ, ಅಗ್ರಗಣ್ಯನೂ, ಶತ್ರುಗಳನ್ನು ಓಡಿಸುವವನೂ, ದಿಗ್ರೂಪನೂ, ಖಡ್ಗಧಾರಿಯೂ ಆದ

ಸ್ತೇನಾನಾಂ ಪತಯೇ ತುಭ್ಯಂ ವನಾನಾಂ ಪತಯೇ ನಮಃ ।
ತಸ್ಕರಾಣಾಂ ಚ ಪತಯೇ ನಮಸ್ತುಭ್ಯಂ ಪಿನಾಕಿನೇ ॥೪೯॥

ವಂಚತೇ ಭಕ್ತಿಹೀನಾನಾಂ ನಮಸ್ತೇ ಪರಿವಂಚತೇ ।
ಸ್ತಾಯೂನಾಂ ಪತಯೇ ತುಭ್ಯಂ ನಮಸ್ತೇಽಸ್ತು ನಿಚೇರವೇ ॥೫೦॥

ಅರಣ್ಯಾನಾಂ ಚ ಪತಯೇ ನಮ ಉಷ್ಣೀಷಿಣೇ ವಿಭೋ ।
ಧಾವತೇ ಭ್ರಮತೇ ದೇವ ಆಸೀನಾಯ ಸ್ಥಿತಾಯ ತೇ ॥೫೧॥

ಶಯಾನಾಯ ಸುಷುಪ್ತಾಯ ಜಾಗ್ರತೇ ತೇ ನಮೋ ನಮಃ ।
ನಮಃ ಶಾಂತಾಯ ಸೋಮಾಯ ಭೀಷ್ಮಾಯಾಭವಾಯ ಚ ॥೫೨॥

ತಾಮ್ರಾಯಾರುಣಾಯಾಥ ಶಿವಾಯ ಚ ನಮೋ ನಮಃ ।
ಉಗ್ರಾಯ ಶಂಕರಾಯಾಥ ಶಂಭವೇ ತೇ ನಮೋ ನಮಃ ॥೫೩॥

---

ನಿನಗೆ ನಮಸ್ಕಾರವು; ಕಳ್ಳರಿಗೆ ಒಡೆಯನೂ, ಅರಣ್ಯಗಳ ಸ್ವಾಮಿಯೂ, ಕಳ್ಳರ ಭೇದಗಳಿಗೆ ಯಜಮಾನನೂ, ಪಿನಾಕಪಾಣಿಯೂ ಆದ ನಿನಗೆ ಪ್ರಣಾಮ ಮಾಡುವೆನು. ॥೪೭-೪೮-೪೯॥

ಭಕ್ತಿಯಿಲ್ಲದವರನ್ನು ವಂಚಿಸುವವನೂ, ದ್ರೋಹಿಗಳಿಗೆ ವಂಚನೆಮಾಡುವವನೂ ಆದ ನಿನಗೆ ನಮಸ್ಕಾರ; ಸ್ತಾಯುಗಳ (ಗುರುತುಕಂಡ ಕಳ್ಳರ) ಸ್ವಾಮಿಯೂ, ಕಬ್ಬಿಣದಟೋಪಿಯನ್ನು ಧರಿಸಿರುವ ಕಳ್ಳರಸ್ವರೂಪಿಯೂ ಆದ ಸ್ವಾಮಿಯೆ! ಓಡುತ್ತಿರುವವನೂ, ಭ್ರಮಣಮಾಡುತ್ತಿರುವವನೂ, ಕುಳಿತಿರುವವನೂ, ನಿಂತಿರುವವನೂ, ಮಲಗಿರುವವನೂ, ಸುಷುಪ್ತ್ಯವಸ್ಥೆಯಲ್ಲಿರುವವನೂ, ಜಾಗ್ರದವಸ್ಥೆಯಲ್ಲಿರುವವನೂ ಆದ ನಿನಗೆ ನಮಸ್ಕಾರವು. ಶಾಂತಿಗುಣಪೂರ್ಣನೂ, ಉಮಾಕಾಂತನೂ, ಶತ್ರುಭಯಂಕರನೂ ಮತ್ತು ಚರಾಚರವಾದ ಜಗದುತ್ಪತ್ತಿ ಕಾರಣನೂ ಆದ ನಿನಗೆ ನಮಸ್ಕಾರವು. ॥೫೦-೫೧-೫೨॥

ತಾಮ್ರವರ್ಣನೂ, ಅಚ್ಚ ಕೆಂಪುವರ್ಣವುಳ್ಳವನೂ, ಯೋಗಿಗಳ ಮನಸ್ಸಿನಲ್ಲಿ ನೆಲಸಿರುವವನೂ ಆದ ನಿನಗೆ ನಮಸ್ಕಾರವು; ವೈರಿಗಳಿಗೆ ಉಗ್ರರೂಪನೂ, ಭಕ್ತರಿಗೆ ಮಂಗಳಕರನೂ, ಜಗನ್ಮಂಗಳವನ್ನುಂಟುಮಾಡುವವನೂ, ಆದ ನಿನಗೆ ನಮಸ್ಕಾರವು. ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಹಿಂಸೆಮಾಡುವವನೂ, ಸಕಲವಸ್ತುಸ್ವರೂಪನೂ,

ಶರ್ವಾಯ ಸರ್ವರೂಪಾಯ ನಮಃ ಸರ್ವಗತಾಯ ಚ ।
ಆವಯೋಃ ಪತಯೇ ಚೈವ ಜಗತಾಂ ಪತಯೇ ನಮಃ ॥೫೪॥

ಜಿಹ್ವಾಚಾಪಲ್ಯಭಾವೇನ ಯದಿದಂ ಗದಿತಂ ಹಿ ವಾಂ ।
ತತ್ಕ್ಷಂತವ್ಯಮನೌಪಮ್ಯಂ ಕಸ್ತೇ ಸ್ತೌತಿ ಗಣಾರ್ಣವಂ ॥೫೫॥

॥ ಶ್ರೀಸ್ಕಂದ ಉವಾಚ ॥

ಏವಂ ಸ್ತುತ್ವಾ ತದಾ ಲಿಂಗಂ ನೇಮತುಃ ಶಿರಸಾ ಸುರೌ ।
ಬ್ರಹ್ಮವಿಷ್ಣೂ ಭಿಯಾ ಭಕ್ತ್ಯಾ ಸ್ಥಿತೌ ತೌಪ್ರಾಂಜಲೀ ಮುನೇ ॥೫೬॥

ಲಿಂಗೋತ್ಪತ್ತಿಸ್ತವಂ ಪುಣ್ಯಂ ಯಃಶೃಣೋತಿ ನರಃ ಸದಾ ।
ನೋತ್ಪದ್ಯತೇ ಹಿ ಸಂಸಾರೇ ಸ್ಥಾನಮಾಪ್ನೋತಿ ಶಾಂಕರಂ ॥೫೭॥

ತಸ್ಮಾತ್ಸರ್ವಪ್ರಯತ್ನೇನ ಶೃಣುಯಾದ್ವಾಚಯೇತ್ತಥಾ ।
ಪಾಪಕಂಚುಕಮುತ್ಸೃಜ್ಯ ಶಿವಲೋಕೇ ಮಹೀಯತೇ ॥೫೮॥

---

ಸರ್ವಾಂತರ್ಯಾಮಿಯೂ ಆದ ನಿನಗೆ ಪ್ರಣಾಮವು. ನಮ್ಮಿಬ್ಬರಿಗೂ (ಬ್ರಹ್ಮವಿಷ್ಣುಗಳ) ಮತ್ತು ಸಮಸ್ತಪ್ರಪಂಚಕ್ಕೂ ಸ್ವಾಮಿಯಾದ ನಿನಗೆ ನಮಸ್ಕಾರವು. ದೇವ ! ನಾಲಿಗೆಯ ಚಾಪಲ್ಯದಿಂದಲೂ ಈ ನಾವಿಬ್ಬರೂ ಬಲಿಷ್ಠರೆಂಬ ಅಹಂಕಾರದಿಂದಲೂ ಆಡಿಕೊಂಡಿರುವ ಅಪರಾಧವನ್ನು ಕ್ಷಮಿಸಿ, ನಮ್ಮಿಬ್ಬರನ್ನೂ ಸಲಹು. ಸ್ವಾಮಿ ! ಸಾದೃಶ್ಯರಹಿತವಾದನಿನ್ನ ಗುಣರಾಶಿಗಳನ್ನು ಯಾರಿಂದ ತಾನೇ ವರ್ಣಿಸಲು ಸಾಧ್ಯವಾದೀತು ? ಎಂದು ಬ್ರಹ್ಮವಿಷ್ಣುಗಳಿಬ್ಬರೂ ಸ್ತೋತ್ರಮಾಡಿದರು. ॥೫೩-೫೪-೫೫॥

ಮುನಿಯೆ ! ಕೇಳು. ಹೀಗೆ ಸ್ತೋತ್ರಮಾಡಿ ಆ ಬಹ್ಮವಿಷ್ಣುದೇವತೆಗಳಿಬ್ಬರೂ ತಲೆಬಾಗಿ ಶಿವಲಿಂಗಕ್ಕೆ ನಮಸ್ಕಾರಮಾಡಿದರು. ಅವರಿಬ್ಬರೂ ಭಯಭಕ್ತಿಗಳಿಂದ ಸ್ತುತಿಸಿ ಕೈಮುಗಿದು ನಿಂತುಕೊಂಡರು. ಅಯ್ಯ ಜೈಗೀಷವ್ಯನೆ ! ಈ ಪುಣ್ಯಕರವಾದ ಲಿಂಗೋತ್ಪತ್ತಿಸ್ತೋತ್ರವನ್ನು ಯಾವಾಗಲೂ ಕೇಳುವ ಮಾನವನು ಪುನಃ ಈ ಸಂಸಾರದಲ್ಲಿ ಜನ್ಮತಾಳದೆ ಆ ಪರಶಿವನಸ್ಥಾನವನ್ನು ಹೊಂದುವನು. ಆದ್ದರಿಂದ ಸಕಲರೀತಿಯಿಂದಲೂ ಈ ಸ್ತೋತ್ರವನ್ನು ಶ್ರವಣ, ಮತ್ತು ಪಠನಮಾಡಿಸುವವನು ಪಾಪವೆಂಬ ಕವಚವನ್ನು ಬಿಟ್ಟು ಸರ್ವದಾ ಶಿವಲೋಕದಲ್ಲಿ ಮೆರೆಯುವನು. ॥೫೬-೫೭-೫೮॥

ಅಲಿಂಗಲಿಂಗೀ ಭಗವಾನ್ಮಹೇಶೋ
ಲಿಂಗೋತ್ತಮಾಂಗೇ ಕಿಲ ಸಂನಿವಿಷ್ಟಃ ।
ಶಾಂತಃ ಪ್ರಶಾಂತಃ ಪುರುಷಃ ಪುರಾಣೋ
ಅಣೋರಣೀಯಾನ್ಮಹತೋ ಮಹೀಯಾನ್ ॥೫೯॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಲಿಂಗೋದ್ಭವಬ್ರಹ್ಮವಿಷ್ಣು ಸ್ತುತಿರ್ನಾಮ ಏಕಚತ್ವಾರಿಂಶೋಽಧ್ಯಾಯಃ

---

ಮೊದಲು ಶಿವಲಿಂಗರೂಪಿಯಾಗದೇ ಇದ್ದರೂ ಅನಂತರ ಮಹೇಶ್ವರನು ಬ್ರಹ್ಮ ವಿಷ್ಣುಗಳ ಅಹಂಕಾರವನ್ನು ಹೋಗಲಾಡಿಸುವುದಕ್ಕಾಗಿ ಲಿಂಗದ ಶಿರಸ್ಸಿನಲ್ಲಿ ನೆಲಸಿದನು. ಶಾಂತನೂ, ಪ್ರಶಾಂತನೂ, ಆದಿಪುರುಷನೂ, ಪರಮಪ್ರಾಚೀನನೂ, ಅಣು ಪದಾರ್ಥಕ್ಕಿಂತಲೂ ಚಿಕ್ಕವನೂ, ದೊಡ್ಡವಸ್ತುವಿಗಿಂತಲೂ ಅತಿದೊಡ್ಡವನೂ ಆದ ಮಹೇಶ್ವರನು ದೇವಮಾನವಾದಿ ಸಕಲ ಲೋಕಗಳನ್ನೂ ಉದ್ಧಾರಮಾಡುವುದಕ್ಕಾಗಿ ಶಿವಲಿಂಗರೂಪಿಯಾದನು ಎಂದು ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಹೇಳಿದನು. ॥೫೯॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಲಿಂಗೋತ್ಪತ್ತಿ ಕ್ರಮ, ಬ್ರಹ್ಮವಿಷ್ಣುಗಳು ಮಾಡಿದ ಸ್ತೋತ್ರವರ್ಣನೆಯೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ದ್ವಿಚತ್ವಾರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಏವಂ ಸ್ತುತ್ವಾ ಮಹಾದೇವಂ ಪ್ರಣಮ್ಯ ಶಿರಸಾ ವಿಭುಂ ।
ಬ್ರಹ್ಮವಿಷ್ಣೂ ತದಾ ವಿಪ್ರ ಭಕ್ತ್ಯಾ ಪರಮಯಾ ಯುತೌ ॥೧॥

ಲಿಂಗಮಧ್ಯೇ ಪರಂ ಲಿಂಗಂ ಸ್ಥಿತಂ ಪ್ರಾದೇಶಸಂಮಿತಂ ।
ಸಮಾಧಿಸ್ತೋತ್ರಸಂಪನ್ನೌ ದೃಷ್ಟವಂತೌ ಶಿವಾತ್ಮಕಂ ॥೨॥

ನೈವ ತತ್ಕಾಂಚನಂ ರೂಪ್ಯಂ ನ ರತ್ನಸ್ಫಟಿಕೋದ್ಭವಂ ।
ಜ್ಯೋತಿರ್ಮಾತ್ರಂ ಸ್ಥಿತಂ ಶಾಂತಂ ಕೇವಲಂ ತಚ್ಛಿವಾತ್ಮಕಂ ॥೩॥

ತಯೋಸ್ತುಷ್ಟೋ ಮಹಾದೇವಃ ಪ್ರಾದಾದ್ವರಮನುತ್ತಮಂ ॥೪॥

---

## ನಲವತ್ತೆರಡನೆಯ ಅಧ್ಯಾಯ

ಅಯ್ಯ ಬ್ರಾಹ್ಮಣನೆ, ಆಗ ಬ್ರಹ್ಮವಿಷ್ಣುಗಳಿಬ್ಬರೂ ವಿಶೇಷ ಭಕ್ತಿಯುಕ್ತರಾಗಿ ಮಹಾದೇವನಿಗೆ ತಲೆಬಾಗಿ ನಮಿಸಿ, ಈರೀತಿ ಸ್ತೋತ್ರವನ್ನು ಮಾಡಿದನಂತರ ಆ ತೈಜಸಲಿಂಗದ ಮಧ್ಯದಲ್ಲಿ ಪ್ರಾದೇಶಪ್ರಮಾಣದಲ್ಲಿ ಮತ್ತೊಂದು ಶ್ರೇಷ್ಠಲಿಂಗವಿರುವುದನ್ನು ನೋಡಿ, ನಿಯಮಬದ್ಧವಾದ ಸ್ತೋತ್ರಗಳೊಡನೆ ಶಿವಸ್ವರೂಪವಾದ ಅದನ್ನು ದರ್ಶನಮಾಡಿದರು. ಅದು ಚಿನ್ನ, ಬೆಳ್ಳಿ, ರತ್ನ, ಸ್ಫಟಿಕ ಮುಂತಾದವುಗಳಿಂದ ರಚಿತವಾಗಿತ್ತಲ್ಲದೇ ಕೇವಲ ಜ್ಯೋತಿರ್ಮಯವೂ ಶಾಂತವೂ ಶಿವಾತ್ಮಕವೂ ಆಗಿದ್ದಿತು. ಆಗ ಮಹಾದೇವನು ಆ ಬ್ರಹ್ಮವಿಷ್ಣುಗಳ ಸ್ತೋತ್ರದಿಂದ ಸಂತುಷ್ಟನಾಗಿ ಉತ್ತಮವಾದ ವರವನ್ನು ಅವರಿಗೆ ಕೊಟ್ಟನು. ॥೧-೨-೩-೪॥

॥ ಈಶ್ವರ ಉವಾಚ ॥

ಏತಸ್ಯ ಮಮ ಲಿಂಗಸ್ಯ ಭವಂತಂ ವಾ ಸುರೋತ್ತಮೌ ।
ಯೋನಿಃ ಪೀಠಂ ಕಂಜಭವಕಂಜಾಕ್ಷೌ ಲೋಕಶಾಂತಯೇ ॥೫॥

ಲಿಂಗಸ್ಯ ಪರತೋಽಧಸ್ತಾದ್ಭವಂತಂ ವಾ ಸುರೋತ್ತಮೌ ।
ಭವೇತ ಮುಕ್ತಿಸಾಮ್ರಾಜ್ಯೇ ಲಿಂಗೇ ಬಿಲ್ವಾರ್ಚನಾತ್ಸುರೌ ॥೬॥

ಇತ್ಯುಕ್ತ್ವಾ ಸಹಸಾ ದೇವಸ್ತಸ್ಮಿನ್ಲಿಂಗೇ ತಿರೋದಧೇ ।
ತದಾಪ್ರಭೃತಿ ಬ್ರಹ್ಮಾದ್ಯಾ ವಿಷ್ಣುಶ್ಚಾಪಿ ಸುರೋತ್ತಮಃ ॥೭॥

ಲಿಂಗವೇದೀ ಲಿಂಗಪೀಠಂ ಮುನೇ ಹ್ಯಭವತಂ ತದಾ ।
ತಲ್ಲಿಂಗಸದೃಶಂ ಲಿಂಗಂ ಪ್ರತಿಷ್ಠಾಪ್ಯ ಸುರಾಸುರಾಃ ॥೮॥

ಗಣಾ ಮಹರ್ಷಯಃ ಸಿದ್ಧಾಃ ಪೂಜಯಂತಿ ವಿಮುಕ್ತಯೇ ।
ರತ್ನಸ್ಫಟಿಕಧಾತುಭ್ಯೋ ಮೃತ್ಸ್ನೈಕತಸಮುದ್ಭವಂ ॥೯॥

ಕೃತ್ವಾ ಲಿಂಗಾಕೃತಿಂ ಸರ್ವೇ ಶಾಂಭವಾಃ ಸುರಸತ್ತಮಾಃ ।
ಭಸ್ಮರುದ್ರಾಕ್ಷಸಂಪನ್ನಾ ರುದ್ರಪಂಚಾಕ್ಷರಾದರಾಃ ॥೧೦॥

---

ಓ ಬ್ರಹ್ಮವಿಷ್ಣುಗಳಿರಾ! ಈ ನನ್ನ ಲಿಂಗಕ್ಕೆ ದೇವೋತ್ತಮರಾದ ನೀವಿಬ್ಬರಲ್ಲಿ ಪದ್ಮಸಂಭವನು ಯೋನಿಯಾಗಿಯೂ, ಕಮಲಲೋಚನನು ಪೀಠವಾಗಿಯೂ ಲೋಕಕಲ್ಯಾಣಕ್ಕೋಸ್ಕರ ರೂಪವನ್ನು ತಾಳಿರಿ. ಈ ಶಿವಲಿಂಗಾರ್ಚನೆಯಿಂದ ಮೇಲೆ ಮತ್ತು ಕೆಳಭಾಗದಲ್ಲಿನೆಲಸಿರುವ ದೇವೋತ್ತಮರಾದ ನೀವು ಬಿಲ್ವಪೂಜಾ ಮಹಿಮೆಯಿಂದ ಮೋಕ್ಷಸಾಮ್ರಾಜ್ಯವನ್ನು ಹೊಂದುತ್ತೀರಿ, ಎಂದು ಹೇಳಿ ಆ ಮಹಾದೇವನು ಆ ಲಿಂಗದಲ್ಲಿ ಕೂಡಲೇ ಅಂತರ್ಧಾನನಾದನು. ॥೫-೬॥

ಅಯ್ಯ ಜೈಗೀಷವ್ಯಮುನಿಯೆ! ಅದುಮೊದಲುಗೊಂಡು ಬ್ರಹ್ಮನೇಮೊದಲಾದವರೂ ದೇವತೋತ್ತಮನಾದ ವಿಷ್ಣುವೂ ಸಹ ಲಿಂಗವೇದಿಕೆ ಮತ್ತು ಲಿಂಗಪೀಠಗಳ ರೂಪಗಳನ್ನು ಹೊಂದಿದರು. ಅನಂತರ ಆ ಲಿಂಗಕ್ಕೆ ಸಮಾನವಾದ ಬೇರೆ ಶಿವಲಿಂಗವನ್ನು ದೇವದಾನವರೂ, ಗಣಗಳೂ, ಮಹರ್ಷಿಗಳೂ, ಸಿದ್ಧಪುರುಷರೂ ಪ್ರತಿಷ್ಠೆಮಾಡಿಕೊಂಡು ಮೋಕ್ಷಪ್ರಾಪ್ತಿಗೋಸ್ಕರ ಸರ್ವದಾ ಪೂಜೆಮಾಡುತ್ತಿರುವರು.

ಪಂಚಾಮೃತೈರ್ಬಿಲ್ವದಳೈರ್ಧೂಪದೀಪನಿವೇದನೈಃ ।
ಪ್ರದಕ್ಷಿಣನಮಸ್ಕಾರಸ್ತೋತ್ರನರ್ತನಕೈಸ್ತಥಾ ॥೧೧॥

ಪ್ರಾತರ್ಮಧ್ಯಾಹ್ನಸಾಯಾಹ್ನೇ ಪ್ರದೋಷೇ ಪೂಜಯನ್ಸುರಾಃ ।
ತೇಷಾಂ ಲಿಂಗಾರ್ಚನಾದೇವ ಪದಪ್ರಾಪ್ತಿರಭೂನ್ಮುನೇ ॥೧೨॥

ಪರಂ ಶುದ್ಧಂ ನಿರ್ಗುಣಂ ತಲ್ಲಿಂಗಮೇತತ್ತದೈಶ್ವರಂ ।
ಯದಾದ್ಯಮೈಶ್ವರಂ ತೇಜಸ್ತಲ್ಲಿಂಗಮಿತಿ ಕೀರ್ತ್ಯತೇ ॥೧೩॥

ಕಲ್ಪಾಂತೇ ಸಂಸ್ಥಿತಾ ಲೋಕಾ ಲಿಂಗೇ ತಸ್ಮಿನ್ ಚರಾಚರಾಃ ।
ದಕ್ಷಿಣೇ ಲೀಯತೇ ಬ್ರಹ್ಮಾ ವಾಮತಸ್ತು ಜನಾರ್ದನಃ ॥೧೪॥

ಹೃದಯೇ ಚೈವ ಗಾಯತ್ರೀ ಛಂದಾಂಸ್ಯನ್ಯಾನಿ ಪಾರ್ವತಿ ।
ಮೂರ್ಧ್ನಿ ಲೀಯಂತಿ ವೈ ವೇದಾಃ ಸ ಷಡಂಗಪದಕ್ರಮಾಃ ॥೧೫॥

---

ಶೈವರೂ, ದೇವತೆಗೋತ್ತಮರೂ, ರತ್ನ, ಸ್ಪಟಿಕ, ಧಾತುಗಳು, ಮಣ್ಣು, ಮರಳುಗಳಿಂದ ಶಿವಲಿಂಗಾಕೃತಿಯನ್ನು ಮಾಡಿಕೊಂಡು ಭಸ್ಮರುದ್ರಾಕ್ಷಗಳನ್ನು ಧರಿಸಿ, ರುದ್ರ ಮತ್ತು ಶಿವಪಂಚಾಕ್ಷರಮಂತ್ರಜಪಮಾಡುವುದರಲ್ಲಿ ಆದರವುಳ್ಳವರಾಗಿ ಭಕ್ತಿಯಿಂದ ಆ ಲಿಂಗವನ್ನು ಸದಾ ಪೂಜೆಮಾಡುತ್ತಿರುವರು. ॥೭-೮-೯-೧೦॥

ಪಂಚಾಮೃತಸ್ನಾನ, ಬಿಲ್ವದಳಪೂಜೆ, ಧೂಪ, ದೀಪ, ನೈವೇದ್ಯಾದಿ ಸಮರ್ಪಣೆ, ಪ್ರದಕ್ಷಿಣೆ ನಮಸ್ಕಾರ, ಸ್ತೋತ್ರ, ನರ್ತನ ಮುಂತಾದವುಗಳಿಂದ ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ, ಮತ್ತು ಪ್ರದೋಷಕಾಲಗಳಲ್ಲಿ ದೇವತೆಗಳು ಈ ಲಿಂಗವನ್ನು ಪೂಜೆಮಾಡಿದರು. ಅಯ್ಯ ಮುನಿಯೆ! ಅವರಿಗೆ ಈ ಶಿವಲಿಂಗ ಪೂಜೆಯಿಂದಲೇ ಆ ಮಹಾದೇವನ ಪಾದಸನ್ನಿಧಿಯು ಪ್ರಾಪ್ತವಾಯಿತು. ಪರಮ ಶ್ರೇಷ್ಠವೂ, ಶುದ್ಧವೂ, ಗುಣರಹಿತವೂ, ಆ ಈಶ್ವರನ ಲಿಂಗವೆಂದು ತಿಳಿ. ಸಕಲ ಲೋಕಕ್ಕೂ ಆದಿಭೂತವಾದ ಆ ಈಶ್ವರನ ತೇಜಸ್ಸೇ ಶಿವಲಿಂಗವೆಂಬುದಾಗಿ ಹೇಳಲ್ಪಡುತ್ತದೆ. ॥೧೧-೧೨-೧೩॥

ಕಲ್ಪದಕೊನೆಯಲ್ಲಿ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಆ ಲಿಂಗದಲ್ಲಿ ನೆಲಸುವುವು. ಆಗ ಬ್ರಹ್ಮನು ಬಲಭಾಗದಲ್ಲಿಯೂ, ವಿಷ್ಣುವು ಎಡಭಾಗದಲ್ಲಿಯೂ, ನೆಲಸುವರು. ಹೃದಯದಲ್ಲಿ ಗಾಯತ್ರಿಯೂ, ಇತರ ಛಂದಸ್ಸುಗಳೂ ಲೀನವಾಗುವುವು. ಪಾರ್ವತಿಯೇ! ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ

ಜಠರೇ ಲೀಯತೇ ಸರ್ವಂ ಜಗತ್ಸ್ಥಾವರಜಂಗಮಂ ।
ಉತ್ಪದ್ಯಂತೇ ಪುನಸ್ತಸ್ಮಾದ್ಬ್ರಹ್ಮಾದಿ ಸಚರಾಚರಂ ॥೧೬॥

ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ ।
ಆಲಯಂ ಸರ್ವಭೂತಾನಾಂ ಲಯನಾಲ್ಲಿಂಗಮುಚ್ಯತೇ ॥೧೭॥

ತಸ್ಮಾಲ್ಲಿಂಗಂ ಪ್ರತಿಷ್ಠಾಪ್ಯ ಸರ್ವದೇವೋದ್ಭವೋದ್ಭವಂ ।
ಸ್ಥಾಪಿತಂ ತೇನ ಸರ್ವಂ ಸ್ಯಾಜ್ಜಗತ್ಸರ್ವಂ ಚರಾಚರಂ ॥೧೮॥

ತತ್ಪೂಜಯಾ ಪೂಜಿತಂ ವೈ ಜಗತ್ಸರ್ವಂ ನ ಸಂಶಯಃ ।
ಪೂಜಯಂತಿ ಸದಾ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ॥೧೯॥

ಏವಂ ಲಿಂಗಂ ಸಮಭ್ಯರ್ಚ್ಯ ಸೃಷ್ಟಿಸ್ಥಿತ್ಯಂತಕಾರಿಣಃ ।
ಬ್ರಹ್ಮಾ ಶೈಲಮಯಂ ಲಿಂಗಂ ಭಕ್ತ್ಯಾ ಪೂಜಯತೇ ಸದಾ ॥೨೦॥

---

ಮತ್ತು ಕಲ್ಪಗಳೆಂಬ ಷಡಂಗಗಳೊಡನೆಯೂ, ಪದ ಮತ್ತು ಕ್ರಮ ಪಾಠಗಳೊಡನೆಯೂ, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕುವೇದಗಳು ಲಿಂಗದ ತಲೆಯಲ್ಲಿ ನೆಲಸಿದವು. ಸ್ಥಾವರಜಂಗಮವಾದ ಜಗತ್ತು ಅದರ ಜಠರದಲ್ಲಿ ಲೀನವಾಯಿತು. ಹೀಗೆ ಐಕ್ಯವಾದ ಈ ಚರಾಚರಜಗತ್ತು ಪುನಃ ಈಶ್ವರೇಚ್ಛೆಯಿಂದ ಬ್ರಹ್ಮನೇ ಮೊದಲಾಗಿ ಹುಟ್ಟುತ್ತದೆ. ॥೧೪-೧೫-೧೬॥

ಆಕಾಶವನ್ನು ಲಿಂಗವೆಂಬುದಾಗಿ ಹೇಳುವರು. ಭೂಮಿಯು ಅದರ ಪೀಠವು. ಸಕಲ ಪ್ರಾಣಿಗಳಿಗೂ ಆಶ್ರಯವಾಗಿದ್ದು ಕೊನೆಗೆ ಲಯವನ್ನುಂಟುಮಾಡುವ ತೇಜಸ್ಸುಳ್ಳದ್ದರಿಂದ ಅದು ಲಿಂಗವೆಂಬುದಾಗಿ ಹೇಳಲ್ಪಡುವುದು. ಆದುದರಿಂದಲೇ ಸಮಸ್ತ ದೇವತೆಗಳ, ಉತ್ಪತ್ತಿಗೆ ಮತ್ತು ಆಶ್ರಯಕ್ಕೆ ಕಾರಣಭೂತವಾಗಿರುವ ಶಿವಲಿಂಗವನ್ನು ಸ್ಥಾಪನೆಮಾಡಿದವನು ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತನ್ನೂ ಸ್ಥಾಪಿಸಿದಂತಾಗುವುದು. ಇದರಲ್ಲಿ ಸಂದೇಹವಿಲ್ಲ. ಅಲ್ಲದೆ ಅವರ ಪೂಜೆಯಿಂದ ಸಮಸ್ತ ಜಗತ್ತನ್ನೂ ಪೂಜೆಮಾಡಿದಂತಾಗುವುದು. ಯಾವಾಗಲೂ ಈ ಲಿಂಗವನ್ನು ಬ್ರಹ್ಮವಿಷ್ಣುಮಹೇಶ್ವರರು ಪೂಜೆಮಾಡುತ್ತಿರುವರು. ॥೧೭-೧೮-೧೯॥

ಸೃಷ್ಟಿ, ಸ್ಥಿತಿ, ಸಂಹಾರಕಾರ್ಯಕರ್ತರಾದ ತ್ರಿಮೂರ್ತಿಗಳೂ ಹೀಗೆ ಶಿವಲಿಂಗವನ್ನು ಪೂಜೆಮಾಡಿರುವರು. ಬ್ರಹ್ಮನು ಶೈಲಸ್ವರೂಪವಾದ ಲಿಂಗವನ್ನು ಭಕ್ತಿಯಿಂದ

ಗಂಧಪುಷ್ಪಾದಿಭಿರ್ನಿತ್ಯಂ ತ್ರಿಕಾಲಂ ಬಿಲ್ವಪಲ್ಲವೈಃ ।
ತಸ್ಯ ಸಂಪೂಜನಾತ್ಪ್ರಾಪ್ತಂ ತೇನ ಬ್ರಹ್ಮತ್ವಮುತ್ತಮಂ ॥೨೧॥

ಸಸರ್ಜ ಜಗದೇವಂ ಹಿ ಸಸುರಾಸುರಮಾನುಷಂ ।
ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ ॥೨೨॥

ವಿಷ್ಣುತ್ವಂ ತೇನ ಸಂಪ್ರಾಪ್ತಂ ಪಾಲಕೋ ಜಗತೋಽಭವತ್ ।
ಹೀರಸಾರಮಯಂ ಲಿಂಗಂ ರುದ್ರಃ ಪೂಜಯತೇ ಸದಾ ॥೨೩॥

ತೇನ ರುದ್ರತ್ವಮಾಸಾದ್ಯ ಜಗನ್ನಾಶಕರೋಽಭವತ್ ।
ಶಕ್ರೋಽಪಿ ದೇವದೇವಸ್ಯ ಪದ್ಮರಾಗಮಯಂ ಶುಭಂ ॥೨೪॥

ನಿತ್ಯಮಭ್ಯರ್ಚಯನ್ಭಕ್ತ್ಯಾ ತೇನ ಶಕ್ರತ್ವಮಾಪ್ತವಾನ್ ।
ಲಿಂಗಂ ಹೈಮಮಯಂ ಕಾಂತಂ ಧನದೋಽರ್ಚಯತೇ ಸದಾ ॥೨೫॥

---

ಅನವರತವೂ ಗಂಧಪುಷ್ಪಾದಿಗಳಿಂದಲೂ, ಬಿಲ್ವದಳವೇ ಮುಂತಾದವುಗಳಿಂದಲೂ ಪ್ರಾತಃಕಾಲ ಮಧ್ಯಾಹ್ನ ಮತ್ತು ಸಾಯಂಕಾಲರೂಪವಾದ ಮೂರು ಕಾಲಗಳಲ್ಲಿಯೂ ಪೂಜೆಮಾಡುತ್ತಿರುವನು. ಇಂತಹ ಶಿವಲಿಂಗಪೂಜೆಯಿಂದ ಅವನಿಗೆ ಉತ್ತಮವಾದ ಬ್ರಹ್ಮಪದವಿಯು ಪ್ರಾಪ್ತವಾಗಿದೆ. ॥೨೦-೨೧॥

ಆ ಪೂಜಾಪ್ರಭಾವದಿಂದಲೇ ದೇವರಾಕ್ಷಸಮಾನವರೂಪವಾದ ಈ ಪ್ರಪಂಚವನ್ನು ಬ್ರಹ್ಮನು ಸುಲಭವಾಗಿ ಸೃಷ್ಟಿಮಾಡಿದನು. ವಿಷ್ಣುವು ಯಾವಾಗಲೂ ಇಂದ್ರನೀಲಮಣಿಮಯವಾದ ಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಿರುವನು. ಆದರಿಂದ ಅವನು ಈ ಪ್ರಪಂಚವನ್ನು ಪಾಲಿಸುವುದರಲ್ಲಿ ಶಕ್ತನಾಗಿ ವಿಷ್ಣುಪದವಿಯನ್ನು ಹೊಂದಿದನು. ರುದ್ರನು ಯಾವಾಗಲೂ ಹೀರರತ್ನದ ಸಾರಭೂತವಾದ ಶಿವಲಿಂಗವನ್ನು ವಿಧಿವತ್ತಾಗಿ ಪೂಜೆಮಾಡುತ್ತಾ ರುದ್ರಪದವಿಯನ್ನು ಪಡೆದು ಜಗನ್ನಾಶಮಾಡುವ ಸಾಮರ್ಥ್ಯವುಳ್ಳವನಾದನು. ॥೨೨-೨೩॥

ಇಂದ್ರನೂ ಕೂಡ ದೇವದೇವನ ಪದ್ಮರಾಗಮಣಿಮಯವಾದ ಶುಭಕರಲಿಂಗವನ್ನು ನಿತ್ಯವೂ ಭಕ್ತಿಯಿಂದ ಪೂಜಿಸಿ, ಆದರಿಂದ ಇಂದ್ರಪದವಿಯನ್ನು ಪಡೆದನು. ಕುಬೇರನು ಯಾವಾಗಲೂ ಸುವರ್ಣಮಯವಾದ ಸುಂದರಲಿಂಗವನ್ನು ಪೂಜೆ

ತೇನಾಸೌ ಧನದೋ ದೇವೋ ಧನದತ್ವಮವಾಪ್ತವಾನ್ ।
ವಿಶ್ವೇದೇವಾ ಮಹಾತ್ಮಾನೋ ರೌಪ್ಯಲಿಂಗಂ ಸಮರ್ಚಯನ್ ॥೨೬॥

ವಿಶ್ವೇ ದೇವತ್ವಮಾಸಾದ್ಯ ಮೋದಂತೇ ಶಕ್ರಲೋಕಗಾಃ ।
ವಾಯುಃ ಪೂಜಯತೇ ನಿತ್ಯಂ ಲಿಂಗಂ ಪಿತ್ತಲಸಂಭವಂ ॥೨೭॥

ವಾಯುತ್ವಂ ತೇನ ಸಂಪ್ರಾಪ್ತಮಪ್ರಮೇಯಮನೌಪಮಂ ।
ವಸವಃ ಕಾಂಸ್ಯಜಂ ಲಿಂಗಂ ಪೂಜಯಂತಿ ವಿಧಾನತಃ ॥೨೮॥

ವಸುತ್ವಂ ತೇನ ಸಂಪ್ರಾಪ್ಯ ಮೋದಂತೇ ಸುಖಿನಃ ಸದಾ ।
ಅಶ್ವಿನೌ ಪಾರ್ಥಿವಂ ಲಿಂಗಂ ಪೂಜಯಂತೌ ಭಿಷಗ್ವರೌ ॥೨೯॥

ತೇನ ತಾವಶ್ವಿನೌ ದೇವೌ ದೇವಾನಾಂ ಭಿಷಜಾಂ ವರೌ ।
ಸ್ಫಾಟಿಕಂ ನಿರ್ಮಲಂ ಲಿಂಗಂ ವರುಣೋಽರ್ಚಯತೇ ಸದಾ ॥೩೦॥

ತೇನ ತದ್ವರುಣತ್ವಂ ಹಿ ಪ್ರಾಪ್ತಂ ತತ್ರ ಬಲಾನ್ವಿತಂ ।
ಲಿಂಗಮನ್ನಮಯಂ ನಿತ್ಯಮಗ್ನಿಃ ಪೂಜಯತೇ ಸದಾ ॥೩೧॥

---

ಮಾಡುತ್ತಿರುವನು. ಇದರಿಂದ ಈ ಕುಬೇರದೇವನು ಧನಾಧಿಪ ಪದವಿಯನ್ನು ಪಡೆದನು. ||೨೪-೨೫||

ಮಹಾತ್ಮರಾದ ವಿಶ್ವೇದೇವತೆಗಳು ಶುದ್ಧವಾದ ಬೆಳ್ಳಿಯ ಶಿವಲಿಂಗವನ್ನು ರಚಿಸಿ ಪೂಜಿಸುತ್ತಾ ವಿಶ್ವೇದೇವಪದವಿಯನ್ನು ಹೊಂದಿ ಇಂದ್ರಲೋಕದಲ್ಲಿ ವಾಸ ಮಾಡಿಕೊಂಡು ಸುಖವಾಗಿರುವರು. ವಾಯುವು ನಿತ್ಯವೂ ಹಿತ್ತಾಳೆಯ ಲಿಂಗವನ್ನು ಪೂಜಿಸುತ್ತಿರುವನು. ಇದರಿಂದಲೇ ಅವನಿಗೆ ಪ್ರಮಾಣರಹಿತವೂ ಸಾದೃಶ್ಯಶೂನ್ಯವೂ ಆದ ವಾಯುಪದವಿಯು ದೊರೆಯಿತು. ಅಷ್ಟವಸುಗಳು ಕಂಚಿನ ಲಿಂಗವನ್ನು ವಿಧಿಪ್ರಕಾರವಾಗಿ ಪೂಜಿಸಿಕೊಂಡು ಬಂದುದರಿಂದಲೇ ವಸುಪದವಿಯನ್ನು ಹೊಂದಿ ಯಾವಾಗಲೂ ಸುಖದಿಂದ ಆನಂದಿಸುತ್ತಿರುವರು. ||೨೬-೨೭-೨೮||

ದೇವವೈದ್ಯಶ್ರೇಷ್ಠರಾದ ಅಶ್ವಿನೀದೇವತೆಗಳು ಪಾರ್ಥಿವಲಿಂಗವನ್ನು ಪೂಜೆ ಮಾಡುತ್ತಾ ಅದರಿಂದ ದೇವತೆಗಳ ವೈದ್ಯಪದವಿಯಲ್ಲಿ ಶ್ರೇಷ್ಠತೆಯನ್ನು ಪಡೆದರು. ನಿರ್ಮಲವಾದ ಸ್ಫಟಿಕಲಿಂಗವನ್ನು ವರುಣನು ಯಾವಾಗಲೂ ಪೂಜೆಮಾಡುತ್ತಿರುವನು. ಅದರಿಂದಲೇ ಅವನಿಗೆ ಬಲವಿಶಿಷ್ಟವಾದ ವರುಣಪದವಿಯು ಪ್ರಾಪ್ತವಾಯಿತು.

ಅಗ್ನಿತ್ವಂ ಪ್ರಾಪ್ತವಾನ್ತೇನ ತೇಜೋರೂಪಸಮನ್ವಿತಂ ।
ತಾಮ್ರಲಿಂಗಂ ಸದಾಕಾಲಂ ಭಕ್ತ್ಯಾ ದೇವೋ ದಿವಾಕರಃ ॥೩೨॥

ತ್ರಿಕಾಲಂ ಪೂಜಯತ್ಯೇವ ತೇನ ಸೂರ್ಯತ್ವಮಾಪ್ತವಾನ್ ।
ಮುಕ್ತಾಫಲಮಯಂ ಲಿಂಗಂ ಸೋಮಃ ಪೂಜಯತೇ ಸದಾ ॥೩೩॥

ತೇನ ಸೋಮೋಽಪಿ ಸಂಪ್ರಾಪ ಸುಧಾರಶ್ಮಿತ್ವಮದ್ಭುತಂ ।
ಶಾಲಿಪಿಷ್ಟಮಯಂ ಲಿಂಗಂ ಗ್ರಹಾಃ ಸಂಪೂಜಯಂತ್ಯಪಿ ॥೩೪॥

ಘನೀಭೂತಾಜ್ಯಲಿಂಗಾನಿ ನಕ್ಷತ್ರಾಣ್ಯರ್ಚಯಂತಿ ಹಿ ।
ಕರ್ಪೂರಖಂಡಜಂ ಲಿಂಗಂ ನಾಗಾಃ ಸಂಪೂಜಯಂತಿ ಹಿ ॥೩೫॥

ಪ್ರವಾಳಕಮಯಂ ಲಿಂಗಂ ಮರುತಃ ಪೂಜಯಂತಿ ಹಿ ।
ಆದಿತ್ಯಾಃ ಪೂಜಯಂತ್ಯೇವಂ ಗೋಮೇದಂ ಲಿಂಗಮುತ್ತಮಂ ॥೩೬॥

ಪುಷ್ಯರಾಗಮಯಂ ಲಿಂಗಂ ರುದ್ರಾಃ ಸಂಪೂಜಯಂತ್ಯಪಿ ।
ವೈಡೂರ್ಯಕಮಯಂ ಲಿಂಗಂ ನಿಋುಋುತಿಃ ಪೂಜಯೇತ್ಸದಾ ॥೩೭॥

---

ಅಗ್ನಿಯು ಯಾವಾಗಲೂ ಅನ್ನಮಯವಾದ ಲಿಂಗವನ್ನು ಪೂಜಿಸುತ್ತಾ ತೇಜೋ ರೂಪವಿಶಿಷ್ಟವಾದ ಅಗ್ನಿಪದವಿಯನ್ನು ಪಡೆದಿದ್ದಾನೆ. ॥೨೯-೩೦-೩೧॥

ತಾಮ್ರದ ಶಿವಲಿಂಗವನ್ನು ವಿಧಿವತ್ತಾಗಿ ಸೂರ್ಯನು ಮೂರುಕಾಲಗಳಲ್ಲಿಯೂ ಪೂಜೆಮಾಡಿ ಅದರಿಂದ ಸೂರ್ಯಪದವಿಯನ್ನು ಪಡೆದನು. ಚಂದ್ರನು ಮುತ್ತಿನ ಲಿಂಗವನ್ನು ಅನವರತವೂ ಪೂಜಿಸುತ್ತಾ ಅದ್ಭುತವಾದ ಅಮೃತಕಿರಣಗಳುಳ್ಳವ ನಾದನು. ಗ್ರಹಗಳು ಅಕ್ಕಿಯ ಹಿಟ್ಟಿನಲ್ಲಿ ನಿರ್ಮಿತವಾದ ಶಿವಲಿಂಗವನ್ನು ಪೂಜೆ ಮಾಡುತ್ತಾ ಗ್ರಹಮಂಡಲದಲ್ಲಿ ಸ್ವಶಕ್ತಿಯಿಂದ ಸುತ್ತುತ್ತಿರುವರು. ॥೩೨-೩೩-೩೪॥

ನಕ್ಷತ್ರಗಳು ಗಟ್ಟಿಯಾದ ತುಪ್ಪದ ಲಿಂಗವನ್ನೂ, ನಾಗದೇವತೆಗಳು ಕರ್ಪೂರದ ತುಂಡಿನ ಲಿಂಗವನ್ನೂ, ಮರುತ್ತುಗಳು ಹವಳದ ಲಿಂಗವನ್ನೂ, ಸೂರ್ಯರು ಗೋಮೇದಕರಚಿತವಾದ ಉತ್ತಮ ಲಿಂಗವನ್ನೂ, ಏಕಾದಶರುದ್ರರು ಪುಷ್ಯರಾಗದ ಶಿವಲಿಂಗವನ್ನೂ, ನಿಋುಋುತಿಯು ವೈಡೂರ್ಯದ ಲಿಂಗವನ್ನೂ, ಯಮನು ಕಬ್ಬಿಣದಿಂದ ಮಾಡಿದ ಶಿವಲಿಂಗವನ್ನೂ, ಈಶಾನನು ಮರಕತಮಣಿಯ

ಯಮಃ ಪೂಜಯತೇ ಲಿಂಗಂ ನಿತ್ಯಮಾಯಸನಿರ್ಮಿತಂ ।
ಈಶಾನಃ ಪೂಜಯತ್ಯೇವ ಲಿಂಗಂ ಮರಕತೋದ್ಭವಂ ॥೩೮॥

ನಿತ್ಯಂ ದಾರುಮಯಂ ಲಿಂಗಂ ಗುಹ್ಯಕಾಃ ಪೂಜಯಂತ್ಯಪಿ ।
ಸದಾ ಸೀಸಮಯಂ ಲಿಂಗಂ ನಾಗಾಃ ಸಂಪೂಜಯಂತ್ಯಪಿ ॥೩೯॥

ಅಸುರಾಃ ಪೂಜಯಂತ್ಯೇವ ಲಿಂಗಂ ತಗರಸಂಭವಂ ।
ತೇನ ಜನ್ಯೇ ಬಲೋಪೇತಾ ಭವಂತಿ ನಿಯತಂ ಮುನೇ ॥೪೦॥

ಗಜದಂತಮಯಂ ಲಿಂಗಂ ರಾಕ್ಷಸಾಃ ಪೂಜಯಂತ್ಯಪಿ ।
ಗಂಧರ್ವಾಃ ಕೌಂಕುಮಂ ಲಿಂಗಂ ಭಕ್ತ್ಯಾಸಂಪೂಜಯಂತಿ ಹಿ ॥೪೧॥

ಗಂಧಲಿಂಗಂ ಪೂಜಯಂತಿ ನಿಯತಂ ವಾಪ್ಸರೋವರಾಃ ।
ಭಸ್ಮಲಿಂಗಂ ಹಿ ಪಿತರಃ ಪೂಜಯಂತಿ ಸದಾ ಮುನೇ ॥೪೨॥

ಹರಿದ್ರಾನಿರ್ಮಿತಂ ಲಿಂಗಂ ಮಾತರಃ ಪೂಜಯಂತಿ ಹಿ ।
ಅಸ್ಥಿನಿರ್ಮಿತಲಿಂಗಂ ಹಿ ಪಿಶಾಚಾಃ ಪೂಜಯಂತಿ ಹಿ ॥೪೩॥

---

ಲಿಂಗವನ್ನೂ ಯಾವಾಗಲೂ ಭಕ್ತಿಯಿಂದ ಪೂಜಿಸುತ್ತಿರುವರು. ಹೀಗೆ ಒಬ್ಬೊಬ್ಬರು ದೇವತೆಗಳು ಒಂದೊಂದು ಲೋಹಜನ್ಯವಾದ ಶಿವಲಿಂಗವನ್ನು ತಮ್ಮ ಆರಾಧ್ಯ ದೇವತೆಯನ್ನಾಗಿ ಮಾಡಿಕೊಂಡು ಪೂಜಿಸುತ್ತಿರುವರು. ॥೩೫-೩೬-೩೭-೩೮॥

ಗುಹ್ಯಕರು ನಿತ್ಯವೂ ಮರದಲಿಂಗವನ್ನೂ, ಪನ್ನಗರು ಸೀಸದಲಿಂಗವನ್ನೂ ಪೂಜೆಮಾಡುತ್ತಿರುವರು. ರಾಕ್ಷಸರು ತಗರ (ತವರ)ದ ಲಿಂಗವನ್ನು ನಿಯಮದಿಂದ ಪೂಜೆಮಾಡುತ್ತಿರುವರು. ಅಯ್ಯ ಮುನಿಯೆ ! ಇದರಿಂದ ನಿಜವಾಗಿಯೂ ಅವರು ಯುದ್ಧದಲ್ಲಿ ಬಲಿಷ್ಠರಾಗಿರುವರು. ದೈತ್ಯರು ಆನೆಯದಂತದಲಿಂಗವನ್ನೂ, ಗಂಧರ್ವರು ಕುಂಕುಮದಲಿಂಗವನ್ನೂ, ಅಪ್ಸರೆಯರಸಮೂಹವು ಗಂಧದಲಿಂಗವನ್ನೂ, ಪಿತೃ ದೇವತೆಗಳು ಭಸ್ಮದಿಂದರಚಿತವಾದಲಿಂಗವನ್ನೂ ಯಾವಾಗಲೂ ಭಕ್ತಿಯಿಂದ ಪೂಜೆ ಮಾಡುತ್ತಿರುವರು. ಜೈಗೀಷವ್ಯಮುನಿಯೆ ! ಕೇಳು. ಮಾತೃಗಣಗಳು ಅರಿಸಿನದ ಶಿವ ಲಿಂಗವನ್ನೂ ಪಿಶಾಚಿಗಳೆಂಬದೇವತಾಭೇದಗಳು ಮೂಳೆಯಲಿಂಗವನ್ನೂ ಪೂಜೆ ಮಾಡುತ್ತಿರುವರು. ॥೩೯-೪೦-೪೧-೪೨-೪೩॥

ಕೇಶನಿರ್ಮಿತಲಿಂಗಂ ಹಿ ಕಿಂಪುರುಷಾಃ ಪ್ರೂಜಯಂತಿ ಹಿ ।
ಮನವಃ ಸೈಕತಂ ಲಿಂಗಂ ಪೂಜಯಂತಿ ಸದಾ ಮುನೇ ॥೪೪॥

ರಸೇಂದ್ರಕಲಿತಂ ಲಿಂಗಂ ಮುನಯಃ ಪೂಜಯಂತಿ ಹಿ ।
ಮಾನವಾ ನಾರ್ಮದಂ ಲಿಂಗಂ ಸದಾ ಸಂಪೂಜಯಂತಿ ಹಿ ॥೪೫॥

ಏವಂ ದೇವಾಃ ಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ಪೂಜಯಂತಿ ಸದಾ ಲಿಂಗಮೀಶಾನಂ ದೇವನಾಯಕಂ ॥೪೬॥

ಸರ್ವಲಿಂಗಮಯೋ ಲೋಕಃ ಜಗಲ್ಲಿಂಗೇ ಪ್ರತಿಷ್ಠಿತಃ ।
ತಸ್ಮಾತ್ಸಂಪೂಜಯೇಲ್ಲಿಂಗಂ ಯದಿಚ್ಛೇತ್ಸಿದ್ಧಿಮಾತ್ಮನಃ ॥೪೭॥

ಲಿಂಗೇ ದೇವೋ ಮಹಾದೇವಃ ಸಹ ದೇವ್ಯಾವ್ಯವಸ್ಥಿತಃ ।
ಅನುಗ್ರಹಾಯ ಲೋಕಾನಾಂ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥೪೮॥

ಯೋ ನ ಪೂಜಯತೇ ಮೋಹಾಲ್ಲಿಂಗಮೀಶಸ್ಯ ವೈ ಮುನೇ ।
ನಾಸೌ ಸ್ವರ್ಗಸ್ಯ ಮೋಕ್ಷಸ್ಯ ಭಾಜನಂ ನ ಭವೇದ್ಧ್ರುವಂ ॥೪೯॥

---

ಕಿಂಪುರುಷರು, ಕೂದಲಿನಿಂದ ನಿರ್ಮಿತವಾದಲಿಂಗವನ್ನೂ ಮನುಗಳು ಮರಳಿನಲಿಂಗವನ್ನೂ, ಮುನಿಗಳು ರಸೇಂದ್ರ (ಪಾದರಸ) ರಚಿತವಾದ ಲಿಂಗವನ್ನೂ, ಮನುಜರು ನರ್ಮದಾನದಿಯಲ್ಲಿ ದೊರೆಯುವ ಶಿವಲಿಂಗವನ್ನೂ ಯಾವಾಗಲೂ ಪೂಜೆಮಾಡುತ್ತಿರುವರು. ॥೪೪-೪೫॥

ಅಯ್ಯ ಜೈಗೀಷವ್ಯಮುನಿಯೆ! ಹೀಗೆ ದೇವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗರೇಮೊದಲಾದವರು ದೇವೇಶ್ವರನಾದ ಈಶ್ವರನ ಲಿಂಗವನ್ನು ಯಾವಾಗಲೂ ಪೂಜಿಸುತ್ತಿರುವರು. ಸರ್ವಲಿಂಗಸ್ವರೂಪವಾದ ಈ ಜಗತ್ತು ಜಗಲ್ಲಿಂಗದಲ್ಲಿ ಪ್ರತಿಷ್ಠಿತವಾಗಿದೆ. ಆದ್ದರಿಂದಲೇ ಸರ್ವಸಿದ್ಧಿಯನ್ನು ಬಯಸುವವನು ಶಿವಲಿಂಗ ವನ್ನು ಪೂಜೆಮಾಡಬೇಕು. ॥೪೬-೪೭॥

ಲೋಕಾನುಗ್ರಹಕ್ಕೋಸ್ಕರ ಶಿವಲಿಂಗದಲ್ಲಿ ಮಹಾದೇವನು ಪಾರ್ವತಿಯೊಡನೆ ನೆಲಸಿರುವನು. ಆದ್ದರಿಂದಲೇ ಶಿವಲಿಂಗವನ್ನು ತಪ್ಪದೆ ಪೂಜೆಮಾಡಬೇಕು. ಅಯ್ಯ ಮುನಿಯೆ! ಅಜ್ಞಾನದಿಂದ ಈ ಶಿವಲಿಂಗವನ್ನು ಪೂಜೆಮಾಡದವನು ಸ್ವರ್ಗ ಕ್ಕಾಗಲೀ ಮೋಕ್ಷಕ್ಕಾಗಲೀ ಅಧಿಕಾರಿಯಾಗಲಾರನೆಂದು ತಿಳಿ. ತ್ರಿಲೋಕಾಧಿಪನಾದ

ಯಸ್ತು ಪೂಜಯತೇ ಲಿಂಗಂ ನಿತ್ಯಂ ತ್ರಿಭುವನೇಶಿತುಃ ।
ಸಃ ಸ್ವರ್ಗಮೋಕ್ಷರಾಜ್ಯಾನಾಂ ಕ್ಷಿಪ್ರಂ ಭವತಿ ಭಾಜನಂ ॥೫೦॥

ತಸ್ಮಾದೇಕಮನಾ ಭೂತ್ವಾ ಯಾವಜ್ಜೀವಂ ಪ್ರತಿಜ್ಞಯಾ ।
ಅರ್ಚಯೀತ ಸದಾ ಲಿಂಗಮಾಪನ್ನೋಽಪಿ ಸದಾ ಬುಧಃ ॥೫೧॥

ವರಂ ಪ್ರಾಣಪರಿತ್ಯಾಗಃ ಶಿರಶ್ಛೇದೋಽಪಿ ವಾ ವರಃ ।
ನ ತ್ವನಭ್ಯರ್ಚ ಭುಂಜೀಯಾಲ್ಲಿಂಗೇ ದೇವಂ ಮಹೇಶ್ವರಂ ॥೫೨॥

ಏವಂ ನಿರ್ವಹತೇ ಯಸ್ತು ಶಿವಲಿಂಗಾರ್ಚನಾವಿಧೌ ।
ಮನುಷ್ಯದೇಹೋಽಪಿ ಮುನೇ ಸ ರುದ್ರಗಣಪೋತ್ತಮಃ ॥೫೩॥

ನಾಸ್ತಿ ಲಿಂಗಾರ್ಚನಾತ್ಪುಣ್ಯಂ ನಾಸ್ತಿಲಿಂಗಾರ್ಚನಾತ್ಪರಃ ।
ನಾಸ್ತಿ ಲಿಂಗಾರ್ಚನಾದ್ದಾನಂ ನಾಸ್ತಿಲಿಂಗಾರ್ಚನಾಜ್ಜಪಃ ॥೫೪॥

ನ ಲಿಂಗಾರ್ಚನತುಲ್ಯಂ ಹಿ ಪುಣ್ಯಮಸ್ತಿ ಜಗತ್ತ್ರಯೇ ।
ಯತೋತ್ತರ ಪ್ರೀತಿಕರಂ ಮಹೇಶಸ್ಯ ಸದಾ ಮುನೇ ॥೫೫॥

---

ಮಹೇಶ್ವರನಲಿಂಗವನ್ನು ಭಕ್ತಿಯಿಂದ ಪೂಜೆಮಾಡುವವನು ಸ್ವರ್ಗ, ಮೋಕ್ಷ ಅಥವಾ ರಾಜ್ಯಪ್ರಾಪ್ತಿರೂಪವಾದ ಫಲಕ್ಕೆ ಜಾಗ್ರತೆ ಭಾಗಿಯಾಗುವನು. ॥೪೮-೪೯-೫೦॥

ಆದ್ದರಿಂದ ಬದುಕಿರುವ ವರೆಗೂ ಎಂತಹ ಅವಸ್ಥೆಯಲ್ಲಿದ್ದರೂ ವಿವೇಕಿಯಾದವನು ಏಕಾಗ್ರಮನಸ್ಕನಾಗಿ ಯಾವಾಗಲೂ ಶಿವಲಿಂಗಾರ್ಚನೆ ಮಾಡಬೇಕು. ಒಂದುವೇಳೆ ಅನ್ಯಪ್ರಾಣತ್ಯಾಗ, ಶಿರಶ್ಛೇದ ಇಂತಹ ಅಕೃತ್ಯಗಳೂ ಶ್ರೇಷ್ಠವೆನಿಸಬಹುದು. ಆದರೆ ಶಿವಲಿಂಗದಲ್ಲಿ ಮಹಾದೇವನನ್ನು ಪೂಜಿಸದೇ ಊಟಮಾಡುವುದು ಅದಕ್ಕಿಂತಲೂ ಗರ್ಹ್ಯವಾದುದು. ಎಲೈ ಮುನಿಯೆ, ಹೀಗೆ ಶಿವಲಿಂಗಪೂಜಾವಿಧಿಯಲ್ಲಿ ನಿಯಮವಹಿಸುವವನು ಮನುಷ್ಯದೇಹವನ್ನು ಹೊಂದಿದ್ದರೂ ರುದ್ರಗಣಗಳಲ್ಲಿ ಉತ್ತಮನೆನಿಸುವನು. ॥೫೧-೫೨-೫೩॥

ಲಿಂಗಪೂಜೆಗಿಂತಲೂ ಉತ್ತಮಪುಣ್ಯಪ್ರದವಾದದ್ದೂ, ಶ್ರೇಷ್ಠವೆನಿಸಿದುದೂ, ಉತ್ಕೃಷ್ಟವಾದ ದಾನವೆನಿಸಿದುದೂ, ಮತ್ತು ಸಿದ್ಧಿಪ್ರದವಾದ ಜಪ ಇವುಗಳು

ನ ಹೋಮೈರ್ನ ಮಹಾದಾನೈಃ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೫೬॥

ನ ಯಜ್ಞೈರ್ನ ವ್ರತೈರ್ವಿಪ್ರ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ಪ್ರೀಯತೇ ಭಗವಾಂಛಿವಃ ॥೫೭॥

ನಾಶ್ರಮಾಚಾರಧರ್ಮೈರ್ವಾ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೫೮॥

ನ ಕ್ರತೋರ್ವಾ ಪ್ರದಾನೈರ್ವಾ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೫೯॥

ನ ಭೂಮಂಡಲದಾನೈರ್ವಾ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೬೦॥

ನ ತೀರ್ಥಾಟನಕೈರ್ವಿಪ್ರ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೬೧॥

ನ ಧ್ಯಾನೈರ್ನ ಜಪೈರ್ವಿಪ್ರ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೬೨॥

ನ ಪ್ರಾಣಾಯಾಮನಿಯಮೈಃ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೬೩॥

---

ಇಲ್ಲವೇ ಇಲ್ಲ. ಓ ಮುನಿಯೆ, ಮೂರುಲೋಕದಲ್ಲಿಯೂ ಶಿವಲಿಂಗಪೂಜೆಗೆ ಸಮಾನವಾದ ಪುಣ್ಯವೇ ಇಲ್ಲವೆಂದು ತಿಳಿ; ಏತಕ್ಕೆಂದರೆ ಇದು ಉತ್ತರೋತ್ತರವಾಗಿ ಮಹೇಶ್ವರನಿಗೆ ಪ್ರೀತಿಯನ್ನುಂಟುಮಾಡುವುದಾಗಿರುವುದು. ||೫೪-೫೫||

ಅಯ್ಯಾ ಜೈಗೀಷವ್ಯನೆ, ಭಗವಂತನಾದ ಶಿವನು ಲಿಂಗಪೂಜೆಯಿಂದ ಪ್ರೀತನಾಗುವಂತೆ ಹೋಮ, ಮಹಾದಾನಗಳು, ಯಜ್ಞ, ವ್ರತ, ಆಶ್ರಮಗಳ ಆಚಾರಧರ್ಮಗಳು, ಯಜ್ಞದಾನ, ಭೂಮಂಡಲದಾನ, ತೀರ್ಥಯಾತ್ರೆ, ಧ್ಯಾನ, ಜಪ, ಪ್ರಾಣಾಯಾಮ, ನಿಯಮ, ಶಮ, ದಮವೇ ಮುಂತಾದ ಗುಣಗಳು, ನಿಯಮ, ಆಸನ,

ನ ಶಾಂತಿದಾಂತ್ಯಾದಿಗುಣೈಃ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೬೪॥

ನಿಯಮಾಸನಯೋಗೈರ್ವಾ ಪ್ರೀಯತೇ ಭಗವಾಂಛಿವಃ ।
ಯಥಾ ಲಿಂಗಾರ್ಚನಾತ್ಪ್ರೀತೋ ದೇವದೇವೋ ಮಹೇಶ್ವರಃ ॥೬೫॥

ನ ಮೌನೈರ್ನೈವ ಕಾಷಾಯವಸನೈರ್ವಾ ಜಟಾಜಿನೈಃ ।
ಪ್ರೀಯತೇ ಸ ಮಹಾದೇವಃ ಯಥಾ ಲಿಂಗಾರ್ಚನಾತ್ಸದಾ ॥೬೬॥

ನಾಸ್ತಿ ಲಿಂಗಾರ್ಚನಾಽಪ್ರಾಪ್ಯಂ ಪದಂ ವಾ ವಿಪ್ರಸತ್ತಮ ।
ಲೋಕೇ ನ ದೃಶ್ಯತೇ ಸರ್ವೈಃ ಶ್ರೇಷ್ಠಮೇತನ್ನ ಸಂಶಯಃ ॥೬೭॥

ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ಇತಿ ವಿಜ್ಞಾಯ ಯತ್ನೇನ ಲಿಂಗೇ ಪೂಜ್ಯೋ ಮಹೇಶ್ವರಃ ॥೬೮॥

ಅಪ್ಯಾಮಲಕಮಾತ್ರಂ ವಾ ಕೃತ್ವಾ ಲಿಂಗಂ ಪ್ರಪೂಜಯೇತ್ ।
ಅಮಂತ್ರಂ ವಾ ಸಮಂತ್ರಂ ವಾ ಕುಲಕೋಟಿಂ ಸಮುದ್ಧರೇತ್॥೬೯॥

---

ಯೋಗ ಮುಂತಾದವುಗಳಿಂದ ಎಂದಿಗೂ ಪ್ರೀತಿಹೊಂದಲಾರನು. ಕೇವಲ ಶಿವಲಿಂಗಾರಾಧನೆಯೇ ಶಿವಪ್ರೀತಿಕರವಾದುದೆಂದು ಅವಶ್ಯವಾಗಿ ತಿಳಿಯಬೇಕು. ||೫೬-೫೭-೫೮-೫೯-೬೦-೬೧-೬೨-೬೩-೬೪-೬೫||

ಯಾವಾಗಲೂ ಲಿಂಗಪೂಜೆಯಿಂದ ಪ್ರೀತಿಹೊಂದುವಂತೆ ಷಡ್ಗುಣಪೂರ್ಣನಾದ ಮಹಾದೇವನು ಮೌನ, ಕಷಾಯವಸ್ತ್ರ, ಜಟೆ, ಕೃಷ್ಣಾಜಿನ ಮುಂತಾದವುಗಳ ಧಾರಣೆಯಿಂದ ಸಂತುಷ್ಟನಾಗಲಾರನು. ಅಯ್ಯ ಬ್ರಾಹ್ಮಣೋತ್ತಮನೆ! ಈ ಲಿಂಗ ಪೂಜೆಯಿಂದ ಹೊಂದಲಾಗದ ಸ್ಥಾನವೇ ಲೋಕದಲ್ಲಿ ಕಾಣುವುದಿಲ್ಲ. ಆದ್ದರಿಂದಲೇ ಇದು ಶ್ರೇಷ್ಠವೆನ್ನುವುದರಲ್ಲಿ ಸಂಶಯವೇ ಇಲ್ಲ. ||೬೬-೬೭||

ಅಯ್ಯ ಜೈಗೀಷವ್ಯನೆ, ಈ ನನ್ನ ಮಾತು ಸತ್ಯವೆಂಬುದಾಗಿ ಪದೇಪದೆ ಭುಜವೆತ್ತಿ ಹೇಳುವೆನು. ಈರೀತಿ ತಿಳಿದು ನಿಯಮದಿಂದ ಶಿವಲಿಂಗದಲ್ಲಿ ಮಹೇಶ್ವರನನ್ನು ಪೂಜೆಮಾಡಬೇಕು. ಒಂದು ನೆಲ್ಲಿಯಕಾಯಿನ ಪ್ರಮಾಣವಾಗಲೀ ಲಿಂಗವನ್ನು ಮಾಡಿಕೊಂಡು ಮಂತ್ರಪೂರ್ವಕವಾಗಲೀ ಅಥವಾ ಮಂತ್ರವಿಲ್ಲದೆಯಾಗಲೀ ಲಿಂಗ

॥ ಸ್ಕಂದ ಉವಾಚ ॥

ಲಿಂಗೇಷ್ವೇತೇಷು ಯಸ್ಮಿನ್ನಭಿರುಚಿಪರನೋ ಭಸ್ಮರುದ್ರಾಕ್ಷಧೃಕ್ ಸ್ಯಾ-
ದಭ್ಯರ್ಚ್ಯಾನುದಿನಂ ಮಹೇಶ್ವರಪದಧ್ಯಾನೈಕಸನ್ಮಾನಸಃ ।
ಬಿಲ್ವಾನಾಂ ಚ ದಲೈಃ ಸದಂಬುಜಸುಮೈರ್ಯಃ ಕೋಽಪಿ ರಂಕೋಽಪಿವಾ
ವಿಪ್ರೋ ವಾ ಗಿರಿಕನ್ಯಕೇ ಸ ಹಿ ತದಾ ಮುಕ್ತಾಘಸಂಘೋ ಭವೇತ್ ॥೭೦॥

ಭವೇತ್ಕ್ಷೋಣ್ಯಾಂ ಕ್ಷೀಣೋ ವರದುರಿತರಾಶಿಃ ಕಿಲ ಶಿವೇ
ಕ್ಷಣಾರ್ಧಮಪಿ ಶಂಕರಂ ಕ್ಷಣಿಕಲಿಂಗದತ್ತೇಕ್ಷಣಃ ।
ಅಲಕ್ಷಣ್ಯಂ ಪುಣ್ಯಂ ಪರಿಲಭತಿ ಗಣ್ಯಾದಿರಹಿತಂ
ಗಣಶ್ರೇಷ್ಠೋ ಭಕ್ತ್ಯಾ ಮಮ ಪದಜಪುಣ್ಯೇನ ಗತಿಭಾಕ್ ॥೭೧॥

ಇತಿ ಶ್ರೀ ಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಲಿಂಗಪೂಜಾಮಹಿಮಾ
ವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

ಪೂಜೆಯನ್ನು ಮಾಡಲೇಬೇಕು. ಇದರಿಂದ ಕೋಟ್ಯಂತರ ಕುಲಗಳು ಉದ್ಧಾರ
ವಾಗುವುವು ॥೬೮-೬೯॥

ಓ ಜೈಗೀಷವ್ಯ ಮುನಿಯೆ, ನಾನು ಹಿಂದೆ ಹೇಳಿದ ಲಿಂಗಗಳಲ್ಲಿ ತನಗೆ
ಇಷ್ಟವಾದ ಲಿಂಗವನ್ನು ಪಡೆದು ಭಸ್ಮರುದ್ರಾಕ್ಷಗಳನ್ನು ಧರಿಸಿ, ಅನುದಿನವೂ ಮಹೇ
ಶ್ವರನ ಪಾದಧ್ಯಾನಾಸಕ್ತವಾದ ಮನಸ್ಸಿನಿಂದ ಬಿಲ್ವದಳ, ಒಳ್ಳೆಯ ತಾವರೆಹೂಗಳು
ಇವುಗಳಿಂದ ಪೂಜೆಮಾಡುವವನು ಚಂಡಾಲನಾಗಿರಲೀ, ಬ್ರಾಹ್ಮಣನೇ ಆಗಲೀ
ಅವನು ಪಾಪರಾಶಿಗಳಿಂದ ಮುಕ್ತನಾಗುವನೆಂದು ತಿಳಿ. ॥೭೦॥

ಪಾರ್ವತಿಯೇ ಕೇಳು, ಅರ್ಧಕ್ಷಣಕಾಲವಾದರೂ ಕ್ಷಣಿಕಲಿಂಗದಲ್ಲಿ ದೃಷ್ಟಿ
ಯಿಟ್ಟು ಶಂಕರನನ್ನು ಪೂಜೆಮಾಡುವವನು ಭೂಮಿಯಲ್ಲಿ ಮಹಾಪಾತಕರಾಶಿ
ಗಳಿಂದಲೂ ಮುಕ್ತನಾಗುವನು. ಅಲ್ಲದೇ ಯೋಚಿಸಲಸದಳವಾದ ಮತ್ತು ಗಣನಾದಿ
ಗಳಿಗೆ ಸಿಲುಕದ ಪುಣ್ಯವನ್ನೂ ಹೊಂದಿ ನನ್ನ ಪಾದಭಕ್ತಿರೂಪವಾದ ಪುಣ್ಯದಿಂದ

ಗಣಶ್ರೇಷ್ಠನಾಗಿ ಕೊನೆಗೆ ನನ್ನ ದಿವ್ಯಗತಿಯನ್ನು ಪಡೆಯುವನು, ಎಂದು ಮಹೇಶ್ವರನು ಪಾರ್ವತಿಗೆ ಹೇಳಿದುದನ್ನು ಜೈಗೀಷವ್ಯನಿಗೆ ಕುಮಾರಸ್ವಾಮಿಯು ತಿಳಿಸಿದನು. ||೭೧||

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ಲಿಂಗಪೂಜಾಮಹಿಮೆಯ ವರ್ಣನೆಯೆಂಬ ನಲವತ್ತೆರಡನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

ಈಶಾನಾಖ್ಯೇ

ದಶಮಾಂಶಪೂರ್ವಾರ್ಧೇ

## ತ್ರಿಚತ್ವಾರಿಂಶೋಽಧ್ಯಾಯಃ

|| ಸ್ಕಂದ ಉವಾಚ ||

ಪುನರ್ವಕ್ಷ್ಯೇಽದ್ಯ ಮಾಹಾತ್ಮ್ಯಂ ಶಿವಲಿಂಗಾರ್ಚನಸ್ಯ ಹಿ ।
ನಿತ್ಯಂ ನೈಮಿತ್ತಿಕಂ ಕಾಮ್ಯಂ ಲಿಂಗಪೂಜಾವಿನಿರ್ಣಯಂ ||೧||

ಲಿಂಗಭೇದೇ ಫಲಂ ಚಾಪಿ ದೇವ್ಯೈ ದೇವೇನ ಕೀರ್ತಿತಂ ||೨||

|| ದೇವ್ಯುವಾಚ ||

ದೇವದೇವ ಮಹಾದೇವ ಕೈಲಾಸಶಿಖರಪ್ರಿಯ ।
ತವ ಪ್ರಿಯಕರಾಣೀಹ ಕಾನಿ ಲಿಂಗಾನಿ ಶಂಕರ ||೩||

---

## ನಲವತ್ತುಮೂರನೆಯ ಅಧ್ಯಾಯವು

ಅಯ್ಯ ಜೈಗೀಷವ್ಯನೆ, ಲಿಂಗಪೂಜಾಮಹಿಮೆಯನ್ನು ಮತ್ತೂ ಹೇಳುತ್ತೇನೆ ಕೇಳು ; ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂದು ಮೂರು ಬಗೆಯಾಗಿ ಶಿವಲಿಂಗಪೂಜೆಯು ನಿರ್ಣಯಿಸಲ್ಪಟ್ಟಿದೆ. ಅಲ್ಲದೇ ಪೂಜಾರ್ಥವಾಗಿ ಹೊಂದಿರುವ ಶಿವಲಿಂಗಭೇದದಿಂದ ಫಲಭೇದವೂ ಉಕ್ತವಾಗಿದೆ. ಅದೇ ವಿಚಾರವಾಗಿ ಮಹಾದೇವನು ದೇವಿಗೆ ಹೇಳಿದ ಈ ವಿಷಯವನ್ನರುಹುವೆನು ಕೇಳು ; ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಗೌರೀಪರಶಿವರ ಸಂಭಾಷಣೆಯನ್ನು ಅನುವಾದ ಮಾಡಲಾರಂಭಿಸಿದನು. ||೧-೨||

" ದೇವಾದಿದೇವನಾದ ಮಹೇಶನೆ, ಕೈಲಾಸಶಿಖರವಾಸಪ್ರಿಯನೆ, ಜಗನ್ಮಂಗಳಕರನೆ, ಲೋಕದಲ್ಲಿ ನಿನಗೆ ಪ್ರಿಯಕರಗಳಾದ ಶಿವಲಿಂಗಗಳಾವುವು ?

ತೇಷಾಮುತ್ಕರ್ಷತಃ ಶಂಭೋಃ ಪೂಜಾಂ ಚೈವಾಧಿಕಾರಿತಾಂ ।
ವದ ಲಿಂಗಾನಿ ಕಾನಿಸ್ಯುಸ್ತವ ಪೂಜಾವಿಧೌ ಶಿವ ॥೪॥

॥ ಈಶ್ವರ ಉವಾಚ ॥

ಶೃಣು ಪದ್ಮಪಲಾಶಾಕ್ಷಿ ಗಿರಿಜೇ ವಿರಜೇಽಮಲೇ ।
ನಿತ್ಯನೈಮಿತ್ತಿಕಾದೀನಿ ವಕ್ಷ್ಯೇ ಲಿಂಗಾನ್ಯನುಕ್ರಮಾತ್ ॥೫॥

ತೇಷಾಂ ಪೂಜಾವಿಧಿಂ ಚಾಪಿ ಮಾನಂ ಲಕ್ಷಣಮೀಶ್ವರಿ ।
ಪಾರ್ಥಿವಾತ್ತೈಜಸಂ ಲಿಂಗಂ ವರಿಷ್ಠಂ ಪರಿಕೀರ್ತಿತಂ ॥೬॥

ತೈಜಸಾದ್ರತ್ನಲಿಂಗಾನಿ ವರಿಷ್ಠಾನ್ಯರ್ಚನಾವಿಧೌ ।
ಚರಾಚರವಿಭಾಗೇನ ಲಿಂಗಂ ದ್ವೇಧಾ ವಿನಿರ್ಮಿತಂ ॥೭॥

ಪಾಷಾಣಂ ಸ್ಥಾವರಂ ಪ್ರಾಹುರ್ಬಾಣಲಿಂಗವಿವರ್ಜಿತಂ ।
ತತ್ಸ್ಥೂಲಂ ಸ್ಥಾವರಂ ಪ್ರಾಹುಶ್ಚರಂ ತು ಚತುರಂಗುಲಂ ॥೮॥

---

ಅವುಗಳ ಶ್ರೇಷ್ಠತೆ, ಅಧಿಕಾರಿಗಳು ಮತ್ತು ಪೂಜಾವಿಧಿಯನ್ನೂ ಹಾಗೆಯೇ ಅಂತಹ ಶಿವಲಿಂಗಗಳ ಸ್ವರೂಪವನ್ನೂ ವಿಸ್ತಾರವಾಗಿ ನನಗೆ ತಿಳಿಸಬೇಕು'' ಎಂದು ಪಾರ್ವತಿಯು ಮಹೇಶನನ್ನಿಂತು ಪ್ರಶ್ನಿಸಿದಳು. ॥೩-೪॥

ತಾವರೆಯ ದಳದಂತೆ ಕಣ್ಣುಗಳುಳ್ಳವಳೂ, ರಜೋಗುಣರಹಿತಳೂ, ನಿರ್ಮಲಳೂ ಆದ ಪಾರ್ವತಿಯೆ, ನಿತ್ಯ, ನೈಮಿತ್ತಿಕ ಮತ್ತು ಕಾಮ್ಯರೂಪಗಳಾದ ಶಿವಲಿಂಗಗಳ ಸ್ವರೂಪವನ್ನು ಈಗ ನಿನಗೆ ಕ್ರಮವಾಗಿ ಹೇಳುತ್ತೇನೆ ಕೇಳು; ಅವುಗಳ ಪೂಜಾವಿಧಿ, ಪ್ರಮಾಣ, ಲಕ್ಷಣಗಳನ್ನು ನಿನಗೆ ತಿಳಿಯುವಂತೆ ಹೇಳುವೆನು ಲಾಲಿಸು; ಪಾರ್ಥಿವಲಿಂಗಕ್ಕಿಂತಲೂ ತೈಜಸಲಿಂಗವೂ, ತೈಜಸಲಿಂಗಕ್ಕಿಂತ ರತ್ನಲಿಂಗಗಳೂ ಪೂಜಾವಿಧಿಯಲ್ಲಿ ಉತ್ತಮವೆನಿಸಿರುವುವು. ದೇವಿಯೇ, ಈ ಲಿಂಗವು ಚರ (ಜಂಗಮ) ಮತ್ತು ಅಚರ (ಸ್ಥಾವರ) ವಿಭಾಗದಿಂದ ಎರಡುಬಗೆಯಾಗಿ ನಿರ್ಮಿಸಲ್ಪಟ್ಟಿವೆ. ॥೫-೬-೭॥

ಬಾಣಲಿಂಗವನ್ನು ಬಿಟ್ಟು ಉಳಿದ ಕಲ್ಲಿನ ಶಿವಲಿಂಗಗಳೆಲ್ಲಾ ಸ್ಥಾವರ ಲಿಂಗಗಳೆಂದು ಹೇಳಲ್ಪಡುವುವು. ಆ ಬಾಣಲಿಂಗದಲ್ಲಿಯೂ ಅತಿದಪ್ಪನಾದ್ದನ್ನು ಮಾತ್ರ ಸ್ಥಾವರಲಿಂಗವೆಂದೇ ಹೇಳುತ್ತಾರೆ. ಚರಲಿಂಗವಾದರೋ ಕೇವಲ ನಾಲ್ಕೇ

ಸರ್ವಾಣ್ಯಪಿ ಚ ಲಿಂಗಾನಿ ಸ್ಥೂಲಾನ್ಯೇವ ಚ ಶಸ್ಯತೇ ।
ರತ್ನಾನಿ ಸೂಕ್ಷ್ಮಲಿಂಗಾನಿ ಪ್ರಶಸ್ತಾನಿ ಶುಭಾನನೇ ॥೯॥

ಸತ್ರಾಸಾನ್ಯಪಿ ದೇವೇಶಿ ಶಸ್ತಾನಿ ಮಮ ಪೂಜನೇ ।
ರತ್ನಲಿಂಗೇಷು ದೇವೇಶಿ ಫಲಂ ವಕ್ಷ್ಯೇಽನುಪೂರ್ವಶಃ ॥೧೦॥

ಆಯುರ್ವೃದ್ಧಿಕರಂ ಹೀರಂ ರೋಗಹೃನ್ಮೌಕ್ತಿಕೋದ್ಭವಂ ।
ಸುಖಕೃತ್ಪುಷ್ಯರಾಗೋತ್ಥಂ ವೈಡೂರ್ಯಂ ಶತ್ರುನಾಶಕಂ ॥೧೧॥

ಪದ್ಮರಾಗಂ ಚ ಲಕ್ಷ್ಮೀದಂ ಇಂದ್ರನೀಲಂ ಯಶಃಪ್ರದಂ ।
ವೈದ್ರುಮಂ ಧನದಂ ನಿತ್ಯಂ ಗೋಮೇದಂ ಪುತ್ರಪೌತ್ರದಂ ॥೧೨॥

ಲಿಂಗಂ ಮರಕತಂ ಪುಷ್ಟ್ಯೈ ಸ್ಫಾಟಿಕಂ ಸರ್ವಕಾಮದಂ ।
ಹೈಮಜಂ ಮುಕ್ತಿದಂ ದೇವಿ ರಾಜತಂ ಜ್ಞಾನದಂ ನೃಣಾಂ ॥೧೩॥

---

ಅಂಗುಲ ಪ್ರಮಾಣವುಳ್ಳದ್ದು. ಆದಕ್ಕಿಂತ ದೊಡ್ಡದಾದುದೆಲ್ಲಾ ಸ್ಥಾವರಲಿಂಗಗಳೆನಿಸುವುವು- ಸ್ಥೂಲವಾದ ಎಲ್ಲಾ ಲಿಂಗಗಳೂ ಪ್ರಶಸ್ತವೆನಿಸುವುವು. ಆದರೆ ಸೂಕ್ಷ್ಮವಾದ ರತ್ನಲಿಂಗಗಳು ಮಾತ್ರ ಶ್ರೇಷ್ಠವೆನಿಸುವುವು. ಮತ್ತೊಂದು ಆವರಣದಲ್ಲಿ ಅಡಗಿರುವ ರತ್ನಲಿಂಗಗಳೂ ನನ್ನ ಪೂಜೆಯಲ್ಲಿ ಪ್ರಶಸ್ತವೆನಿಸುವುವು. ದೇವೇಶ್ವರಿ, ಇನ್ನು ರತ್ನಲಿಂಗಗಳ ಆರಾಧನೆಯಿಂದ ದೊರೆಯುವ ಫಲವನ್ನು ಹೇಳುವೆನು ಕೇಳು. ||೮-೯-೧೦||

ಹೀರಮಣಿಯ ಲಿಂಗವು ಆಯುಷ್ಯವೃದ್ಧಿಯನ್ನುಂಟುಮಾಡುವುದು; ಮುತ್ತಿನಲಿಂಗವು ರೋಗನಾಶಕವಾದುದು. ಪುಷ್ಯರಾಗದಲಿಂಗವು ಸುಖವನ್ನುಂಟುಮಾಡುವುದು. ವೈಡೂರ್ಯಲಿಂಗವು ಶತ್ರುನಾಶಕವಾಗಿರುವುದು. ಪದ್ಮರಾಗಮಣಿಯ ಲಿಂಗವು ಕೀರ್ತಿಪ್ರದವು. ಹವಳದಲಿಂಗವು ಧನಪ್ರದವು; ಗೋಮೇದಿಕಲಿಂಗವು ಪುತ್ರಸಂತಾನವನ್ನುಂಟುಮಾಡುವುದು. ಮರಕತಲಿಂಗವು ಪುಷ್ಟಿಕರವಾದುದು. ಸ್ಫಟಿಕಲಿಂಗವು ಸಕಲಮನೋರಥಗಳನ್ನೂ ಪೂರ್ಣಮಾಡುವುದು. ದೇವಿ! ಚಿನ್ನದ ಲಿಂಗವು ಮೋಕ್ಷಪ್ರದವಾಗಿರುವುದು. ಬೆಳ್ಳಿಯಲಿಂಗವು ಮಾನವರಿಗೆ ಜ್ಞಾನಪ್ರದವೆನಿಸುವುದು. ||೧೧-೧೨-೧೩||

ಪೂಜಯೇತ್ತಾಮ್ರಜಂ ಲಿಂಗಂ ಪುಷ್ಟಿತುಷ್ಟಿಪಶುಪ್ರದಂ ।
ಪುತ್ರದಂ ಪೈತ್ತಲಂ ಲಿಂಗಂ ಕಾಂಸ್ಯಂ ಕೀರ್ತಿಪ್ರದಂ ಶಿವೇ ॥೧೪॥

ಶತ್ರುಮಾರಣಕಾಮಸ್ತು ಲಿಂಗಂ ಲೋಹಮಯಂ ಯಜೇತ್ ।
ತಥಾ ಸೀಸಮಯಂ ಲಿಂಗಮಾಯುಷ್ಕಾಮೋ ಯಜೇತ್ಸದಾ ॥೧೫॥

ಶಿವೇ ರಸಮಯೇ ಲಿಂಗೇ ಸದಾ ಸನ್ನಿಹಿತೋಽಸ್ಮ್ಯಹಂ ।
ತತ್ಪೂಜಯಾ ಕೋಟಿಲಿಂಗಪೂಜಾಮಹ್ನೈವ ಲಭ್ಯತೇ ॥೧೬॥

ನ ಪ್ರತಿಷ್ಠಾದಿಸಂಸ್ಕಾರಸ್ತಲ್ಲಿಂಗಸ್ಯ ಮಹೇಶ್ವರಿ ।
ರತ್ನಧಾತುಜಲಿಂಗೇಷು ಶತಃಬ್ದಾಂತೇ ಪ್ರತಿಷ್ಠಿತಿಃ ॥೧೭॥

ಪ್ರತಿಮಾಯಾಂ ಚಿತ್ರಪುಟೇ ತಥಾ ದರ್ಶೇ ಮಹೇಶ್ವರಿ ।
ಅಯನೇ ಪರ್ವಯೋರ್ದೇವಿ ತತ್ರ ಕುರ್ಯಾತ್ಪ್ರತಿಷ್ಠಿತಿಂ ॥೧೮॥

---

ಗಿರಿರಾಜಕುಮಾರಿಯೇ, ಪುಷ್ಟಿ, ತುಷ್ಟಿ ಮತ್ತು ಪಶುಲಾಭರೂಪವಾದ ಫಲವನ್ನು ಅಪೇಕ್ಷಿಸುವವನು ತಾಮ್ರದ ಲಿಂಗವನ್ನು ಪೂಜೆಮಾಡಬೇಕು. ದೇವಿ! ಹಿತ್ತಾಳೆಯ ಲಿಂಗವು ಪುತ್ರಸಂತಾನವನ್ನುಂಟುಮಾಡುವುದು; ಕಂಚಿನಲಿಂಗವು ಕೀರ್ತಿಯನ್ನುಂಟುಮಾಡುವುದು. ಶತ್ರುಗಳನ್ನು ಸಂಹರಿಸುವ ಇಚ್ಛೆಯುಳ್ಳವನು ಕಬ್ಬಿಣದಲಿಂಗವನ್ನು ಪೂಜೆಮಾಡಬೇಕು. ಆಯುಷ್ಯವನ್ನಪೇಕ್ಷಿಸುವವನು ಯಾವಾಗಲೂ ಸೀಸದ ಶಿವಲಿಂಗವನ್ನೇ ಪೂಜೆಮಾಡಬೇಕು. ಹೀಗೆ ಒಂದೊಂದು ವಿಧವಾದ ಫಲವನ್ನಪೇಕ್ಷಿಸುವವನು ಒಂದೊಂದು ಲೋಹದ ಶಿವಲಿಂಗವನ್ನು ಆರಾಧನೆಗೆ ಉಪಯೋಗಿಸಬೇಕು. ॥೧೪-೧೫॥

ಶಂಕರಿಯೇ! ನಾನು ಯಾವಾಗಲೂ ಪಾದರಸದಲಿಂಗದಲ್ಲಿ ಸನ್ನಿಹಿತನಾಗಿರುವೆನು. ಅದನ್ನು ಪೂಜೆಮಾಡುವುದರಿಂದ ಕೋಟಿಲಿಂಗಪೂಜಾಫಲವು ಒಂದು ಹಗಲಿನಲ್ಲಿಯೇ ಲಭಿಸುವುದು. ಮಹೇಶ್ವರಿ! ಆ ಲಿಂಗಕ್ಕೆ ಪ್ರತಿಷ್ಠೆ ಮುಂತಾದ ಯಾವ ಸಂಸ್ಕಾರವೂ ಬೇಕಿಲ್ಲ. ರತ್ನ, ಧಾತು, ಇವುಗಳ ಲಿಂಗಗಳಲ್ಲಿ ನೂರುವರ್ಷಗಳ ಕೊನೆಯಲ್ಲಿ ಪುನಃ ಪುನಃ ದೇವತಾಸಾನ್ನಿಧ್ಯವನ್ನು ತರುವ ಪ್ರತಿಷ್ಠಾಕಾರ್ಯವನ್ನು ನಡೆಸಬೇಕು. ॥೧೬-೧೭॥

ದೇವಿಯೇ! ಕೇಳು ಪ್ರತಿಮೆ, ಚಿತ್ರಪಟ, ಕನ್ನಡಿ ಮುಂತಾದವುಗಳಲ್ಲಿ ಕಂಡುಬರುವ ಶಿವಲಿಂಗಗಳಲ್ಲಿ ಉತ್ತರಾಯಣ ದಕ್ಷಿಣಾಯನರೂಪಗಳ ಅವಧಿಕಾಲ

ಪಾರ್ಥಿವಾದೀನಿ ಲಿಂಗಾನಿ ವಕ್ಷ್ಯಾಮಿ ಪರಮೇಶ್ವರಿ ।
ಮೃದ್ಭವಂ ದಾರುಜಂ ಲಿಂಗಂ ಸೈಕತಂ ಪಿಷ್ಟನಿರ್ಮಿತಂ ॥೧೯॥

ಗಾಂಧಂ ಸೌಭಾಗ್ಯದಂ ವಿದ್ಧಿ ಮನ್ನಾಮಾಯುರ್ವಿವರ್ಧನಂ ।
ಪೌಷ್ಣಂ ಸರ್ವಾರ್ಥದಂ ದೇವಿ ಮಾನದಂ ಶೃಂಗನಿರ್ಮಿತಂ ॥೨೦॥

ಸೇನಾಪತ್ಯಪ್ರದಂ ಲಿಂಗಂ ನಾಗದಂತಮಯಂ ಶಿವೇ ।
ಶಾಲಿಪಿಷ್ಟೋದ್ಭವಂ ಲಿಂಗಂ ಪಶುದಂ ಯಾವಜಂ ಬಲಂ ॥೨೧॥

ಗೋಧೂಮಜಂ ವಾತಹರಂ ಮೌದ್ಗಂ ಸ್ತ್ರೀಮಾಷಜಂ ಸುಖಂ ।
ತಿಲಕಲ್ಕೋದ್ಭವಂ ಪುಣ್ಯಂ ಸಿದ್ಧಾರ್ಥಂ ಭಯನಾಶನಂ ॥೨೨॥

ಗೌಡಂ ಪ್ರೀತಿಕರಂ ಪುಂಸಾಂ ನವನೀತಂ ಸುಖಪ್ರದಂ ।
ಗೋಮಯಂ ರೋಗನಾಶಾಯ ಭಸ್ಮೋತ್ಥಂ ಪಾಪಹೃಚ್ಛಿವೇ ॥೨೩॥

---

ದಲ್ಲಿಯೂ ಪರ್ವಕಾಲಗಳಲ್ಲಿಯೂ ಪ್ರತಿಷ್ಠೆಮಾಡಬೇಕು. ಪರಮೇಶ್ವರಿಯೇ, ಇನ್ನು ಪಾರ್ಥಿವವೇ ಮುಂತಾದ ಶಿವಲಿಂಗಗಳಸ್ವರೂಪವನ್ನು ಹೇಳುವೆನು ಕೇಳು, ಮಣ್ಣಿನ ಲಿಂಗ, ಮರ, ಮರಳು, ಹಿಟ್ಟು, ಗಂಧ, ಇವುಗಳ ಶಿವಲಿಂಗಗಳು ಸೌಭಾಗ್ಯಪ್ರದವೂ ಆಯುಷ್ಯವೃದ್ಧಿಯನ್ನುಂಟುಮಾಡುವುವೂ ಆಗಿರುವುವು. ಪೌಷ್ಣಲಿಂಗವು ಅಂದರೆ ಸೂರ್ಯಕಾಂತಶಿಲೆಯಿಂದ ನಿರ್ಮಿತವಾದ ಶಿವಲಿಂಗವು ಸಕಲ ಇಷ್ಟಾರ್ಥಗಳನ್ನೂ ಭಕ್ತರಿಗೆ ಒದಗಿಸಿಕೊಡುವುದು. ಕೊಂಬಿನಿಂದನಿರ್ಮಿತವಾದ ಶಿವಲಿಂಗವು ಮಾನ ಪ್ರದವು. ॥೧೮-೧೯-೨೦॥

ಪಾರ್ವತಿಯೇ ! ಆನೆಯದಂತದಲಿಂಗವು ಸೇನಾಧಿಪತ್ಯವನ್ನುಂಟುಮಾಡು ವುದು- ಅಕ್ಕಿಹಿಟ್ಟಿನಲಿಂಗವು ಪಶುಗಳನ್ನೂ, ಯವಧಾನ್ಯಪಿಷ್ಟದ ಲಿಂಗವು ಬಲವನ್ನೂ ಉಂಟುಮಾಡುವುವು. ಗೋದುವೆಯಲಿಂಗವು ವಾತವನ್ನು ಹೋಗಲಾಡಿಸುವುದು. ಹೆಸರಿನ ಕಾಳಿನಲಿಂಗವು ಸ್ತ್ರೀಲಾಭವನ್ನುಂಟುಮಾಡುವುದು. ಉದ್ದಿನಕಾಳಿನ ಶಿವ ಲಿಂಗವು ಸುಖವನ್ನೆಸಗುವುದು. ಎಳ್ಳುಚಿಗಳಿಯಲಿಂಗವು ಪುಣ್ಯಕರವು, ಬಿಳಿಯ ಸಾಸುವೆಯ ಲಿಂಗವು ಭಯವನ್ನು ಹೋಗಲಾಡಿಸುವುದು. ಬೆಲ್ಲದಲಿಂಗವು ಪುರುಷ ರಿಗೆ ಪ್ರೀತಿಕರವೆನಿಸುವುದು. ಬೆಣ್ಣೆಯಲಿಂಗವು ಸುಖಪ್ರದವು. ಗೋಮಯದಲಿಂಗವು ರೋಗವನ್ನು ನಾಶಮಾಡುವುದು. ಭಸ್ಮಜನ್ಯನಾದಲಿಂಗವು ಪಾಪಹಾರಿಯಾಗಿರು ವುದು. ॥೨೧-೨೨-೨೩॥

ಲವಣಂ ಮೈತ್ರದಂ ದೇವಿ ಮೂಲಜಂ ಶತ್ರುನಾಶನಂ ।
ವಂಶಾಂಕುರೋತ್ಥಂ ವಂಶಾದಿವೃದ್ಧಿಪ್ರದಮನುತ್ತಮಂ ॥೨೪॥

ಪುರಕ್ಷೋಭಕರಂ ಪೌರಂ ರಾಮಠಂ ಕುಷ್ಠನಾಶನಂ ।
ಅಸ್ಥಿಜಂ ಮಾರಣೇ ಪ್ರೋಕ್ತಂ ಕೇಶಜಂ ಭಯದಂ ತ್ವರೇಃ ॥೨೫॥

ಕುಂಕುಮಂ ಧನದಂ ದೇವಿ ಹಾರಿದ್ರಂ ಮಂಗಳಪ್ರದಂ ।
ಸೌಭಾಗ್ಯದಂ ಚ ಕರ್ಪೂರಂ ಕಸ್ತೂರೀಸಂಭವಂ ಸುಖಂ ॥೨೬॥

ಯಾವತ್ಕಾಮಂ ಪೂಜಯೀತ ಲಿಂಗಾನ್ಯೇತಾನಿ ಸುಂದರಿ ।
ವಿಧಿಃ ಪಾರ್ಥಿವಲಿಂಗಸ್ಯ ಸಮಾಸಾನ್ನತು ವಿಸ್ತರಃ ॥೨೭॥

ಮೃಲ್ಲಿಂಗಾರ್ಚಾವಿಧಿಂ ವಕ್ಷ್ಯೇ ಶೃಣು ದೇವಿ ಮಯೋದಿತಂ ।
ಮೃದಾಹರಣಸಂಘಟ್ಟಪ್ರತಿಷ್ಠಾಹ್ವಾನಮೀಶ್ವರಿ ॥೨೮॥

---

ದೇವಿಯೇ! ಉಪ್ಪಿನಲಿಂಗವು ಸರ್ವರಿಗೂ ಸ್ನೇಹವನ್ನುಂಟುಮಾಡುವುದು. ಗೆಡ್ಡೆಗೆಣಸಿನ ಲಿಂಗವು ಶತ್ರುಗಳನ್ನು ನಾಶಮಾಡುವುದು. ಬಿದಿರಮೊಳಕೆಗಳಿಂದ ಮಾಡಿದಲಿಂಗವು ಉತ್ತಮವೂ ವಂಶಸಂತತಿಯನ್ನು ಬೆಳಸುವುದೂ ಆಗಿರುವುದು. ಪೌರಲಿಂಗವು ಪಟ್ಟಣಕ್ಕೆ ಕ್ಷೋಭೆಯನ್ನುಂಟುಮಾಡುವುದು. ರಾಮಠ(?)ಲಿಂಗವು ಶ್ವೇತರೋಗವನ್ನು ಹೋಗಲಾಡಿಸುವುದು. ಮೂಳೆಯಿಂದಮಾಡಿದಲಿಂಗವು ಶತ್ರುಗಳ ಮರಣಕಾರ್ಯಕ್ಕೆ ಉಪಯೋಗವಾಗಿರುವುದು. ಕೂದಲಿನಲಿಂಗವು ಶತ್ರುಭೀತಿಯನ್ನುಂಟುಮಾಡುವುದು. ದೇವಿ! ಕುಂಕುಮಲಿಂಗವು ಧನಪ್ರದವು; ಅರಿಸಿನದ ಲಿಂಗವು ಮಂಗಳಪ್ರದವಾಗಿರುವುದು. ಕರ್ಪೂರದಲಿಂಗವು ಸೌಭಾಗ್ಯವನ್ನುಂಟುಮಾಡುವುದು. ಕಸ್ತೂರೀಲಿಂಗವು ಸುಖಕಾರಕವು. ॥೨೪-೨೫-೨೬॥

ತ್ರಿಲೋಕಸುಂದರಿಯೇ, ಈ ಶಿವಲಿಂಗಗಳನ್ನು ತಮ್ಮ ಇಚ್ಛಾನುಸಾರವಾಗಿ ಪೂಜೆಮಾಡಬೇಕು. ಇದು ಪಾರ್ಥಿವಲಿಂಗದ ವಿಧಿ. ಇದು ಸಂಗ್ರಹವೇ ಹೊರತು ವಿಸ್ತಾರವಲ್ಲ. ದೇವಿ! ಇನ್ನು ಮೃತ್ತಿಕಾಲಿಂಗಪೂಜೆಯ ವಿಧಿಯನ್ನು ಹೇಳುವೆನು ಕೇಳು. ಮಹೇಶ್ವರಿ! ಮೃತ್ತಿಕಾಹರಣ (ಮಣ್ಣನ್ನು ತರುವುದು), ಸಂಘಟ್ಟನ (ಸಮೀಕರಿಸುವುದು), ಪ್ರತಿಷ್ಠೆ, ಆಹ್ವಾನ ಈ ಕ್ರಿಯೆಗಳ ವಿಧಿಗಳನ್ನೆಲ್ಲಾ ಕ್ರಮವಾಗಿ ನಡೆಸಬೇಕು. ॥೨೭-೨೮॥

ಸ್ನಪನಂ ಪೂಜನಂ ಚೈವ ವಿಸರ್ಜನಮತಃ ಪರಂ ।
ಹರೋ ಮಹೇಶ್ವರಶ್ಚೈವ ಶೂಲಪಾಣಿಃ ಪಿನಾಕಧೃಕ್ ॥೨೯॥

ಶಿವಃ ಪಶುಪತಿಶ್ಚೈವ ಮಹಾದೇವ ಇತಿ ಪ್ರಿಯೇ ।
ಕೇಚಿತ್ಪಂಚೋಪಚಾರಾಣಿ ಪಂಚಬ್ರಹ್ಮಾದಿಭಿಃ ಶಿವೇ ॥೩೦॥

ಷಡಕ್ಷರೇಣೋಪಚಾರಾಃ ಕುರ್ಯುರ್ದೇವಿ ಪೃಥಕ್‌ಪೃಥಕ್ ।
ಪ್ರಣವಾದಿ ಚತುರ್ಥ್ಯಂತೈರ್ನಮೋಽಂತೈರ್ಹರನಾಮಭಿಃ ॥೩೧॥

ಸರ್ವಮಂತ್ರಮಯಶ್ಚಾಯಮೋಂಕಾರಾದ್ಯಃ ಷಡಕ್ಷರಃ ।
ಯಂ ಯಂ ಕಾಮಮಭಿಧ್ಯಾಯನ್ತತ್ತತ್ಸಂಕಲ್ಪ್ಯ ಪೂಜಯೇತ್ ॥೩೨॥

ಯಾವತ್ಕಾಮಸಮಾಪ್ತಿರ್ಹಿ ಕುರ್ಯಾನ್ಮೃಲ್ಲಿಂಗಪೂಜನಂ ।
ಧ್ಯಾನಂ ತಸ್ಯೈವ ವಿಹಿತಂ ಪೂಜನೇ ಪರಮೇಶ್ವರಿ ॥೩೩॥

ಧ್ಯಾಯೇದ್ದೇವಂ ಮಹೇಶಂ ರಜತಗಿರಿವಸಂ ಚಾರುಚಂದ್ರಾವತಂಸಂ
ರತ್ನಾಕಲ್ಪೋಜ್ವಲಾಂಗಂ ಪರಶುಮೃಗವರಾಭೀತಿಹಸ್ತಂ ಪ್ರಸನ್ನಂ

---

ಹಾಗೆಯೇ— ಸ್ನಪನ, ಪೂಜೆ, ಮತ್ತು ವಿಸರ್ಜನೆಗಳನ್ನೆಲ್ಲಾ ವಿಧಿವತ್ತಾಗಿ ನಡೆಸಬೇಕು. ಹರ, ಮಹೇಶ್ವರ, ಶೂಲಪಾಣಿ, ಪಿನಾಕಧೃಕ್, ಶಿವ, ಪಶುಪತಿ, ಮಹಾದೇವ ಎಂಬ ನಾಮಗಳಿಂದ ಅರ್ಚನೆಮಾಡಬೇಕು. ಎಲೌ ಪ್ರಿಯೆ! ಕೆಲವರು ಪಂಚೋಪಚಾರಗಳನ್ನು ಸದ್ಯೋಜಾತಾದಿ ಪಂಚಮಂತ್ರಗಳಿಂದ ಮಾಡುವರು. ಇನ್ನು ಕೆಲವರು ಷಡಕ್ಷರಮಂತ್ರಪೂರ್ವಕವಾಗಿ ಪ್ರತ್ಯೇಕಪ್ರತ್ಯೇಕವಾದ ಉಪಚಾರಗಳನ್ನು ಶಿವಲಿಂಗಕ್ಕೆ ಸಲ್ಲಿಸುವರು. ॥೨೯-೩೦॥

ಓಂಕಾರಾದಿಯಾಗಿ ಚತುರ್ಥೀವಿಭಕ್ತ್ಯಂತವಾಗಿರುವ ಶಿವನಾಮಗಳಿಗೆ ನಮಶ್ಶಬ್ದವನ್ನು ಕೊನೆಯಲ್ಲಿ ಉಚ್ಚರಿಸುತ್ತಾ ಬೇರೆಬೇರೆಯಾಗಿ ಹರನನಾಮಗಳಿಂದ ಪೂಜೆಮಾಡಬೇಕು. ಓಂಕಾರಾದಿಯಾದ 'ನಮಃ ಶಿವಾಯ' ಎಂಬ ಷಡಕ್ಷರ ಮಂತ್ರವು ಸಕಲಮಂತ್ರಸ್ವರೂಪವೆನಿಸಿದೆ. ಪೂಜಕನು ಯಾವಯಾವ ಮನೋರಥಗಳನ್ನು ಇಚ್ಛಿಸುವನೋ ಆರೀತಿ ಸಂಕಲ್ಪಮಾಡಿ ಪೂಜಿಸಬೇಕು. ತನ್ನ ಮನೋರಥವೀಡೇರುವವರೆಗೂ ಮೃತ್ತಿಕಾಲಿಂಗವನ್ನು ಪೂಜೆಮಾಡಬೇಕು. ಎಲೌ ಪರಮೇಶ್ವರಿಯೇ! ಆ ಲಿಂಗಪೂಜೆಯಲ್ಲಿ ಧ್ಯಾನವೂ ವಿಹಿತವಾಗಿದೆ. ॥೩೧-೩೨-೩೩॥

ಪದ್ಮಾಸೀನಂ ಹಿ ದೇವ್ಯಾ ವೃತಮಮರವರ್ಯೈಃ ಪಾರ್ಷದಸ್ತ್ವಗ್ರ್ಯಸಾನಂ ।
ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲಭಯಹರಂ ಭಾವಯೇತ್ಪಂಚವಕ್ತ್ರಂ ॥೩೪॥

ಪಂಚೋಪಚಾರೈಃ ಸಂಪೂಜ್ಯ ಸ್ನಾನಾದೀನಿ ಸುರೇಶ್ವರಿ ।
ಮೂರ್ತಯೋಽಷ್ಟೌ ಶಿವಸ್ಯೈತಾ ಪೂಜಯೇತ್ತೈವ ದಿಕ್ಕ್ರಮಾತ್ ॥೩೫॥

ಶರ್ವಾಯ ಕ್ಷಿತಿರೂಪಾಯ ಭವಾಯ ಜಲಮೂರ್ತಯೇ ।
ರುದ್ರಾಯ ವಹ್ನಿಮೂರ್ತ್ಯೈ ಚ ವಾಯವೇ ಚೋಗ್ರಮೂರ್ತಯೇ ॥೩೬॥

ಭೀಮಾಯಾಕಾಶಮೂರ್ತ್ಯೈ ಚ ಯಜತೇ ಪಶುಪಾಯ ಚ ।
ಮಹಾದೇವಾಯ ಸೋಮಾಯ ಸೂರ್ಯಮೂರ್ತ್ಯಾತ್ಮನೇತಿದಿಕ್ ॥೩೭॥

---

ರಜತಾಚಲದಲ್ಲಿ ವಾಸಮಾಡುತ್ತಾ ಮನೋಹರವಾದ ಚಂದ್ರನನ್ನೇ ಶಿರೋಭೂಷಣವನ್ನಾಗಿ ಧರಿಸಿ, ರತ್ನಹಾರದಿಂದ ಪ್ರಜ್ವಲಿಸುತ್ತಿರುವ ದೇಹವುಳ್ಳವನೂ, ಪರಶು, ಜಿಂಕೆಗಳನ್ನು ಹಿಡಿದು ವರದ, ಅಭಯರೂಪವಾದ ಮುದ್ರೆಗಳಿಂದವಿರಾಜಿಸುವ ತೋಳ್ಗಳುಳ್ಳವನೂ, ನಿರ್ಮಲನೂ, ದೇವಿಯೊಡನೆಯೂ ದೇವತೋತ್ತಮರಾದ ಸಭಾಸದರಿಂದಲೂ ಪರಿವೃತನೂ, ಪದ್ಮಾಸನಾಸೀನನೂ ಆದ ಗಜಚರ್ಮವನ್ನು ಹೊದ್ದಿರುವವನೂ, ಜಗದಾದಿರೂಪನೂ, ಲೋಕವಂದ್ಯನೂ, ಸಮಸ್ತ ಭಯಗಳನ್ನೂ ನಾಶಮಾಡುವವನೂ, ಐದುಮುಖಗಳುಳ್ಳವನೂ, ಆದ ಮಹೇಶ್ವರದೇವನನ್ನು ಪೂಜಾರಂಭದಲ್ಲಿ ಧ್ಯಾನಮಾಡಬೇಕು. ॥೩೪॥

ಮಹೇಶ್ವರಿಯೇ, ಧ್ಯಾನ, ಆವಾಹನ, ಆಸನ, ಅರ್ಘ್ಯ ಮತ್ತು ಆಚಮನ ಎಂಬ ಪ್ರಧಾನರೂಪವಾದ ಐದು ಉಪಚಾರಗಳಿಂದ ಪೂಜಿಸಿ, ಸ್ನಾನಾದಿಗಳನ್ನು ಮಾಡಿ, ಕ್ರಮವಾಗಿ ಶಿವನಮುಂದೆಹೇಳುವ ಎಂಟು ಮೂರ್ತಿಗಳನ್ನೂ, ಇಂದ್ರಾದಿ ಎಂಟು ದಿಕ್ಕುಗಳಲ್ಲಿಯೂ ಪೂಜಿಸಬೇಕು. (ಇಂದ್ರದಿಕ್ಕಿನಲ್ಲಿ) ಓಂ ಶರ್ವಾಯ ಕ್ಷಿತಿರೂಪಾಯ ನಮಃ (೧) (ಆಗ್ನೇಯದಲ್ಲಿ) ಓಂ ಭವಾಯ ಜಲಮೂರ್ತಯೇ ನಮಃ (೨) (ಯಾಮ್ಯದಿಕ್ಕಿನಲ್ಲಿ) ಓಂ ರುದ್ರಾಯ ವಹ್ನಿಮೂರ್ತ್ಯೈ ನಮಃ (೩) (ನೈಋತ್ಯದಲ್ಲಿ) ಓಂ ವಾಯವೇ ಉಗ್ರಮೂರ್ತಯೇ ನಮಃ (೪) (ವರುಣದಿಕ್ಕಿನಲ್ಲಿ) ಓಂ ಭೀಮಾಯ ಆಕಾಶಮೂರ್ತ್ಯೈ ನಮಃ (೫) (ವಾಯುವ್ಯದಲ್ಲಿ) ಓಂ ಯಜತೇ ಪಶುಪಾಯ ನಮಃ (೬) (ಕುಬೇರದಿಕ್ಕಿನಲ್ಲಿ) ಓಂ ಮಹಾದೇವಾಯ ಸೋಮಾಯ

ಸ್ತುತ್ವಾ ಧ್ಯಾತ್ವಾ ನಮಸ್ಕೃತ್ಯ ಪಾರ್ಥಿವಂ ತದ್ವಿಸರ್ಜಯೇತ್ ।
ಏಕಂ ಪಾಪಹರಂ ಪ್ರೋಕ್ತಂ ದ್ವಿಲಿಂಗಂ ಸರ್ವಸಿದ್ಧಿದಂ ॥೩೮॥

ತ್ರಿಲಿಂಗಂ ಪೂಜಯೇನ್ನಿತ್ಯಂ ಸರ್ವದಂ ಪಾರ್ಥಿವಂ ಶಿವೇ ।
ಲಿಂಗಾನಾಮಯುತಂ ಪೂಜ್ಯಂ ಮಹಾರಾಜಭಯಾಪಹಂ ॥೩೯॥

ಸಹಸ್ರಮೇಕಂ ಲಿಂಗಾನಾಂ ಪೂಜ್ಯಂ ರೋಗಭಯೇ ಶಿವೇ ।
ಸಹಸ್ರಾಣಿ ತಥಾ ಪಂಚಪುತ್ರದಂ ಪಾರ್ಥಿವಾರ್ಚನಂ ॥೪೦॥

ಕಾರಾಗೃಹವಿಮುಕ್ತ್ಯರ್ಥಂ ಶತಮಷ್ಟೋತ್ತರಂ ಯಜೇತ್ ।
ಲಿಂಗಾನಾಂ ಪಾರ್ಥಿವಾನಾಂ ತು ಲಕ್ಷಂ ಸ್ಯಾನ್ಮೋಕ್ಷಸಿದ್ಧಿದಂ ॥೪೧॥

ಕೋಟಿಂ ಪಾರ್ಥಿವಲಿಂಗಾನಾಂ ಮುಕ್ತಿದಂ ಸ್ಯಾನ್ನ ಸಂಶಯಃ ।
ಸರ್ವಪಾರ್ಥಿವಲಿಂಗಾನಾಂ ನಿತ್ಯಂ ಕಾಮ್ಯೇಷ್ವಯಂ ವಿಧಿಃ ॥೪೨॥

---

ನಮಃ (೭) ಈಶಾನ್ಯದಲ್ಲಿ ಓಂ ಸೂರ್ಯಮೂರ್ತ್ಯಾತ್ಮನೇ ನಮಃ (೮) ಎಂಬುದಾಗಿ ಎಂಟುದಿಕ್ಕುಗಳಲ್ಲಿಯೂ ಪೂಜೆಮಾಡಬೇಕು. ॥೩೫-೩೬-೩೭॥

ಅನಂತರ ಸ್ತೋತ್ರರೂಪದಲ್ಲಿ ಧ್ಯಾನಿಸಿ, ನಮಸ್ಕಾರಮಾಡಿದಮೇಲೆ ಆ ಪಾರ್ಥಿವಲಿಂಗಗಳನ್ನು ವಿಸರ್ಜನೆಮಾಡಬೇಕು. ಒಂದು ಪಾರ್ಥಿವಲಿಂಗವು ಪಾಪನಾಶಕವೆಂದೂ, ಎರಡು ಸಕಲಸಿದ್ಧಿಪ್ರದವೆಂದೂ ಹೇಳಲ್ಪಟ್ಟಿದೆ. ಪಾರ್ವತಿಯೆ, ನಿತ್ಯವೂ ಸಕಲಫಲಗಳನ್ನು ಹೊಂದುವುದಕ್ಕಾಗಿ ಮೂರುಲಿಂಗಗಳನ್ನು ಪೂಜೆಮಾಡಬೇಕು. ಮಹಾರಾಜರ ಭಯವನ್ನು ಹೋಗಲಾಡಿಸಿಕೊಳ್ಳಲಿಚ್ಛೆಯುಳ್ಳವನು ಹತ್ತು ಸಾವಿರ ಪಾರ್ಥಿವಲಿಂಗಗಳನ್ನು ಪೂಜೆಮಾಡಬೇಕು. ॥೩೮-೩೯॥

ಸರ್ವ, ರೋಗಭಯನಿವಾರಣೆಗಾಗಿ. ಒಂದು ಸಾವಿರ ಲಿಂಗಗಳನ್ನು ಪೂಜೆ ಮಾಡಬೇಕು. ಐದುಸಾವಿರ ಪಾರ್ಥಿವಲಿಂಗಗಳ ಪೂಜೆಯು ಪುತ್ರಪ್ರಾಪ್ತಿಯನ್ನುಂಟುಮಾಡುವುದು. ಕಾರಾಗೃಹದಿಂದ ಬಿಡುಗಡೆಹೊಂದಲು ನೂರೆಂಟು ಶಿವಲಿಂಗಗಳನ್ನು ಪೂಜಿಸಬೇಕು. ಲಕ್ಷಪಾರ್ಥಿವಲಿಂಗಗಳ ಪೂಜೆಯು ಮೋಕ್ಷಸಿದ್ಧಿಯನ್ನುಂಟುಮಾಡುವುದು. ಕೋಟಿ ಪಾರ್ಥಿವಲಿಂಗಗಳ ಪೂಜೆಯಿಂದ ಮೋಕ್ಷವುಂಟಾಗುವುದರಲ್ಲಿ ಸಂಶಯವೇ ಇಲ್ಲ. ದೇವಿಯೇ, ಎಲ್ಲಾ ಪಾರ್ಥಿವಲಿಂಗಗಳ ನಿತ್ಯಪೂಜೆಯಲ್ಲಿಯೂ ಈ ವಿಧಿಯೇರ್ಪಟ್ಟಿರುವುದು. ॥೪೦-೪೧-೪೨॥

ಮಲ್ಲಿಂಗಂ ಪಾರ್ಥಿವಂ ಲಕ್ಷಂ ಭುಕ್ತಿಮುಕ್ತಿಕರಂ ಪರಂ ।
ದೇಶಂ ಕಾಲಂ ಬಲಂ ಜ್ಞಾತ್ವಾ ಫಲಂ ಚೈವ ವಿಶೇಷತಃ ॥೪೩॥

ವಿದ್ಯಾರ್ಥೀ ಲಿಂಗಸಾಹಸ್ರಂ ಧನಾರ್ಥೀ ಚ ತದರ್ಧಕಂ ।
ಪುತ್ರಾರ್ಥೀ ಚಾರ್ಧಸಾಹಸ್ರಂ ಕನ್ಯಾರ್ಥೀ ಚ ಶತತ್ರಯಂ ॥೪೪॥

ವಿದ್ಯಾಲ್ಲಿಂಗಾಯುತಂ ಕುರ್ಯಾತ್ಸರ್ವಪಾಪಹರಂ ಪರಂ ।
ಸುಹೃತ್ಕಾಮಃ ಸಹಸ್ರಂತು ಧನಾರ್ಥೀ ಚ ಸಹಸ್ರಕಂ ॥೪೫॥

ಮಾರಣಾರ್ಥೀ ಶತಂ ಸಪ್ತ ಮೋಹನಾರ್ಥೀ ಶತಾಷ್ಟಕಂ ।
ಉಚ್ಚಾಟನಾರ್ಥೀ ಸಾಹಸ್ರಂ ವಶ್ಯಾರ್ಥೀ ದ್ವಿಸಹಸ್ರಕಂ ॥೪೬॥

ದಾರಿದ್ರ್ಯನಾಶನಾರ್ಥಂ ತು ಪಂಚಸಾಹಸ್ರಮೀರಿತಂ ।
ಪಾರ್ಥಿವೇನ ತು ಲಿಂಗಾನಿ ಬಹವಃ ಸಿದ್ಧಿಮಾಗತಾಃ ॥೪೭॥

---

ಲಕ್ಷಸಂಖ್ಯೆಯ ನನ್ನ ಪಾರ್ಥಿವಲಿಂಗವು ಆರಾಧಕರಿಗೆ ಭೋಗಮೋಕ್ಷಗಳನ್ನುಂಟುಮಾಡುವುದರಲ್ಲಿ ಮುಖ್ಯವಾಗಿರುವುದು. ದೇಶ, ಕಾಲ, ಬಲ ಮತ್ತು ಫಲಗಳನ್ನೂ ವಿಶೇಷವಾಗಿ ತಿಳಿದು, ವಿದ್ಯಾರ್ಥಿಯು ಸಾವಿರಲಿಂಗಗಳನ್ನೂ, ದ್ರವ್ಯಾರ್ಥಿಯು ಐನೂರು ಲಿಂಗಗಳನ್ನೂ ಪುತ್ರಸಂತಾನಾಪೇಕ್ಷೆಯುಳ್ಳವನು ಅರ್ಧಸಾವಿರ ಲಿಂಗಗಳನ್ನೂ, ಕನ್ಯಾಪೇಕ್ಷೆಯುಳ್ಳವನು ಮುನ್ನೂರನ್ನೂ, ಫಲಾಪೇಕ್ಷೆಯಿಲ್ಲದೆ ಸಕಲ ಪಾಪಗಳನ್ನೂ ನಾಶಗೊಳಿಸಬಯಸುವವನು ಹತ್ತುಸಾವಿರ ಲಿಂಗಗಳನ್ನೂ ಪೂಜೆಮಾಡಬೇಕು. ಸ್ನೇಹಿತನನ್ನು ಬಯಸುವವನೂ, ಧನವನ್ನು ಅಪೇಕ್ಷಿಸುವವನೂ ಸಾವಿರಲಿಂಗಗಳನ್ನೂ ಅರ್ಚನೆಮಾಡಬೇಕು. ॥೪೩-೪೪-೪೫॥

ಶತ್ರುಗಳನ್ನು ಕೊಲೆಮಾಡಲಿಚ್ಛಿಸುವವನು ಏಳುನೂರು, ಶತ್ರುಗಳನ್ನು ಮೂರ್ಛೆಗೊಳಿಸಬಯಸುವವನು ಎಂಟುನೂರು, ಉಚ್ಚಾಟನೆಮಾಡಬಯಸುವನು ಸಾವಿರ, ವಶೀಕರಣ ಮಾಡಬೇಕೆಂದಿರುವವನು ಎರಡುಸಾವಿರ, ಬಡತನದ ನಿವಾರಣೆಗೆ ಐದುಸಾವಿರ, ಈರೀತಿ ಪಾರ್ಥಿವಲಿಂಗಗಳನ್ನು ಪೂಜಿಸಬೇಕು. ದೇವಿ, ಈ ಪಾರ್ಥಿವಲಿಂಗಪೂಜೆಯಿಂದ ಅನೇಕರು ಇಲ್ಲಿ ಹೇಳಿರುವಂತಹ ಸಿದ್ಧಿಪಡೆದಿರುವರು. ॥೪೬-೪೭॥

ತತ್ರಾಪಿ ಪಾರ್ಥಿವಂ ಲಿಂಗಂ ಕ್ಷಿಪ್ರಂ ಸಿದ್ಧಿಪ್ರದಂ ಶಿವೇ ।
ಕೃತೇ ರತ್ನಮಯಂ ಲಿಂಗಂ ತ್ರೇತಾಯಾಂ ಹೇಮಸಂಭವಂ ॥೪೮॥

ದ್ವಾಪರೇ ಪಾರದಂ ಶ್ರೇಷ್ಠಂ ಪಾರ್ಥಿವಂತು ಕಲೌ ಶಿವೇ ।
ರತ್ನಧಾತುಸ್ಫಟಿಕೃತೇ ಪಾರ್ಥಿವೇ ನೈವ ಚಂಡಭಾಕ್ ॥೪೯॥

ನೈವೇದ್ಯಂ ಚೈವ ನಿರ್ಮಾಲ್ಯಂ ಗ್ರಾಹ್ಯಮೇವ ನ ಸಂಶಯಃ ॥೫೦॥

ಲಿಂಗಾನ್ಯಮೂನಿ ಕಿಲ ಶೈಲಸುತೇಽಮಲಾನಿ
ತುಂಗಾನಿ ಪಾರ್ಥಿವಸುಧಾತುಜತೈಜಸಾನಿ ।
ಸಂಪೂಜಿತಾನಿ ನಿಯಮೇನ ಫಲೇಚ್ಛುಭಿರ್ವಾ
ನಿಷ್ಕಾಮಮುಕ್ತಿಪರಮಾಣಿ ಸದೈವ ಗೌರಿ ॥೫೧॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಕಾಮ್ಯಲಿಂಗಾರ್ಚನ
ವಿಧಿರ್ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

ದೇವಿಯೇ, ಅದರಲ್ಲಿಯೂ ಪಾರ್ಥಿವಲಿಂಗವು ಶೀಘ್ರವಾಗಿ ಸಿದ್ಧಿಯನ್ನುಂಟು ಮಾಡುವುದು. ಕೃತಯುಗದಲ್ಲಿ ರತ್ನಮಯವಾದ ಲಿಂಗ, ತ್ರೇತಾಯುಗದಲ್ಲಿ ಚಿನ್ನದ ಲಿಂಗ, ದ್ವಾಪರಯುಗದಲ್ಲಿ ಪಾದರಸದ ಲಿಂಗ ಮತ್ತು ಕಲಿಯುಗದಲ್ಲಿ ಪಾರ್ಥಿವಲಿಂಗ ಈರೀತಿಯಾಗಿ ಪೂಜೆಗೆ ಯುಗಭೇದದಿಂದ ಲಿಂಗಭೇದಗಳೇರ್ಪಟ್ಟಿರುವುವು. ರತ್ನ, ಧಾತು (ಲೋಹ) ಮತ್ತು ಸ್ಫಟಿಕಗಳಿಂದ ರಚಿತವಾದ ಪಾರ್ಥಿವ ಲಿಂಗವು ದೋಷಾರ್ಹವಾಗಲಾರದು. ಅಂತಹ ಪಾರ್ಥಿವಲಿಂಗಕ್ಕೆ ನೈವೇದ್ಯಮಾಡಿದ ಪದಾರ್ಥವನ್ನೂ, ನಿರ್ಮಾಲ್ಯವನ್ನೂ ಗ್ರಹಣಮಾಡಬಹುದು. ಇದರಲ್ಲಿ ಸಂಶಯ ಪಡಬೇಕಾದ ಅವಶ್ಯಕತೆಯೇ ಇಲ್ಲ. ॥೪೮-೪೯-೫೦॥

ಎಲೌ ಗಿರಿರಾಜಕುವರಿಯೇ, ಪರಿಶುದ್ಧವೂ, ಉನ್ನತವೂ ಆದ ಪಾರ್ಥಿವ ಅಥವಾ ಧಾತು ಮತ್ತು ತೈಜಸವಾದ ಶಿವಲಿಂಗಗಳನ್ನು ನಿಯಮದಿಂದ ಫಲಾಪೇಕ್ಷೆಯುಳ್ಳವರಾಗಿ ಪೂಜೆಮಾಡಿದರೆ ಅಂತಹವರಿಗೆ ಅವರ ಇಷ್ಟಾರ್ಥಗಳು ಶೀಘ್ರವಾಗಿ

ನೆರವೇರುವುದಲ್ಲದೆ ಅಂತ್ಯದಲ್ಲಿ ಶಾಶ್ವತಮುಕ್ತಿರೂಪವಾದ ಫಲವನ್ನು ಹೊಂದು ವುದರಲ್ಲಿ ಸಂಶಯವಿಲ್ಲ ಎಂದು ಶಿವನು ಗೌರೀದೇವಿಗೆ ಸೂಚಿಸಿದನು. ||೫೧||

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಕಾಮ್ಯಲಿಂಗಾರ್ಚನ ವಿಧಿನಿರೂಪಣೆಯೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

### ದಶಮಾಂಶಪೂರ್ವಾರ್ಧೇ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಶಿವಪೂಜಾವಿಧಿಕ್ರಮಮ್ ।
ನಿಗಮಾಗಮಭೇದೇನ ಪೂಜಾ ಪ್ರೋಕ್ತಾ ಮಹರ್ಷಿಭಿಃ ॥೧॥

ಪೂಜನಂ ಶಂಕರಸ್ಯೈವ ಬಹುಧಾ ಪರಿಕೀರ್ತಿತಮ್ ।
ಶ್ರುತಿಸ್ಮೃತಿಸಮಾಚಾರೈಸ್ತಂತ್ರೈರಾಗಮಭೇದತಃ ॥೨॥

ಬೃಹಜ್ಜಾಬಾಲಕಾಃ ಪ್ರೋಚುಃ ಕೇವಲಂ ಲಿಂಗಪೂಜನಮ್ ।
ಪಂಚಾಯತನಪೂಜಾ ಹಿ ಸ್ಮೃತಿಪ್ರೋಕ್ತಾ ಮುನೀಶ್ವರ ॥೩॥

---

## ನಲವತ್ತನಾಲ್ಕನೆಯ ಅಧ್ಯಾಯ

ಅಯ್ಯ ಜೈಗೀಷವ್ಯ ಮಹರ್ಷಿಯೇ, ಇನ್ನು ಶಂಕರನು ದೇವಿಗೆ ಹೇಳಿದ ಶಿವಪೂಜಾವಿಧಿಯ ಕ್ರಮವನ್ನೂ ನಿನಗೆ ಹೇಳುವೆನು ಕೇಳು; ನಿಗಮ ಮತ್ತು ಆಗಮಭೇದಗಳಿಂದ ಈ ಲಿಂಗಪೂಜಾಕ್ರಮವು ನಾನಾರೀತಿಯಾಗಿ ಮಹರ್ಷಿಗಳಿಂದ ಹೇಳಲ್ಪಟ್ಟಿದೆ. ಶ್ರುತಿ, ಸ್ಮೃತಿ, ತಂತ್ರ ಮತ್ತು ಆಗಮಭೇದಗಳೇ ಈ ಶಂಕರನ ಪೂಜೆಯಲ್ಲಿ ನಾನಾವಿಧಾನಗಳನ್ನುಂಟುಮಾಡಲು ಕಾರಣಗಳಾಗಿವೆ. ॥೧-೨॥

ಬೃಹಜ್ಜಾಬಾಲಮುನಿಗಳು ಸರ್ವರಿಗೂ ಕೇವಲ ಶಿವಲಿಂಗಪೂಜೆಯೇ ಶ್ರೇಷ್ಠವೆಂದು ಹೇಳಿದ್ದಾರೆ. ಓ ಮುನೀಶ್ವರನೆ, ಪಂಚಾಯತನಪೂಜೆಯಾದರೋ

ತಂತ್ರಾಗಮೋಕ್ತಪೂಜಾ ಹಿ ಶಿವದೀಕ್ಷಾವತಾಂ ಶಿವೇ ।
ನಿಗಮಾಗಮಸಂಯುಕ್ತಾ ಪೂಜಾ ಯಾ ಕಥ್ಯತೇ ತವ ॥೪॥

ಶಿವಪ್ರಧಾನಪೂಜೇಯಂ ಶಿವಲಿಂಗೈಕಪೂಜನಂ ।
ಕೇವಲಂ ತೇ ಸಮಾಸೇನ ಸ ಪಂಚಾಕ್ಷರಸಂಯುತಂ ॥೫॥

ಪ್ರವಕ್ಷ್ಯಾಮಿ ಯಥಾ ದೇವ್ಯೈ ಪ್ರೋಕ್ತಂ ವಿಶ್ವೇಶ್ವರೇಣ ಹಿ ।
ಕೈಲಾಸಶಿಖರಾಸೀನಂ ದೇವಂ ಕಾಮೇಶ್ವರಂ ವಿಭುಂ ॥೬॥

ಬ್ರಹ್ಮೋಪೇಂದ್ರಮಹೇಂದ್ರಾದ್ಯೈರ್ಗಣೈರ್ವಿದ್ಯಾಧರೈಸ್ತಥಾ ।
ದಾನವೈರ್ಮುನಿಭಿಃ ಸಿದ್ಧೈರ್ಯಕ್ಷರಕ್ಷೋಗಣೈಃ ಪರೈಃ ॥೭॥

ಹೇರಂಬಸ್ಕಂದಪೂರ್ವಾದಿಗಣೈರ್ಭಕ್ತ್ಯಾ ಸುಸೇವಿತಂ ।
ಅಕ್ಷಕ್ರೀಡಾಲಸಾಸ್ವಾದಲಾಲಸಂ ಪರಮೇಶ್ವರಂ ॥೮॥

---

ಸ್ಮೃತಿಯಲ್ಲಿ ಶ್ರೇಷ್ಠವೆಂದು ಪ್ರೋಕ್ತವಾಗಿದೆ. ಆದರಂತೆಯೇ! ತಂತ್ರಾಗಮಗಳಲ್ಲಿ ಹೇಳಿರುವ ಪೂಜೆಯಾದರೋ ಕೇವಲ ಶಿವದೀಕ್ಷಾಬದ್ಧರಾದವರಿಗೆ ಮಾತ್ರ ವಿಹಿತ ವಾಗಿದೆ. ಆದರೆ ಈಗ ನಿಗಮ ಮತ್ತು ಆಗಮಗಳಿಂದ ಮಿಶ್ರವಾದ ಪೂಜೆಯಾವುದುಂಟೋ ಅದನ್ನು ನಾನು ನಿನಗೆ ಈಗ ಹೇಳುತ್ತೇನೆ. ॥೩-೪॥

ಕೇವಲ ಪರಮೇಶ್ವರನನ್ನೇ ಪ್ರಧಾನವನ್ನಾಗಿಟ್ಟು ಮಾಡುವ ಪೂಜೆಯನ್ನೂ ಶಿವಲಿಂಗಕ್ಕೆ ಪ್ರಾಶಸ್ತ್ಯವಿತ್ತಿರುವ ಪೂಜಾಕ್ರಮವನ್ನೂ ಈಗ ಹೇಳುವೆನು. ಸಂಕ್ಷೇಪವಾಗಿ ಹೇಳುವುದಾದರೆ ಶಿವಪಂಚಾಕ್ಷರಮಂತ್ರಯುಕ್ತವಾದ ಪೂಜೆಯೇ ಶ್ರೇಷ್ಠವಾದ ಪೂಜೆಯೆಂದು ಹೇಳಬಹುದು. ಅಯ್ಯ ಜೈಗೀಷವ್ಯನೆ, ಮಹೇಶ್ವರನು ಮಹಾದೇವಿಗೆ ಹೇಳಿದ ರೀತಿಯಲ್ಲಿ ಆ ಪೂಜಾವಿಧಾನವನ್ನು ನಿನಗೆ ಈಗ ಹೇಳುವೆನು ಕೇಳೆಂದು ಸ್ಕಂದದೇವನು ಇಂತೆಂದನು—ಕೈಲಾಸಪರ್ವತದ ಶಿಖರದಲ್ಲಿ ಬ್ರಹ್ಮ, ವಿಷ್ಣು ಇಂದ್ರ ಮುಂತಾದ ದೇವತೆಗಳಿಂದಲೂ, ಗಣಗಳು, ವಿದ್ಯಾಧರರು, ದಾನವರು, ಮುನಿಗಳು, ಸಿದ್ಧರು, ಯಕ್ಷರು, ರಾಕ್ಷಸರು ಮುಂತಾದ ದೇವತಾ ಸಮೂಹಗಳಿಂದಲೂ, ಇತರರಿಂದಲೂ, ಹೇರಂಬ, ಸ್ಕಂದ ಮುಂತಾದ ಗಣಶ್ರೇಷ್ಠರಿಂದಲೂ, ಭಕ್ತಿಪೂರ್ವಕವಾಗಿ ಸೇವಿಸಲ್ಪಡುತ್ತಾ, ದೇವಿಯೊಡನೆ ಪಗಡೆಯಾಟದ ರಸದಲ್ಲಿ ಆಸಕ್ತನಾಗಿದ್ದ ಕಾಮೇಶ್ವರ ಸಂಜ್ಞಕನಾದ ಮಹಾದೇವನಿಗೆ ಪ್ರಣಾಮ

ಕ್ರೀಡತೋ ಭುವನೇಶಸ್ಯ ಜಗದಂಬಿಕಯಾ ಸಹ
ಅಕ್ಷಪಾತಾಧಿಕಾರೇ ತು ಪಕ್ಷಪಾತಧಿಯೋಜ್ಝಿತಃ । ॥೯॥

ಕ್ರೀಡತೋ ಕ್ರಮಯೋಗೇನ ಜಿತಂ ದೇವೇನ ಶಂಭುನಾ ॥೧೦॥

ಅಕ್ಷಪ್ರಪಾತಾದ್ದೇವೇನ ಪ್ರೋಕ್ತಂ ನಂದಿನ್ ಜಿತಂ ಮಯಾ ।
ತದಾಸತ್ಯಾಭಿಯೋಗೇನ ತುಷ್ಟೋಽಹಂ ತ್ವಯಿ ಭಕ್ತಿತಃ ॥೧೧॥

ವರೋ ಮೇ ವ್ರಿಯತಾಂ ವತ್ಸ ಯತ್ತೇ ಮನಸಿ ವರ್ತತೇ ।
ದದಾಮಿ ತಂ ನ ಸಂದೇಹೋ ಪ್ರೀತೇನ ಮನಸಾ ತವ ॥೧೨॥

॥ ನಂದಿಕೇಶ ಉವಾಚ ॥

ತುಷ್ಟೋಽಸಿ ಯದಿ ದೇವೇಶ ಜಗತಾಮೀಶ್ವರ ಪ್ರಭೋ ।
ವದ ಪೂಜಾವಿಧಾನಂ ಮೇ ಶೈವಾನ್ಮಂತ್ರಾನ್ಸುದುರ್ಲಭಾನ್ ॥೧೩॥

ಕರಾಂಗನ್ಯಾಸಸಹಿತಾನ್ ಪೂಜಾಕರ್ಮಸಮನ್ವಿತಾನ್ ॥೧೪॥

---

ಮಾಡಿ, ಸಂತೋಷದಿಂದ ಆಟವಾಡುತ್ತಿದ್ದ ಮಹೇಶ್ವರನನ್ನು ಕುರಿತು ನಂದಿಕೇಶ್ವರನಿಂತೆಂದನು. ॥೫-೬-೭-೮॥

ಜಗದಂಬಿಕೆಯೊಡನೆ ಪಕ್ಷಪಾತವಿಲ್ಲದೆ ಜಗದೊಡೆಯನು ಪಗಡೆಯಾಟವಾಡುತ್ತಿರಲು, ದಾಳವನ್ನು ಬೀಸುತ್ತಿದ್ದ ನಂದೀಶ್ವರನು ಪರಶಿವನ ಮೇಲಿನ ಪಕ್ಷಪಾತದಿಂದ ಶಿವನ ಜಯಕ್ಕೆ ತಕ್ಕ ಗರಗಳನ್ನೇ ಹಾಕಲು, ಪರಶಿವನು ಅದರಿಂದ ತನ್ನ ಕಡೆಯ ಆಟದಲ್ಲಿ ಜಯಪಡೆದನು. ತನಗೆ ಗರ ಹಾಕಿದುದನ್ನು ನೋಡಿ ಮಹೇಶನು ನಂದಿಯೇ, ನಾನು ಗೆದ್ದೆನು. ಈ ಪಗಡೆಯಾಟದಲ್ಲಿ ನನ್ನ ಪಕ್ಷಕ್ಕೆ ನೀನು ವಿಶೇಷ ಆಸಕ್ತನಾಗಿದ್ದು ನಿನ್ನ ಭಕ್ತಿಪೂರ್ವಕವಾದ ಪಕ್ಷಪಾತದಿಂದ ನಾನು ಸಂತುಷ್ಟನಾಗಿರುವೆನು. ವತ್ಸ, ನಿನ್ನ ಮನಸ್ಸಿಗೆ ಬಂದ ವರವನ್ನು ಕೇಳು ; ಸಂತುಷ್ಟವಾದ ಮನಸ್ಸಿನಿಂದ ನಿನಗೆ ಸಂದೇಹವಿಲ್ಲದೇ ಆ ವರವನ್ನು ಕೊಡುವೆನೆಂದು ಶಿವನು ಹೇಳಲು ನಂದಿಕೇಶನು ಆಗ ಹೀಗೆ ಪ್ರಾರ್ಥಿಸಿದನು. ॥೯-೧೦-೧೧-೧೨॥

ದೇವತಾಧಿಪನೆ, ಜಗದೊಡೆಯನಾದ ಪ್ರಭುವೆ, ನೀನು ನನ್ನಲ್ಲಿ ಸಂತುಷ್ಟಿಯಿಂದಿರುವುದಾದರೆ ನಿನ್ನ ಪೂಜಾವಿಧಾನವನ್ನೂ, ಅತ್ಯಂತ ದುರ್ಲಭವಾದ ಶೈವ

॥ ಶಿವ ಉವಾಚ ॥

ಕಥಯಾಮಿ ಮಹಾಭಾಗ ತ್ರೈಲೋಕ್ಯೇಷ್ವಪಿ ದುರ್ಲಭಾನ್ ।
ಶೈವಾನ್ಸರ್ವಮನುಶ್ರೇಷ್ಠಾನ್ಸರ್ವತಂತ್ರೇಷು ಗೋಪಿತಾನ್ ॥೧೩॥

ಭಕ್ತೋಽಸೀತಿ ನ ಮೇ ಕಿಂಚಿದವಾಚ್ಯಂ ತ್ವಯಿ ಸುವ್ರತ ।
ಮೂಲಮಂತ್ರಾಂಗವಿನ್ಯಾಸಪೂಜಾಕರ್ಮಸಮನ್ವಿತಾನ್ ॥೧೬॥

ದೀಕ್ಷಾಭಿಷೇಕಸಹಿತಾನಧಿಕಾರಸಮನ್ವಿತಾನ್ ।
ಉದ್ಧಾರಕ್ರಮಯೋಗೇನ ಸರ್ವಕಾಮಫಲಪ್ರದಾನ್ ॥೧೭॥

ಸುಸಮೇ ಭೂಪ್ರದೇಶೇ ತು ಗೋಮಯೇನೋಪಲೇಪಿತೇ ।
ಪುಷ್ಪಪ್ರಕಾರಶೋಭಾಢ್ಯೇ ಗಂಧಧೂಪತರಂಗಿತೇ ॥೧೮॥

---

ಮಂತ್ರಗಳನ್ನೂ ಅದಕ್ಕೆ ಸಂಬಂಧಿಸಿದ ಅಂಗನ್ಯಾಸ ಕರನ್ಯಾಸಗಳೊಡನೆ ಪೂಜಾ ಕರ್ಮಗಳಿಂದ ಯುಕ್ತವಾದ ಸಂಗತಿಗಳನ್ನೂ, ತಿಳಿಸೆಂದು ನಂದಿಕೇಶ್ವರನು ಪರಶಿವನಲ್ಲಿ ಪ್ರಾರ್ಥಿಸಿದನು. ॥೧೩-೧೪॥

ಮಹಾತ್ಮನೆ! ಮೂರುಲೋಕಗಳಲ್ಲಿಯೂ ದುರ್ಲಭವಾಗಿದ್ದು ಸಕಲ ತಂತ್ರಗಳಲ್ಲಿಯೂ ಅಡಗಿ, ಅತ್ಯಂತ ಶ್ರೇಷ್ಠಗಳೆನಿಸಿದ ಶೈವಮಂತ್ರಗಳನ್ನು ಈಗ ಉಪದೇಶಿಸುವೆನು ಕೇಳು; ಎಲೈ ಉತ್ತಮಾಚಾರಸಂಪನ್ನನೆ! ನೀನು ನನ್ನ ಭಕ್ತಶ್ರೇಷ್ಠನಾದುದರಿಂದ ನಿನಗೆ ಹೇಳಲಾಗದ ವಿಷಯವೇ ನನಗೆ ಬೇರೆ ತೋರುವುದಿಲ್ಲ. ಮೂಲಮಂತ್ರ, ಅಂಗವಿನ್ಯಾಸ, ಪೂಜಾಕರ್ಮಗಳೊಡನೆ, ದೀಕ್ಷೆ, ಅಭಿಷೇಕ, ಅಧಿಕಾರಿ, ಮಂತ್ರೋದ್ಧಾರ ಕ್ರಮ, ಮತ್ತು ಯೋಗಿಗಳಿಗೂ ಸಮಸ್ತ ಇಷ್ಟಾರ್ಥಫಲಗಳನ್ನೂ ಕೊಡುವ ಈ ಮಂತ್ರಸ್ವರೂಪ ಇವುಗಳನ್ನು ಹೇಳುವೆನು ಕೇಳು; ॥೧೫-೧೬-೧೭॥

ಶ್ರೀಶಿವಪಂಚಾಕ್ಷರೀಮಂತ್ರೋದ್ಧಾರಕರ್ಮವು ಹೀಗೆ ಹೇಳಲ್ಪಟ್ಟಿದೆ. ಹಳ್ಳ ತಗ್ಗುಗಳಿಲ್ಲದೆ ಸಮಮಟ್ಟವಾಗಿರುವ ಭೂಮಿಯನ್ನು ಗೋಮಯಾದಿಗಳಿಂದ ಶುದ್ಧಿಗೊಳಿಸಿ ಅನಂತರ ಅದನ್ನು ರಂಗವಲ್ಯಾದಿಗಳಿಂದಲಂಕರಿಸಿ, ಪುಷ್ಪ, ಗಂಧ, ಧೂಪ ಇವುಗಳಿಂದ ಸುವಾಸನೆಗೊಳಿಸಿ ಅಕ್ಷರಗಳನ್ನು ವರ್ಗಗಳನ್ನಾಗಿ ವಿಂಗಡಿಸಬೇಕು. ಅಕ್ಷರಗಳಿಗೆ ಕ್ರಮವಾಗಿ ಎಂಟು ವರ್ಗಸ್ಥಾನಗಳನ್ನು ರಚಿಸಬೇಕು. ಅಂದರೆ ಎಂಟು ಮಾತೃಕೆಗಳನ್ನು ವಿಂಗಡಿಸಿ ರೇಖಾರೂಪದಲ್ಲಿ ಬರೆಯಬೇಕು. ಅದರಲ್ಲಿ

ವಿಲಿಖೇನ್ಮಾತೃಕಾಸ್ತತ್ರ ವರ್ಗಾಷ್ಟಕವಿಭೇದತಃ ।
ಸ್ವರೈಃ ಷೋಡಶಭಿರ್ವರ್ಗೈಃ ಪ್ರಥಮಃ ಪರಿಕೀರ್ತಿತಃ ॥೧೯॥

ಪಂಚಪಂಚಾಕ್ಷರಾಶ್ಚಾನ್ಯೇ ದ್ವಾವಂತ್ಯೌ ಚತುರಕ್ಷರೌ ।
ವರ್ಗಾಷ್ಟಕಂ ಭವೇದೇವಂ ತತೋ ಮಂತ್ರಾನ್ಸಮುದ್ಧರೇತ್ ॥೨೦॥

ಪಂಚಮಸ್ಯ ತು ವರ್ಗಸ್ಯ ಪಂಚಮಂ ಪ್ರಥಮಂ ಭವೇತ್ ।
ಷಷ್ಠವರ್ಗಾಂತಿಮೋ ವರ್ಣಃ ಪ್ರಥಮಾಂತ್ಯಸಮನ್ವಿತಃ ॥೨೧॥

ದ್ವಿತೀಯಂ ವರ್ಣಮಾಖ್ಯಾತಮಷ್ಟಮಸ್ಯಾದ್ಯಮಕ್ಷರಂ ।
ಪ್ರಥಮಸ್ಯ ದ್ವಿತೀಯಾರ್ಣಸಮೇತಂ ತತ್ತೃತೀಯಕಂ ॥೨೨॥

ಚತುರ್ಥಂ ಸಪ್ತಮಸ್ಯಾಂತ್ಯಂ ದ್ವಿತೀಯಾದ್ಯಸಮನ್ವಿತಂ ।
ಚತುರ್ಥವರ್ಣಂ ಮಂತ್ರಸ್ಯ ಸಪ್ತಮಾದ್ಯಂ ತು ಪಂಚಮಂ ॥೨೩॥

---

ಮೊದಲನೆಯವರ್ಗದಲ್ಲಿ, ಹದಿನಾರು ಸ್ವರಾಕ್ಷರಗಳನ್ನೂ ಅಂದರೆ ಅಕಾರಾದಿಯಾಗಿ ಅಃ, ಎಂಬ ವಿಸರ್ಗಪರ್ಯಂತ ಬರೆಯಬೇಕು. ಮುಂದಿನ ಐದು ವರ್ಗಗಳಲ್ಲಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗಗಳೆಂಬ ಐದು ವರ್ಗಗಳನ್ನೂ ಕ್ರಮವಾಗಿ ಬರೆಯಬೇಕು. ಕೊನೆಯ ಎರಡು ವರ್ಗಗಳಲ್ಲಿ ಅಂದರೆ ಏಳು ಮತ್ತು ಎಂಟರಲ್ಲಿ ಯ ರ ಲ ವ, ಎಂಬ ನಾಲ್ಕು ಅಕ್ಷರಗಳನ್ನೂ, ಎಂಟನೆಯ ವರ್ಗದಲ್ಲಿ ಶ, ಷ, ಸ, ಹ ಎಂಬ ನಾಲ್ಕು ಅಕ್ಷರಗಳನ್ನೂ ಬರೆಯಬೇಕು. ಹೀಗೆ ಎಲ್ಲ ಅಕ್ಷರಗಳನ್ನೂ ಬರೆದ ಮೇಲೆ ಅದರಲ್ಲಿ ಮುಂದೆ ಹೇಳುವ ಕ್ರಮದಂತೆ ಪಂಚಾಕ್ಷರಗಳನ್ನು ಉದ್ಧಾರ ಮಾಡಬೇಕು. ॥೧೮-೧೯-೨೦॥

ಮೇಲೆ ಹೇಳಿದ ಎಂಟು ವರ್ಗಗಳಲ್ಲಿ ಐದನೆಯ ವರ್ಗದ ಐದನೆಯ ಅಕ್ಷರವಾದ ನಕಾರವು ಶಿವಪಂಚಾಕ್ಷರಮಂತ್ರದಲ್ಲಿ ಮೊದಲನೆಯದಾಗುವುದು. ಆರನೆಯ ವರ್ಗದ ಕೊನೆಯ ಅಕ್ಷರವಾದ ಮಕಾರವು ಎರಡನೆಯ ವರ್ಣವೆನಿಸುವುದು. ಇದಕ್ಕೆ ಪ್ರಥಮವರ್ಗದ ಕೊನೆಯ ಅಕ್ಷರವಾದ ವಿಸರ್ಗವೂ ಸೇರುವುದು. ಎಂಟನೆಯ ವರ್ಗದ ಮೊದಲನೆಯ ಅಕ್ಷರವು ಪ್ರಥಮವರ್ಗದ ಮೂರನೆಯ ಸ್ವರದೊಡಗೂಡಿ ಅಂದರೆ ಶಿಕಾರವಾಗಿ ಪಂಚಾಕ್ಷರ ಮಂತ್ರದ ಮೂರನೆಯ ಅಕ್ಷರವಾಗುವುದು. ಏಳನೆಯ ವರ್ಗದ ಕೊನೆಯ ಅಕ್ಷರವು ಪ್ರಥಮವರ್ಗದ ದ್ವಿತೀಯಾಕ್ಷರವಾದ ಆಕಾರದೊಡಗೂಡಿ ಪಂಚಾಕ್ಷರ ಮಂತ್ರದ ನಾಲ್ಕನೆಯ ಅಕ್ಷರವಾಗುವುದು. ಏಳನೆಯ

ಏಷ ಪಂಚಾಕ್ಷರೋ ಮಂತ್ರಃ ಪ್ರಣವಾದ್ಯಃ ಷಡಕ್ಷರಃ ।
ಯತ್ಸಾಧನಾತ್ತು ಮನುಜಾಃ ಶಿವಸಾಯುಜ್ಯಮಾಪ್ನುಯುಃ ॥೨೪॥

ಪ್ರಣವಸ್ತು ಪರಂ ಬ್ರಹ್ಮಬೋಧಕಃ ಸಮುದೀರಿತಃ ।
ಪಂಚಾಕ್ಷರಮಯಾನಿ ಸ್ಯುಃ ಪಂಚಭೂತಾನಿ ಸುವ್ರತಂ ॥೨೫॥

ಭೂತಾತ್ಮಕಂ ಜಗದಿದಂ ತೇನಾಸ್ಯ ಜಗದಾತ್ಮನಾ ।
ಋಷಿರುಕ್ತೋ ವಾಮದೇವಃ ಪಂಕ್ತಿಶ್ಛಂದ ಉದಾಹೃತಃ ॥೨೬॥

ಸದಾಶಿವೋ ದೇವತಾಸ್ಯ ಮಂತ್ರಸ್ಯ ಪರಿಕೀರ್ತಿತಃ ।
ಷಡಂಗಾನಿ ಮನೋರ್ವರ್ಣೈರ್ಜಾತಿಯುಕ್ತಾನಿ ಕಲ್ಪಯೇತ್ ॥೨೭॥

ತತ್ಪುರುಷಾಘೋರಸದ್ಯೋವಾಮದೇವೇಶಸಂಜ್ಞಿತಾಃ ।
ಮೂಲವರ್ಣಾದಿಕಾಸ್ಯಸ್ಯ ತ್ರಿಷು ಸ್ಥಾನೇಷ್ವತಂದ್ರಿತಃ ॥೨೮॥

---

ವರ್ಗದ ಮೊದಲನೆಯ ಅಕ್ಷರವಾದ ಯಕಾರವು ಪಂಚಾಕ್ಷರಮಂತ್ರದ ಐದನೆಯ ಅಕ್ಷರವಾಗುವುದು. ॥೨೧-೨೨-೨೩॥

ಇದು ಪಂಚಾಕ್ಷರ ಮಂತ್ರವು (ನಮಃ ಶಿವಾಯ); ಓಂಕಾರಾದಿಯಾದ ಈ ಪಂಚಾಕ್ಷರವೇ ಷಡಕ್ಷರವೆನಿಸುವುದು ; ಇದನ್ನು ಸಾಧಿಸುವುದರಿಂದ ಮಾನವರು ಶಿವಸಾಯುಜ್ಯವನ್ನೈದುವರು. ಪ್ರಣವಮಂತ್ರವಾದರೋ ಪರಬ್ರಹ್ಮವಸ್ತು ಬೋಧಕವೆಂದು ಹೇಳಲ್ಪಟ್ಟಿದೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಪೃಥಿವ್ಯಪ್ತೇಜೋವಾಯುರಾಕಾಶಗಳೆಂಬ ಪಂಚಭೂತಗಳು ಈ 'ನಮಃ ಶಿವಾಯ' ಎಂಬ ಪಂಚಾಕ್ಷರಮಂತ್ರಸ್ವರೂಪಗಳಾಗಿವೆ. ॥೨೪-೨೫॥

ಜಗದ್ರೂಪಿಯಾದ ಪರಶಿವನ ಈ ಮಂತ್ರದಿಂದಲೇ ಈ ಪ್ರಪಂಚವೆಲ್ಲವೂ ಭೂತಮಯವೆನಿಸಿದೆ. ಈ ಮಂತ್ರಕ್ಕೆ ವಾಮದೇವನೇ ಋಷಿ ; ಪಂಕ್ತಿಯೆಂಬುದೇ ಛಂದಸ್ಸು ; ಸದಾಶಿವನೇ ದೇವತೆಯೆಂಬುದಾಗಿ ಹೇಳಲ್ಪಟ್ಟಿದೆ. ಈ ಮಂತ್ರಕ್ಕೆ ವರ್ಣಾನುಕ್ರಮವಾಗಿ ಜಾತಿನಿಯಮವನ್ನನುಸರಿಸಿ ಆರಂಗಗಳನ್ನು ಅಂದರೆ ಷಡಂಗನ್ಯಾಸಗಳನ್ನು ಕಲ್ಪಿಸಬೇಕು. ॥೨೬-೨೭॥

ಈ ಮಂತ್ರಕ್ಕೆ ಐದು ಮೂರ್ತಿಗಳಿರುವುವು. ಈ ಮೂರ್ತಿಗಳಿಗೆ ಕ್ರಮವಾಗಿ ಮೂಲವರ್ಣಗಳಿರುವುವು. (ಪಂಚಾಕ್ಷರಮಂತ್ರದ ಐದುವರ್ಣಗಳೇ ಮೂಲವರ್ಣ

ನ ತರ್ಜನೀ ಮಧ್ಯಮಾಂತ್ಯಾನಾಮಂಗುಷ್ಠೇಷ್ವಥಾಪರಃ ।
ಆಸ್ಯಹೃತ್ಪಾದಗುಹ್ಯಾದಿ ಮೂರ್ಧ್ನಿ ಹಸ್ತೇಷು ಚಾಪರಃ ॥೨೯॥

ಪ್ರಾಗ್ಯಾಮ್ಯವಾರುಣೋದೀಚ್ಯಾಂ ಮಧ್ಯವಕ್ತ್ರೇಷು ಪಂಚಸು ।
ತತಃ ಷಡಂಗಂ ವಿನ್ಯಸ್ಯ ವಕ್ಷ್ಯಮಾಣಂ ಯಥಾವಿಧಿ ॥೩೦॥

ಸರ್ವಜ್ಞೋ ನಿತ್ಯತೃಪ್ತಶ್ಚ ಬೋಧಾಂತೋಽನಾದಿರೇವ ಹಿ ।
ಸ್ವತಂತ್ರಶಕ್ತಿಶ್ಚಾಲುಪ್ತಃ ಭಕ್ತಿಶ್ಚಾನಂತಶಕ್ತಿಯುಕ್ ॥೩೧॥

ಮೂಲಮಂತ್ರೇಣ ಸರ್ವೈಶ್ಚ ಧಾಮ್ನೇ ಶಬ್ದಾಂತಿಕೈಃ ಕ್ರಮಾತ್ ।
ಷಡಂಗಾನಿ ಮನೋರಸ್ಯ ಜಾತಿಯುಕ್ತಾನಿ ಮಂತ್ರವಿತ್ ॥೩೨॥

ಕುರ್ವೀತ ಗೋಲಕಂ ನ್ಯಾಸಂ ರಕ್ಷಾಯೈ ನಂದಿಕೇಶ್ವರ ।
ಹೃದಿ ವಕ್ತ್ರಾಂಸಯೋರೂರ್ವೋಃ ಕಚೇ ನಾಭೌ ದ್ವಿಪಾರ್ಶ್ವಯೋಃ ॥೩೩॥

---

ಗಳು) ಮೂರು ಸ್ಥಾನಗಳಲ್ಲಿ ಆಲಸ್ಯವಿಲ್ಲದೇ ಈ ವರ್ಣಗಳನ್ನುಚ್ಚರಿಸಬೇಕು. ತರ್ಜನೀ, ಮಧ್ಯಮಮತ್ತು ಕನಿಷ್ಠ ಬೆರಳುಗಳಲ್ಲಿ ಮಂತ್ರವಿನ್ಯಾಸಮಾಡಬಾರದು. ಅಂಗುಷ್ಠದಲ್ಲಿ ಬೇರೆಯಾಗಿ ನ್ಯಾಸಮಾಡಬೇಕು. ಮುಖ, ಹೃದಯ, ಕಾಲು, ಗುಹ್ಯ ಮತ್ತು, ತಲೆ, ಕೈಗಳಲ್ಲಿ ಬೇರೊಂದು ನ್ಯಾಸಮಾಡಬೇಕು. ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮತ್ತು ಮಧ್ಯದ ಐದು ಮುಖಗಳಲ್ಲಿಯೂ, ಮುಂದೆ ಹೇಳುವ ಷಡಂಗಗಳನ್ನೂ ವಿಧಿಪ್ರಕಾರ ವಿನ್ಯಾಸಮಾಡಬೇಕು. ॥೨೮-೨೯-೩೦॥

ಸರ್ವಜ್ಞ, ನಿತ್ಯತೃಪ್ತ, ಬೋಧಾಂತ, ಅನಾದಿ, ಸ್ವತಂತ್ರಶಕ್ತಿ, ಅಲುಪ್ತಭಕ್ತಿ, ಮತ್ತು ಅನಂತಶಕ್ತಿಯುಕ್ ಎಂಬ ಶಬ್ದಗಳ ಕೊನೆಯಲ್ಲಿ 'ಧಾಮ್ನೇ' ಎಂಬ ಶಬ್ದವನ್ನು ಸೇರಿಸಿ ಕ್ರಮವಾಗಿ ಮೂಲಮಂತ್ರದ ಆರು ಅಕ್ಷರಗಳಿಂದ ಸೇರಿಸಿ ಜಾತಿಯುಕ್ತವಾದ ಷಡಂಗಗಳನ್ನು ಮಂತ್ರಜ್ಞನು ನ್ಯಾಸಮಾಡಬೇಕು. ಎಲೈ ನಂದಿಕೇಶ್ವರನೇ! ಮೊದಲು ಆತ್ಮರಕ್ಷೆಗೋಸ್ಕರ ಗೋಲಕನ್ಯಾಸಮಾಡಬೇಕು. ॥೩೧-೩೨॥

ಹೃದಯ, ಮುಖ, ಭುಜಗಳು, ತೊಡೆಗಳು, ಕೂದಲು, ನಾಭಿ, ಎರಡು ಪಕ್ಕಗಳು, ಬೆನ್ನು, ಹೃದಯ, ತಲೆ, ಮುಖ, ಕಣ್ಣುಗಳು, ಮೂಗು, ತೋಳಿನ ಸಂಧಿ, ಉಗುರಿನ ತುದಿ ಈ ಸ್ಥಳಗಳಲ್ಲಿ ನ್ಯಾಸಮಾಡಬೇಕು. ಆಮೇಲೆ ತಲೆ, ಮುಖ,

ಪೃಷ್ಠೇ ಹೃದಿ ತತೋ ಮೂರ್ಧ್ನಿ ವದನೇ ನೇತ್ರಯೋರ್ನಸೋಃ ।
ದೋಃಸಂಧಿಷು ನಖಾಗ್ರೇಷು ವಿನ್ಯಸೇತ್ತದನಂತರಮ್ ॥೩೪॥

ಶಿರೋವದನಹೃತ್ಕುಕ್ಷೌ ಊರೂಪಾದದ್ವಯೇ ಪುನಃ ।
ಹೃದಿ ವಕ್ತ್ರಾಂಬುಜೇ ಕಂಠೇ ಮೃಗಾಭಯಕರೇಷ್ವಥ ॥೩೫॥

ವಕ್ತ್ರಾಂಸಹೃತ್ಸು ಪಾದೋರುಜಠರೇಷು ನ್ಯಸೇದಥ ।
ಮೂಲಮಂತ್ರಸ್ಯ ಷಡ್ವರ್ಗಾನ್ಯಥಾವದ್ದೇಶಿಕೋತ್ತಮಃ ॥೩೬॥

ಮೂರ್ಧ್ನಿ ಪಾದೋದರಾಂಗೇಷು ಹೃದಯೇ ತಾಂ ಪುನರ್ನ್ಯಸೇತ್ ।
ಪಶ್ಚಾದನೇನ ಮಂತ್ರೇಣ ಕುರ್ಯಾತ್ಸ್ವವ್ಯಾಪಕಂ ಸುಧೀಃ ॥೩೭॥

ನಮೋಽಸ್ತು ಸ್ಥಾಣುಭೂತಾಯ ಜ್ಯೋತಿರ್ಲಿಂಗಾತ್ಮನೇ ನಮಃ ।
ಚತುರ್ಮೂರ್ತಿವಪುಃಸ್ಥಾಯ ಭಾಸಿತಾಂಗಾಯ ಶಂಭವೇ ॥೩೮॥

ಏವಂ ನ್ಯಸ್ತತನುರ್ನಂದಿನ್ಧ್ಯಾಯೇದ್ದೇವಮನನ್ಯಧೀಃ ।
ಗೋಕ್ಷೀರಫೇನಧವಲಂ ರಜತಾದ್ರಿಸಮಪ್ರಭಮ್ ॥೩೯॥

---

ಹೃದಯ, ಹೊಟ್ಟೆ, ತೊಡೆ, ಎರಡು ಕಾಲುಗಳು, ಪುನಃ ಹೃದಯ, ಮುಖಕಮಲ, ಕೊರಳು, ಮೃಗ, ಮತ್ತು ಅಭಯಪ್ರದವಾದ ಕೈಗಳು, ಮುಖ, ಭುಜ, ಹೃದಯ, ಕಾಲು, ತೊಡೆ, ಹೊಟ್ಟೆಗಳಲ್ಲಿ ಷಡ್ವರ್ಗಗಳನ್ನು ಯಥಾಕ್ರಮವಾಗಿ ಅನುಗೊಳಿಸಿ, ಆಚಾರ್ಯವರ್ಯನು ಮೂಲಮಂತ್ರನ್ಯಾಸವಮಾಡಬೇಕು. ॥೩೩-೩೪-೩೫-೩೬॥

ಪುನಃ ಆ ಮಂತ್ರವನ್ನು ತಲೆ, ಕಾಲು, ಹೊಟ್ಟೆ, ಅವಯವ, ಹೃದಯ ಇವುಗಳಲ್ಲಿ ನ್ಯಾಸಮಾಡಬೇಕು. ಆಮೇಲೆ ಇದೇ ಮಂತ್ರದಿಂದ ಭಕ್ತಿಯುಕ್ತ ಸರ್ವವ್ಯಾಪಕತ್ವವನ್ನು ಅನುಸಂಧಾನಮಾಡುತ್ತಾ ಧ್ಯಾನಮಾಡಬೇಕು. 'ಪ್ರಳಯಕಾಲದಲ್ಲಿಯೂ ನಾಶವಾಗದೇ ಸ್ಥಾಣುವೆನಿಸಿರುವ ನಿನಗೆ ನಮುಸ್ಕಾರ ; ಜ್ಯೋತಿರ್ಲಿಂಗಸ್ವರೂಪಿಯಾದ ದೇವನಿಗೆ ಪ್ರಣಾಮವು ; ಚತುರ್ಮೂರ್ತಿದೇಹಗತನಾಗಿ, ತೇಜಃಸ್ವರೂಪದಿಂದ ಪ್ರಕಾಶಿತವಾದ ಅವಯವಗಳುಳ್ಳ ಶಂಭುವಿಗೆ ನಮುಸ್ಕಾರಮಾಡುತ್ತೇನೆ.' ॥೩೭-೩೮॥

ಇದು ನ್ಯಾಸಮಂತ್ರಾರ್ಥ, ಹೀಗೆ ನ್ಯಾಸಮಾಡಿದ ಮೇಲೆ ಅನನ್ಯ ಮನಸ್ಸಿನಿಂದ ಮಹಾದೇವನನ್ನು ಈರೀತಿ ಧ್ಯಾನಿಸಬೇಕು. ಹಸುವಿನ ಹಾಲಿನ ನೊರೆಯಂತೆ ಶುಭ್ರನೂ, ರಜತಾಚಲಕ್ಕೆ ಸಮಾನವಾದ ಕಾಂತಿಯುಳ್ಳವನೂ, ಮನೋಹರವಾದ

ಚಾರುಚಂದ್ರಕಲಾರಾಜಜ್ಜಟಾಮುಕುಟಮಂಡಿತಂ ।
ಪಂಚವಕ್ತ್ರಧರಂ ಶಂಭುಂ ಶಿತಿಕಂಠಂ ತ್ರಿಲೋಚನಂ ॥೪೦॥

ಶಾರ್ದೂಲಚರ್ಮವಸನಂ ನಾಗಾಭರಣಭೂಷಿತಂ ।
ದಕ್ಷೋರ್ಧ್ವಹಸ್ತಪರಶುಂ ತದಧಸ್ತಾದ್ವರದಂ ಕರಂ ॥೪೧॥

ವಾಮೋರ್ಧ್ವಹಸ್ತಹರಿಣಂ ದಧಾನಮುಭಯಂಕರೇ ।
ಸುಪ್ರಸನ್ನಮುಖಾಂಭೋಜನಿವಿಷ್ಟಂ ಪದ್ಮವಿಷ್ಟರೇ ॥೪೨॥

ಬ್ರಹ್ಮವಿಷ್ಣುಮಹೇಂದ್ರಾದ್ಯೈಃ ಸ್ತುತಂ ಭಕ್ತ್ಯಾ ಶಿವಾಯುತಂ ।
ವಿಶ್ವಾದ್ಯಂ ವಿಶ್ವವಪುಷಂ ಭವಭೀತಿಹರಂ ಶಿವಂ ॥೪೩॥

ಇತಿ ಧ್ಯಾತ್ವಾ ಗಣಶ್ರೇಷ್ಠ ಮಾನಸೈರರ್ಚಯೇಚ್ಛಿವಂ ।
ಉಪಚಾರೈಃ ಷೋಡಶಭಿರ್ಬಾಹ್ಯಪೀಠೇ ಸಮರ್ಚಯೇತ್ ॥೪೪॥

---

ಚಂದ್ರಕಲೆಗಳಿಂದ ವಿರಾಜಿಸುತ್ತಿರುವ ಜಟಾಮುಕುಟಮಂಡಿತನೂ, ಆದ ಮಹೇಶ್ವರನು ಐದು ಮುಖಗಳುಳ್ಳವನಾಗಿರುವನು. ಜಗನ್ಮಂಗಳಕರನೆನಿಸಿ ವಿಷಕಂಠನೂ, ಸೋಮಸೂರ್ಯಾಗ್ನಿರೂಪವಾದ ಮೂರು ಕಣ್ಣುಳುಳ್ಳವನೂ, ಆಗಿರುವನು. ಹುಲಿಯ ಚರ್ಮವನ್ನು ಧರಿಸಿದವನಾಗಿ, ಸರ್ಪಾಭರಣದಿಂದ ಅಲಂಕೃತನೆನಿಸಿ ಬಲಗಡೆಯಲ್ಲಿರುವ ಒಂದು ಕೈಯಿಂದ ಪರಶುವೆಂಬ ಆಯುಧವನ್ನೂ ಮತ್ತೊಂದು ಕೈಯಿಂದ ವರದಮುದ್ರೆಯನ್ನೂ ಹೊಂದಿರುವನು. ॥೩೯-೪೦-೪೧॥

ಎಡಭಾಗದ ಮೇಲ್ಗೈಯನಲ್ಲಿ ಜಿಂಕೆಯನ್ನೂ, ಕೆಳಗಿನ ಕೈಯ್ಯಲ್ಲಿ ಅಭಯಚಿಹ್ನೆಯನ್ನೂ ಧರಿಸಿ, ಸಂತೋಷವಿಶಿಷ್ಟವಾದ ಮುಖಕಮಲವುಳ್ಳವನೂ, ಪದ್ಮಾಸನದಲ್ಲಿ ಕುಳಿತಿರುವವನೂ, ಬ್ರಹ್ಮ, ವಿಷ್ಣು, ಮಹೇಂದ್ರ ಮುಂತಾದವರಿಂದ ಭಕ್ತಿಪೂರ್ವಕವಾಗಿ ಸ್ತುತಿಸಲ್ಪಟ್ಟವನೂ, ಪಾರ್ವತಿಯೊಡಗೂಡಿರುವವನೂ, ಜಗದಾದ್ಯನೂ, ಜಗದ್ರೂಪಿಯೂ, ಸಂಸಾರಭಯುವನ್ನು ತೊಲಗಿಸುವವನೂ, ಪ್ರಳಯದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನೂ ಆದ ಪರಶಿವನನ್ನು ಹೀಗೆ ಧ್ಯಾನಮಾಡಬೇಕು. ಎಲೈ ಗಣಶ್ರೇಷ್ಠನೇ, ಅನಂತರ ಮಾನಸಿಕವಾದ ಉಪಚಾರಗಳಿಂದ ಶಿವನನ್ನು ಭಕ್ತಿಯಿಂದ ಪೂಜಿಸಬೇಕು. ॥೪೨-೪೩॥

ಹದಿನಾರು ವಿಧಗಳಾದ ಉಪಚಾರಗಳಿಂದಲೂ ಬಹಿಃಪೀಠಗತನಾದ ಪರಶಿವನನ್ನು ಭಕ್ತಿಯಿಂದ ಪೂಜಿಸಬೇಕು. ಕರ್ಣಿಕೆ. ಮತ್ತು ಕೇಸರಗಳಿಂದ ಉಜ್ವಲ

ಪದ್ಮಂ ವಸುದಳಂ ಕೃತ್ವಾ ಕರ್ಣಿಕಾಕೇಸರೋಜ್ವಲಂ ।
ಬಹಿರಷ್ಟದಳದ್ವಂದ್ವಂ ಚತುರಸ್ರತ್ರಯಾನ್ವಿತಂ ॥೪೫॥

ಚತುರ್ದ್ವಾರಸಮಾಯುಕ್ತೇ ಮಂಡಲೇಽಸ್ಮಿನ್ಪ್ರಪೂಜಯೇತ್ ।
ಏವಂ ಪೀಠಂ ಸಮಭ್ಯರ್ಚ್ಯ ಮೂರ್ತಿಮತ್ವೇನ ಹೃದ್ಗತಾಂ ॥೪೬॥

ಆವಾಹ್ಯ ಲಿಂಗೇ ಮೂಲೇನ ಸಪುಷ್ಪೇಣ ಗಣೋತ್ತಮ ।
ಪಾದ್ಯಾರ್ಘ್ಯಾಚಮನೈರ್ನೀರೈಃ ಸಪುಷ್ಪೈರ್ವಾಸಿಕೈಸ್ತದಾ ॥೪೭॥

ಪಂಚಗವ್ಯೈಃ ಪಂಚಫಲೈರ್ಗವಾಂ ಪಂಚಾಮೃತೈರಪಿ ।
ಗಂಧಪುಷ್ಪಾಂಬುರತ್ನೋದೈಃ ಶುದ್ಧೋದೈಃ ಸಿಚ್ಯ ಶಂಕರಂ ॥೪೮॥

ರುದ್ರಸೂಕ್ತೇನ ಚಮಕೈಃ ಚಿತ್ವಾಪಾವನಮಂತ್ರಕೈಃ ।
ಸಂಸ್ನಾಪ್ಯ ಪೀಠೇ ಸಂಸ್ಥಾಪ್ಯ ವಾಸನಾವೇಷ್ಟ್ಯ ಗಂಧಕೈಃ ॥೪೯॥

---

ವಾಗಿರುವ ಅಷ್ಟದಳಪದ್ಮವನ್ನು ರಚಿಸಿ, ಹೊರಗೆ ಎಂಟುದಳಗಳ ಎರಡು ಪದ್ಮವನ್ನೂ ಮೂರು ಚೌಕಗಳೊಡನೆ ರಚಿಸಬೇಕು. ಅದಕ್ಕೆ ನಾಲ್ಕು ಬಾಗಿಲುಗಳುಳ್ಳ ಅದೇ ಮಂಡಲದಲ್ಲಿ ವಿಧಿವತ್ತಾಗಿ ಪೂಜೆಮಾಡಬೇಕು ॥೪೪-೪೫॥

ಹೀಗೆ ಪೀಠಪೂಜೆಮಾಡಿ, ಮನಸ್ಸಿನಲ್ಲಿ ಆಕೃತಿವೆತ್ತಿರುವ ಶಿವವಿಗ್ರಹವನ್ನು ಪುಷ್ಪದೊಡನೆ ಶಿವಲಿಂಗದಲ್ಲಿ ಮೂಲಮಂತ್ರದಿಂದ ಆವಾಹನೆ ಮಾಡಬೇಕು. ಅಯ್ಯ ಗಣಶ್ರೇಷ್ಠನೆ, ಅನಂತರ ಪಾದ್ಯ, ಅರ್ಘ್ಯ, ಆಚಮನ, ಜಲಪ್ರೋಕ್ಷಣ ಮತ್ತು ಶುಭ್ರವಾದ ಪುಷ್ಪಸಮರ್ಪಣೆ ಇವುಗಳನ್ನು ಮಾಡಿ ಪಂಚಗವ್ಯಗಳಿಂದಲೂ ಪಂಚಫಲಗಳಿಂದಲೂ, ಪಂಚಾಮೃತ ದ್ರವ್ಯಗಳಿಂದಲೂ, ಗಂಧ, ಹೂ, ಮಿಶ್ರವಾದ ನೀರು, ರತ್ನೋದಕ ಮತ್ತು ಶುದ್ಧೋದಕಗಳಿಂದಲೂ ಭಕ್ತಿಯಿಂದ ಅಭಿಷೇಕಮಾಡಬೇಕು. ॥೪೬-೪೭-೪೮॥

ರುದ್ರಸೂಕ್ತ, ಚಮಕ, ಮತ್ತು ಪಾವನಮಂತ್ರಗಳಾದ ಶತರುದ್ರೀಯ ಇವುಗಳಿಂದ ಅಭಿಷೇಕಮಾಡಿ, ಪವಿತ್ರವಾದ ಪೀಠದಲ್ಲಿ ಶಿವಲಿಂಗವನ್ನು ಸ್ಥಾಪನೆಮಾಡಿ ವಸ್ತ್ರಗಳನ್ನುಡಿಸಿ, ಗಂಧ, ಅಕ್ಷತೆ, ಭಸ್ಮ, ಬಿಲ್ವ, ಉತ್ತರಾಗ್ರವಾಗಿ ಅರಳಿರುವ ಇತರ ಹೂಗಳು, ಇವುಗಳನ್ನು ದೊರೆತಷ್ಟು ತಂದು ಈ ಮಂತ್ರಗಳಿಂದ, ಓಂ ಹರಾಯ

ಸಾಕ್ಷತೈರ್ಭಸ್ಮನಾ ಬಿಲ್ವೈರುತ್ತಾನೈರುತ್ತರಾಗ್ರಕೈಃ ।
ಅನ್ಯಪುಷ್ಪೈರ್ಯಥಾಲಾಭಂ ಮಂತ್ರೈರೇತೈರ್ಗಣೋತ್ತಮ ॥೫೦॥

ಹರೋ ಮಹೇಶ್ವರಃ ಶಂಭುರುಗ್ರೋ ಭೀಮಃ ಶಿವಸ್ತಥಾ ।
ಸಂಸಾರವೈದ್ಯಃ ಸರ್ವಜ್ಞ ಇತ್ಯಾದ್ಯೈಶ್ಚ ನಮೋಽಂತಕೈಃ ॥೫೧॥

ಧೂಪಂ ದೀಪಂ ಚ ನೈವೇದ್ಯಂ ತಾಂಬೂಲಂ ಚ ತತೋ ಗಣ ।
ದದ್ಯಾನ್ಮೂಲೇನ ದೇವಾಯ ಪ್ರಣಾಮಪ್ರಕ್ರಮಸ್ತಥಾ ॥೫೨॥

ನೀರಾಜನಂ ನರ್ತನಂ ಚ ಪುನರ್ಮಂತ್ರಜಪಸ್ತಥಾ ।
ಆವಾಹಿತಸ್ಯ ಹೃದಯೇ ಪುನರುದ್ವಾಸನಂ ತದಾ ॥೫೩॥

ಸಂಗ್ರಹೇ ವಿಧಿರೇವಾಯಂ ವಿಸ್ತರೇ ಚೇದಥೋಚ್ಯತೇ ॥೫೪॥

ಏವಂ ಭಕ್ತಗಣೋ ಗಣೋತ್ತಮ ಸದಾಲಿಂಗಂ ತ್ರಿಕಾಲಂ ಯಜ-
ನ್ಕಾಲಂ ಚೈಕಮಥ ದ್ವಿತೀಯಮಗಜೇ ರುದ್ರೋ ಭವೇನ್ಮೇ ಗಣಃ ।

---

ನಮಃ, ಮಹೇಶ್ವರಾಯ ನಮಃ, ಶಂಭವೇ ನಮಃ, ಉಗ್ರಾಯ ನಮಃ, ಭೀಮಾಯ ನಮಃ, ಶಿವಾಯ ನಮಃ, ಸಂಸಾರ ವೈದ್ಯಾಯ ನಮಃ, ಸರ್ವಜ್ಞಾಯ ನಮಃ, ಇವೇ ಮೊದಲಾದ ನಮಸ್ಕಾರಾಂತವಾದ ಪದಗಳಿಂದ ಅರ್ಚನೆಮಾಡಿ, ಧೂಪ, ದೀಪ, ನೈವೇದ್ಯ, ತಾಂಬೂಲ ಮುಂತಾದವುಗಳನ್ನು ಮೂಲಮಂತ್ರದಿಂದ ದೇವನಿಗೆ ಸಮರ್ಪಿಸಬೇಕು. ಪ್ರಣಾಮಪ್ರಕಾರವೂ ಹೀಗೆಯೇ ಹೇಳಿದೆ. ಅಂದರೆ ಮೂಲ ಮಂತ್ರೋಚ್ಚಾರಣೆಯಿಂದಲೇ ಪ್ರಣಾಮಮಾಡಬೇಕು. ॥೪೯-೫೦-೫೧-೫೨॥

ನೀರಾಜನ, ನಾಟ್ಯ, ಪುನಃ ಮಂತ್ರಜಪ ಇವುಗಳಿಂದ ಮೊದಲೆ ಆವಾಹನೆ ಮಾಡಿರುವ ಮೂರ್ತಿಯನ್ನು ಪುನಃ ಹೃದಯದಿಂದ ಉದ್ವಾಸನೆ ಮಾಡಿ ಪೂಜಾ ವಿಧಿಯನ್ನು ವಿಸರ್ಜಿಸಿ ಸಮಾಪ್ತಿಗೊಳಿಸಬೇಕು. ಅಯ್ಯ ನಂದಿಕೇಶ್ವರನೆ, ಇದು ಸಂಗ್ರಹವಾದ ವಿಧಿಯು; ಇನ್ನುಮುಂದೆ ವಿಸ್ತಾರವಾದ ಶಿವಪೂಜಾವಿಧಿಯನ್ನು ಹೇಳುವೆನು ಕೇಳು. ॥೫೩-೫೪॥

ಅಯ್ಯ ಭಕ್ತಗಣಮುಖ್ಯನೆ, ಹೀಗೆ ಭಕ್ತರ ಸಮೂಹವು ಮೂರು ಕಾಲ ಗಳಲ್ಲಿಯೂ ಯಾವಾಗಲೂ ಶಿವಲಿಂಗವನ್ನು ಪೂಜಿಸುತ್ತಲಿದ್ದು, ಯಮನ ಆಕ್ರಮ

ತಸ್ಮಾನುತ್ತಮಭೋಗಸಂಪದಖಿಲಾಂ ಪ್ರಾಪ್ನೋತಿ ಭೂಮಂಡಲೇ
ಲಿಂಗಾರಾಧನಸಾಧನೈಕಮನಸಾ ತುಷ್ಟೋ ವಿಶಿಷ್ಟೋ ಭವೇತ್॥೫೪॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಸಂಕ್ಷೇಪಪೂಜಾಪದ್ಧತಿ
ನಿರೂಪಣಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ಣಕ್ಕೆ ಸಿಕ್ಕದೆ ಜೀವನ್ಮುಕ್ತರೆನಿಸುವರು. ಅದೂ ಅಲ್ಲದೆ, ಅದೇ ರೀತಿಯ ಪಂಚಾಕ್ಷರ ಮಂತ್ರಪುರಶ್ಚರಣೆಯಿಂದ ನನ್ನ ರುದ್ರಗಣವೇ ಆಗಿ ಅತ್ಯುತ್ತಮ ಭೋಗಸಂಪತ್ತುಗಳನ್ನೆಲ್ಲಾ ಭೂಮಂಡಲದಲ್ಲಿ ಪಡೆದು ಲಿಂಗಾರ್ಚನಸಾಧನಸಂಗ್ರಹಣದಲ್ಲೇ ನೆಟ್ಟ ಮನಸ್ಸಿನಿಂದ ಸಂತುಷ್ಟರೂ, ಶ್ರೇಷ್ಠರೂ ಎನಿಸಿ ಮುಕ್ತರಾಗುವರೆಂದು ಮಹೇಶ್ವರಿಗೆ ಶಿವನು ಹೇಳಿದುದನ್ನು ಸ್ಕಂದನು ಜೈಗೀಷವ್ಯನಿಗೆ ನಿರೂಪಿಸಿದನು. ॥೫೪॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಸಂಕ್ಷೇಪವಾದ ಪೂಜಾ ಪದ್ಧತಿನಿರೂಪಣೆಯೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಅಥ ಪಂಚಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ವಿಸ್ತರೇಣ ಪ್ರವಕ್ಷ್ಯಾಮಿ ಶಿವಲಿಂಗಾರ್ಚನಕ್ರಮಂ ।
ಷಡಕ್ಷರೇಣ ನ್ಯಾಸಾದಿ ಕೃತ್ವಾ ಪೂರ್ವೋಕ್ತವದ್ಗಣ ॥೧॥

ಲಘುನ್ಯಾಸೇನ ವಾ ಸಮ್ಯಕ್ಪಂಚಾಂಗೇನ ಯಥಾವಿಧಿ ।
ಪೀಠಾಂತಪೂಜನಂ ಕೃತ್ವಾ ಪೂಜಕೋ ಭಸ್ಮಭೂಷಿತಃ ॥೨॥

ಭೂಶುದ್ಧಿಂ ಭೂತಶುದ್ಧಿಂ ಚ ಕೃತ್ವಾ ವಾಥ ಸ್ವಶಕ್ತಿತಃ ।
ಸ್ಥಾವರೇ ಚೇದ್ದ್ವಾರಚಂಡೇ ಗಣೈಃ ಸಂಸ್ಕಾರಪೂರ್ವಕಂ ॥೩॥

---

## ನಲವತ್ತೈದನೆಯ ಅಧ್ಯಾಯ

ಓ ನಂದಿಕೇಶ್ವರನೇ! ಶಿವಲಿಂಗಪೂಜಾಕ್ರಮವನ್ನು ವಿಸ್ತಾರವಾಗಿ ಹೇಳುವೆನು ಕೇಳು; ಗಣಶ್ರೇಷ್ಠನೇ! ಹಿಂದೆ ಹೇಳಿದಂತೆ 'ಓಂ ನಮಃ ಶಿವಾಯ' ಎಂಬ ಷಡಕ್ಷರ ಮಂತ್ರದಿಂದ ನ್ಯಾಸಾದಿಗಳನ್ನು ಮಾಡಿ, ಲಘುನ್ಯಾಸಪೂರ್ವಕವೋ ಅಥವಾ ಪೂರ್ವೋಕ್ತವಾದ ಪಂಚಾಕ್ಷರಮಂತ್ರದನ್ಯಾಸಪೂರ್ವಕವಾಗಿಯೋ ವಿಧಿವತ್ತಾಗಿ ಪೀಠಾಂತಪೂಜೆಯನ್ನು ಮಾಡಿ ಭಸ್ಮಾಲಂಕೃತನಾದ ಪೂಜಕನು ತನ್ನ ಶಕ್ತ್ಯನುಸಾರವಾಗಿ ಭೂಶುದ್ಧಿಯನ್ನೂ ಭೂತಶುದ್ಧಿಯನ್ನೂ ಮಾಡಿಕೊಳ್ಳಬೇಕು. ॥೧-೨॥

ಸ್ಥಾವರಲಿಂಗವಾದರೆ ದ್ವಾರದೇಶದಲ್ಲಿ ಶಿವಗಣಗಳನ್ನು ಆರಾಧಿಸಿ ಸಂಸ್ಕಾರಪೂರ್ವಕ ಮಂತ್ರಗಳಿಂದ ದಿಗ್ಬಂಧನಾದಿಗಳನ್ನು ಮಾಡಿಕೊಂಡು, ಯಜ್ಞೇಶ್ವರನನ್ನು

ಅಸ್ತ್ರೇಣ ದಿಗ್ಬಂಧನಾದಿ ಕೃತ್ವಾ ಹುತ್ವಾ ಚ ಪಾವಕೇ ।
ಭವಾದ್ಯೈರ್ನಾಮಭಿಶ್ಚಾಷ್ಟೌ ಚಾಹುತೀಃ ಸಮಿಧೈಶ್ಚರುಂ ॥೪॥

ಸ್ವಸೂತ್ರೋಕ್ತೇನ ಮಾರ್ಗೇಣ ಸ್ಥಾಪ್ಯ ವಹ್ನಿಂ ಪೃಥಗ್ಯಜೇತ್ ।
ಪಂಚತ್ವಕ್ಪಲ್ಲವೋಪೇತಮವ್ರಣಂ ಕುಂಭಮೇವ ಹಿ ॥೫॥

ಸಂಪೂರ್ಯ ಶುದ್ಧೈರಂಭೋಭಿರಾಪೂರ್ಯ ವಿಧಿವತ್ತದಾ ।
ತಂಡುಲೇಷು ವಿಧಾಯೈವ ಪುಣ್ಯಾಹಂ ವಾಚಯೇತ್ತತಃ ॥೬॥

ತತ್ತೋಯೈಃ ಪ್ರೋಕ್ಷ್ಯ ಮೂಲೇನ ಶಾಸ್ತ್ರೇಣ ಪ್ರಣವೇನ ಹಿ ।
ಪ್ರಾಕ್ಪ್ರದಾದ್ದ್ವಾರಪಾಲಾಂಶ್ಚ ಪೂಜ್ಯ ಧೂಪಾದಿಭಿಃ ಕ್ರಮಾತ್ ॥೭॥

ಅಂತರ್ಗೃಹಂ ಪ್ರವಿಶ್ಯೈವಂ ಲಿಂಗಂ ಸಂಪೂಜಯೇತ್ತತಃ ।
ಸಮುತ್ತಾರ್ಯ ತಥಾ ವಾಸೋ ನಿರ್ಮಾಲ್ಯಂ ತದ್ಬಹಿಸ್ತ್ಯಜೇತ್ ॥೮॥

---

ವಿಧಿವತ್ತಾಗಿಪ್ರತಿಷ್ಠಿಸಿ ಭವಮುಂತಾದ ಶಿವನಾಮಗಳಿಂದ, ಎಂಟು ಆಹುತಿಗಳಲ್ಲಿ ಸಮಿತ್ತು ಮತ್ತು ಚರುವನ್ನು ಸಮರ್ಪಿಸಬೇಕು. ತಮ್ಮತಮ್ಮ ಸೂತ್ರದಲ್ಲಿ ಹೇಳಿರುವ ವಿಧಿಯಂತೆ ಅಗ್ನಿಮುಖಮಾಡಿಕೊಂಡು ಜ್ವಲಿಸುತ್ತಿರುವ ಯಜ್ಞೇಶ್ವರನಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಹೋಮಮಾಡಬೇಕು. ॥೩-೪॥

ಐದು ಮರದತೊಗಟೆ ಮತ್ತು ಚಿಗುರುಗಳಿಂದ ಶೋಭಿಸುತ್ತಾ, ಒಡಕಿಲ್ಲದ ಅಖಂಡಕುಂಭವೊಂದಕ್ಕೆ ವಿಧಿಪೂರ್ವಕವಾಗಿ ಶುದ್ಧೋದಕವನ್ನು ತುಂಬಿ ಅಲಂಕರಿಸಿ ಅಕ್ಕಿಯಮೇಲೆ ಇಟ್ಟು ಅನಂತರ ವಿಧ್ಯನುಗುಣವಾಗಿ ಪುಣ್ಯಾಹವಾಚನಮಾಡಬೇಕು. ಅನಂತರ ಪುಣ್ಯಾಹಜಲದಿಂದ ಓಂಕಾರಾದಿಯಾದ ಮೂಲಮಂತ್ರಪೂರ್ವಕವಾಗಿ ಪೂಜಾಸಾಮಗ್ರೀ, ದೇವತೆ, ತಾನು ಮುಂತಾದ ಸ್ಥಳಾದಿಗಳನ್ನೆಲ್ಲಾ ಪ್ರೋಕ್ಷಣೆ ಮಾಡಿಕೊಂಡು, ಪೂರ್ವದಿಕ್ಕಿನಿಂದ ಕ್ರಮವಾಗಿ ದ್ವಾರಪಾಲಕರೇ ಮುಂತಾದವರನ್ನು ಧೂಪದೀಪನೈವೇದ್ಯಾದಿಗಳಿಂದ ಪೂಜಿಸಿ, ಅನಂತರ ಅಂತರ್ಗೃಹವನ್ನು ಹೊಕ್ಕು ಮುಂದೆ ಹೇಳುವಂತೆ ಶಿವಲಿಂಗವನ್ನು ಪೂಜೆಮಾಡಬೇಕು. ॥೫-೬-೭॥

ಮೊದಲು ಧರಿಸಿದ್ದ ಬಟ್ಟೆಗಳನ್ನು ತೆಗೆದು ನಿರ್ಮಾಲ್ಯವನ್ನು ಹೊರಗೆ ತೆಗೆಯಬೇಕು. ಅನಂತರ ಓಂ ನಮೋ ಚಂಡೇಶಾಯ ನಮಃ ಎಂಬ ಮಂತ್ರಗಳಿಂದ, ಎಳ್ಳೆಣ್ಣೆ, ಪಂಚಗವ್ಯ, ಪಂಚಫಲಗಳು, ಅಕ್ಕಿಯಹಿಟ್ಟು, ಚಿಗಳಿ,

ಚಂಡೇಶಾಯೇತಿ ತದನು ಓಂ ನಮೋತ್ಯಾದಿಪೂರ್ವಕಂ ।
ತಿಲತೈಲೈಃ ಪಂಚಗವ್ಯೈಃ ತಥಾ ಪಂಚಫಲೈರಪಿ ॥೯॥

ಶಾಲಿಪಿಷ್ಟೈಸ್ತಥಾ ಕಲ್ಕೈರ್ಗಂಧಪುಷ್ಪೋದಕೈರಪಿ ।
ಬಹಿರ್ಜಪ್ತೇ ತಾಮ್ರಕುಂಭೇ ರುದ್ರಸೂಕ್ತೋದಕೈಃ ಶಿವಂ ॥೧೦॥

ಸಮುಭ್ಯಷಿಂಚೇತ್ತಲ್ಲಿಂಗಂ ಯಥಾವಿಭವಮೇವ ಹಿ ।
ಸ್ನಾನಕಾಲೇ ಪ್ರಕುರ್ವೀತ ವಾದ್ಯಾರಾವಂ ಮನೋಹರಂ ॥೧೧॥

ತತಃ ಶಂಖೋದಕೇನೇಶಂ ಅಭಿಷಿಂಚೇಚ್ಚ ಮೂಲತಃ ।
ವಾಸೋಭಿರ್ವೇಷ್ಟಯಿತ್ವೇಶಂ ಗಂಧೈರ್ಲಿಪ್ಯೇತ ಲಿಂಗಕಂ ॥೧೨॥

ತ್ರಿಪುಂಡ್ರಂ ದಾಪಯೇಲ್ಲಿಂಗೇ ಘೃತದೀಪಾವಲೀಮಪಿ ।
ಬಿಲ್ವಪತ್ರೈಸ್ತಥೋತ್ತಾನೈರುತ್ತರಾಗ್ರೈರಥಾರ್ಚಯೇತ್ ॥೧೩॥

ಶತಾಷ್ಟನಾಮಸಂಖ್ಯಾಭಿಃ ಕುಸುಮೈರ್ಮಾಲಿಕಾದಿಭಿಃ ।
ಧೂಪಂ ದೀಪಂ ಚ ನೈವೇದ್ಯಂ ತಾಂಬೂಲಮುಪಚಾರಕಂ ॥೧೪॥

---

ಗಂಧ, ಹೂಮಿಶ್ರವಾದ ನೀರು, ಹೊರಗೆ ಜಪಕ್ಕಾಗಿಟ್ಟಿರುವ ತಾಮ್ರಕುಂಭೋದಕ ಇವುಗಳಿಂದ ತಮ್ಮ ತಮ್ಮ ಐಶ್ವರ್ಯಾನುಗುಣವಾಗಿ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ॥೮-೯-೧೦॥

ಅಭಿಷೇಕಸಮಯದಲ್ಲಿ ಮನೋಹರವಾದ ವಾದ್ಯಘೋಷವನ್ನು ಮಾಡಿಸಬೇಕು. ಮೊದಲು ಶಂಖದ ನೀರಿನಿಂದ ಮೂಲಮಂತ್ರಪೂರ್ವಕವಾಗಿ ಈಶ್ವರನನ್ನು ಅಭಿಷೇಕಮಾಡಬೇಕು. ಅಭಿಷೇಕವಾದಮೇಲೆ ವಸ್ತ್ರಗಳಿಂದ ಈಶ್ವರನನ್ನು ಅಲಂಕರಿಸಿ ದಿವ್ಯಗಂಧದಿಂದ ಲಿಂಗಕ್ಕೆ ಲೇಪನಮಾಡಬೇಕು. ಲಿಂಗಕ್ಕೆ ಸ್ಪಷ್ಟವಾಗಿ ಕಾಣುವಂತೆ ಭಸ್ಮತ್ರಿಪುಂಡ್ರಗಳನ್ನು ಧರಿಸಬೇಕು. ಆಮೇಲೆ ತುಪ್ಪದ ದೀಪಗಳನ್ನು ಹತ್ತಿಸಿ ಚೆನ್ನಾಗಿರುವ ಬಿಲ್ವದಳಗಳಿಂದ ಉತ್ತರಾಗ್ರವಾಗಿ ಪೂಜೆಮಾಡಬೇಕು. ॥೧೧-೧೨-೧೩॥

ನೂರೆಂಟು ಶಿವನಾಮಗಳನ್ನುಚ್ಚರಿಸುತ್ತಾ, ಹೂಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಅರ್ಚನೆಮಾಡಿ ಧೂಪ, ದೀಪ, ನೈವೇದ್ಯ, ತಾಂಬೂಲಗಳನ್ನು ಸಮರ್ಪಿಸಿ ಉಪಚರಿಸಿ, ಛತ್ರ, ಚಾಮರ, ನವಿಲುಗರಿಯ ಬೀಸಣಿಗೆ, ಕನ್ನಡಿ

ಛತ್ರಚಾಮರಮಾಯೂರವ್ಯಜನಾದರ್ಶಕೈರಪಿ ।
ಪ್ರಣವಾದ್ಯೇನ ಮಂತ್ರೇಣ ತಲ್ಲಿಂಗೇನಾಪಿ ಭಕ್ತಿತಃ ॥೧೫॥

ನೀರಾಜನಂ ನೃತ್ಯಗೀತಂ ವಾದ್ಯಂ ನತ್ವಾ ಪ್ರದಕ್ಷಿಣಂ ।
ಸ್ತೋತ್ರಂ ಚೇತಿ ಸಮಾಸೇನ ಸ್ಥಾವರೇಷು ವಿಧಿಃ ಶಿವೇ ॥೧೬॥

ತತೋ ದೇವೀಂ ಗಣೇಶಂ ಚ ಸ್ಕಂದಚಂಡೇಶ್ವರಾದಿಕಾನ್ ।
ತತ್ತನ್ಮಂತ್ರೇಣ ಮೇಧಾವೀ ತಲ್ಲಿಂಗೈಶ್ಚ ನಮೋಽಂತಕೈಃ ॥೧೭॥

ಉಪಚಾರೈಶ್ಚ ಶಿವವತ್ಪೂಜ್ಯಾಸ್ತೇಽಮೀ ಗಣೇಶ್ವರ ।
ಮೂಲಚೇತಾ ಚ ಸಂಪೂಜ್ಯೌ ಪ್ರೋಕ್ಷಣಂ ಧಾತುಬೇರಕೇ(?)॥೧೮॥

ಉಪಚಾರಂ ಯಥಾಪೂರ್ವಂ ಕುರ್ಯಾನ್ನೀರಾಜನಂ ಪೃಥಕ್ ।
ದೇವ್ಯೈ ಪೂರ್ವಂ ಗಣೇಶಂ ಚ ಸ್ಕಂದಂ ಚಂಡೇಶ್ವರಂ ವೃಷಂ॥೧೯॥

---

ಮುಂತಾದವುಗಳಿಂದ ಉಪಚಾರಮಾಡಬೇಕು. ದೇವಿ, ಓಂಕಾರಪೂರ್ವಕವಾದ ಮಂತ್ರದಿಂದ ಆ ಲಿಂಗಕ್ಕೆ ಭಕ್ತಿಪೂರ್ವಕವಾಗಿ ಆರತಿ, ನಾಟ್ಯ, ಗಾನ, ವಾದ್ಯಗಳನ್ನು ಸಮರ್ಪಿಸಿ, ನಮಸ್ಕಾರ, ಪ್ರದಕ್ಷಿಣೆಗಳನ್ನು ಮಾಡಿ, ಅನಂತರ ಸ್ತೋತ್ರ ಮಾಡಬೇಕು. ದೇವಿ, ಸ್ಥಾವರಲಿಂಗಗಳ ಪೂಜಾವಿಧಿಯನ್ನು ಸಂಗ್ರಹವಾಗಿ ಈರೀತಿಯಾಗಿ ತಿಳಿಸಿರುವೆನು. ॥೧೪-೧೫-೧೬॥

ಅನಂತರ ದೇವಿ, ಗಣೇಶ, ಸ್ಕಂದ, ಚಂಡೇಶ್ವರ ಮುಂತಾದ ದೇವತೆಗಳನ್ನು ಭಕ್ತಿವಂತನಾದ ಅರ್ಚಕನು ಆಯಾ ದೇವತಾಮಂತ್ರಪೂರ್ವಕವಾಗಿ ಶಿವಲಿಂಗಗಳಲ್ಲಿ ನಮಸ್ಕಾರಾಂತವಾದ ಪದಗಳೊಡನೆ ಪೂಜಿಸಬೇಕು. ಅಯ್ಯ ಗಣಶ್ರೇಷ್ಠನೆ, ಶಿವನಂತೆ ಈ ದೇವತೆಗಳೂ ಉಪಚಾರಗಳಿಂದ ಪೂಜಾರ್ಹರು ; ಪರಶಿವನಿಗೆ ಸಲ್ಲಿಸತಕ್ಕ ಸಮಸ್ತ ಪೂಜಾದ್ರವ್ಯಗಳನ್ನೂ ಈ ಅಂಗದೇವತೆಗಳಿಗೆ ಸಮರ್ಪಿಸಬಹುದು. ಆದರೆ ಹಿಂದಿನಂತೆ ಉಪಚಾರಗಳನ್ನು ಮಾಡಿ, ನೀರಾಜನವನ್ನು ಮಾತ್ರ ಬೇರೆ ಮಾಡಬೇಕು. ॥೧೭-೧೮॥

ಮೊದಲು ದೇವಿ, ಅನಂತರ ಗಣೇಶ, ಕುಮಾರಸ್ವಾಮಿ, ಚಂಡೇಶ್ವರ, ವೃಷಭ, ನೃತ್ತೇಶ, ದಕ್ಷಿಣಾಮೂರ್ತಿ, ಸೋಮಸ್ಕಂದ ಈರೀತಿ ಕ್ರಮವಾಗಿ ಚರ ಅಥವಾ ಸ್ಥಿರಲಿಂಗಪೂಜೆಗಳಲ್ಲಿ ಅರ್ಚನೆಮಾಡಬೇಕು. ಸ್ಥಾವರಜಂಗಮಾತ್ಮಕವಾದ ಶಿವ

ನೃತ್ತೇಶಂ ದಕ್ಷಿಣಾಮೂರ್ತಿಂ ಸೋಮಸ್ಕಂದಂ ಚರಾಚರೇ ।
ಶಿವಸ್ಯ ಸರ್ಪಿಷಾ ಪ್ರೋಕ್ತಂ ಸ್ನಾನಂ ವಾಪಿ ಸ್ಥಿರೇ ಚರೇ ॥೨೦॥

ತಾವತಾ ಮಧುನಾ ಚೈವ ದಧ್ನಾ ಕ್ಷೀರೇಣ ತಾವತಾ ।
ಸಹಸ್ರಧಾರಾಶತಕಶಂಖೈರ್ಗೋಶೃಂಗಜೈರ್ಜಲೈಃ ॥೨೧॥

ಪಂಚವಿಂಶತಿಮೂರ್ತೀನಾಮೇವಂ ನೋ ಚೇತ್ರಿಮೂರ್ತಿಷು ।
ಭೈರವಸ್ಯಾಂತಿಮಾ ಪೂಜಾ ಕಾರ್ಯಾ ರಾತ್ರೌ ದಿವಾಪಿ ಹಿ ॥೨೨॥

ನಿತ್ಯಾದಪಿ ದ್ವಿಗುಣಿತಾಂ ಕುರ್ಯಾತ್ಪೂಜಾಂ ತಥೋತ್ಸವೇ ।
ಮಾಸರ್ಕ್ಷಾಯನಯೋರೇವಂ ಗ್ರಹಣೇ ಸೋಮಸೂರ್ಯಯೋಃ ॥೨೩॥

ಪರ್ವಣ್ಯಪಿ ವಿಶೇಷೇಣ ತೈಲೇಷೂದ್ವರ್ತನಂ ಚರೇತ್ ।
ಪಂಚಾಮೃತಾನಾಂ ಸ್ನಪನೇ ಚೈವಮಭ್ಯಂಗಕೇ ಶಿವೇ ॥೨೪॥

ಸ್ನಾನಂ ಪಲಶತಂ ಜ್ಞೇಯಮಭ್ಯಂಗಃ ಪಂಚವಿಂಶತಿಃ ।
ಪಲಾನಾಂ ದ್ವೇ ಸಹಸ್ರೇ ತು ಮಹಾಸ್ನಾನಂ ಪ್ರಕೀರ್ತಿತಂ ॥೨೫॥

---

ಲಿಂಗಗಳಲ್ಲಿ ಶಿವನಿಗೆ ತುಪ್ಪದಿಂದ ಸ್ನಾನವೇರ್ಪಟ್ಟಿರುವುದು. ಅಥವಾ ಅಷ್ಟೇ ಪ್ರಮಾಣದ ಜೇನು, ಮೊಸರು, ಹಾಲುಗಳಿಂದಲೂ ಸ್ನಾನಮಾಡಿಸಬಹುದು. ನೂರು ಅಥವಾ ಸಹಸ್ರಧಾರೆಗಳುಳ್ಳ ಪಾತ್ರೆಗಳಿಂದಲೂ, ಶಂಖ ಅಥವಾ ಹಸುವಿನ ಕೊಂಬಿನ ಸಹಾಯದಿಂದ ಬೀಳುವ ನೀರಿನಿಂದಲೂ ಅಭಿಷೇಕಮಾಡಬೇಕು. ॥೧೯-೨೦-೨೧॥

ಇಪ್ಪತ್ತೈದು ಶಿವಮೂರ್ತಿಗಳು ಅಥವಾ ಸಾಧ್ಯವಿಲ್ಲದಿದ್ದರೆ ಮೂರು ಶಿವಮೂರ್ತಿಗಳಲ್ಲಿಯಾದರೂ ಈ ರೀತಿ ಪೂಜೆ ಮಾಡಬೇಕು. ರಾತ್ರಿಯಾಗಲೀ ಹಗಲಾಗಲೀ ಭೈರವನಿಗೆ ಕೊನೆಯಲ್ಲಿ ಪೂಜೆಮಾಡಲೇಬೇಕು. ಉತ್ಸವಸಂದರ್ಭಗಳಲ್ಲಿ ನಿತ್ಯಕ್ಕಿಂತಲೂ ಎರಡರಷ್ಟು ಪೂಜೆಯನ್ನು ಮಾಡಬೇಕು. ಮಾಸ, ನಕ್ಷತ್ರ, ದಕ್ಷಿಣೋತ್ತರಾಯನಗಳು, ಸೂರ್ಯಚಂದ್ರಗ್ರಹಣಪರ್ವಗಳಲ್ಲಿ ವಿಶೇಷವಾಗಿ ತೈಲ ಸ್ನಾನಪೂರ್ವಕ ಪೂಜಾದಿಗಳನ್ನು ನಡೆಸಬೇಕು. ॥೨೨-೨೩॥

ಪಾರ್ವತಿಯೇ, ಪಂಚಾಮೃತಸ್ನಾನ ಮತ್ತು ಅಭ್ಯಂಜನ ಇವೆರಡರಲ್ಲಿ ತೈಲ ಸ್ನಾನವು ನೂರುಪಲವುಳ್ಳದ್ದು. ಅಭ್ಯಂಗವು ಇಪ್ಪತ್ತೈದು ಪಲಗಳುಳ್ಳದು; ಮಹಾ ಸ್ನಾನವು ಎರಡುಸಾವಿರ ಪಲಪ್ರಮಾಣಗಳುಳ್ಳದ್ದೆಂದು ಹೇಳಲ್ಪಟ್ಟಿದೆ. ಚರ ಅಥವಾ

ಪ್ರತಿಷ್ಠಾಸು ಮಹಾಸ್ನಾನಂ ಸ್ಥಿರೇ ಚಾಭ್ಯಂಗಕೇ ಚರೇ ।
ಶಿವಸ್ಯ ಸರ್ಪಿಷಾ ಪ್ರೋಕ್ತಂ ಸ್ನಾನಂ ವಾಪಿ ಸ್ಥಿರೇ ಚರೇ ॥೨೬॥

ತಾವತಾ ಮಧುನಾ ಚೈವ ದಧ್ನಾ ಕ್ಷೀರೇಣ ತಾವತಾ ।
ಸಹಸ್ರಧಾರಾಶತಕೇಸಂಖ್ಯೈರ್ಗೋಶೃಂಗಕೈರ್ಜಲೈಃ ॥೨೭॥

ಪ್ರದೋಷೇ ಸೋಮವಾರೇ ಚ ಚತುರ್ದಶ್ಯಷ್ಟಮೀಷು ಚ ।
ಪೂಜೈವಂ ದ್ವಿಗುಣಾ ಕಾರ್ಯಾ ಶಿವರಾತ್ರ್ಯಾಂ ಚ ಯಾಮಸು ॥೨೮॥

ಷಟ್ತ್ರಿಕಾಲೇಷ್ವೇವಮೇವಂ ಷಟ್ಕಾಲೇ ಕಾಲ ಉಚ್ಯತೇ ।
ಪ್ರಾತಃ ಸಂಗವಮಧ್ಯಾಹ್ನಪ್ರದೋಷೇಽಥ ನಿಶೀಥಕೇ ॥೨೯॥

ಅರುಣೋದಯಕಾಲೇ ಚ ಷಟ್ಕಾಲಂ ಸ್ಥಾವರಾರ್ಚನೇ ।
ಪ್ರಾತರ್ಮಧ್ಯಾಹ್ನಸಾಯಾಹ್ನೇ ಪೂಜಾ ಸ್ಯಾಚ್ಚರಲಿಂಗಕೇ ॥೩೦॥

---

ಸ್ಥಿರಲಿಂಗಗಳ ಅಭ್ಯಂಗದಲ್ಲಿ ಶಿವನಿಗೆ ಪ್ರತಿಷ್ಠಾಕಾಲದಲ್ಲಿ ಈ ಮಹಾಸ್ನಾನವು ಹೇಳಲ್ಪಟ್ಟಿದೆ. ಸ್ಥಿರ ಅಥವಾ ಚರಲಿಂಗಗಳಲ್ಲಿ ಶಿವನಿಗೆ ತುಪ್ಪದಿಂದ ಸ್ನಾನವಿಧಿಯು ಮುಖ್ಯವಾಗಿ ಹೇಳಲ್ಪಟ್ಟಿದೆ. ॥೨೪-೨೫-೨೬॥

ಅಷ್ಟೇ ಪ್ರಮಾಣದ ಜೇನು, ಮೊಸರು ಮತ್ತು ಹಾಲಿನ ಧಾರೆಯಿಂದಲೂ, ಸಹಸ್ರ ಅಥವಾ ನೂರು ಧಾರೆಗಳುಳ್ಳ ಶಂಖ ಅಥವಾ ಹಸುವಿನ ಕೊಂಬಿನಿಂದ ಬರುವ ಧಾರೆಗಳಿಂದಲೂ ಸ್ನಾನಮಾಡಿಸಬೇಕೆಂದು ಹೇಳಿದೆ. ಪ್ರದೋಷ, ಸೋಮವಾರ ಚತುರ್ದಶೀ, ಅಷ್ಟಮಿ ತಿಥಿಗಳಲ್ಲಿ ಈ ಪೂಜೆಯನ್ನು ಇದೇರೀತಿ ಎರಡರಷ್ಟು ಮಾಡಬೇಕು. ಶಿವರಾತ್ರಿಯ ನಾಲ್ಕು ಜಾವಗಳಲ್ಲಿ ಪೂಜೆಯನ್ನು ಎರಡರಷ್ಟು ಪ್ರಮಾಣದಿಂದ ಮಾಡಬೇಕು. ॥೨೭-೨೮॥

ಷಟ್ಕಾಲಾರ್ಚನೆ ಮತ್ತು ತ್ರಿಕಾಲಾರ್ಚನೆಗಳಲ್ಲಿಯೂ ಹೀಗೆಯೇ ಪೂಜೆ ಮಾಡಬೇಕು. ಇನ್ನು ಷಟ್ಕಾಲವೆಂದರೆ ಉಷಃಕಾಲ ಪ್ರಾತಃಕಾಲ, ಸಂಗಮಕಾಲ, ಮಧ್ಯಾಹ್ನಕಾಲ, ಪ್ರದೋಷಕಾಲ, ರಾತ್ರಿ, (ಅರ್ಧರಾತ್ರಿ). ಈ ರೀತಿ ಸ್ಥಾವರಲಿಂಗಾರ್ಚನೆಗೆ ಆರುಕಾಲಗಳು ಹೇಳಲ್ಪಟ್ಟವೆ. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲರೂಪವಾದ ಚರಲಿಂಗಗಳ ಪೂಜಾಕಾಲವು ಮೂರು ರೀತಿಯಾಗಿದೆ. ॥೨೯-೩೦॥

ವರ್ಜಯಿತ್ವಾ ನಿಶೀಥಂ ಚ ಮಾಘಕೃಷ್ಣಾಂ ಚತುರ್ದಶೀಂ ।
ಪ್ರತಿಷ್ಠಾಸು ತ್ರಿಗುಣಿತಂ ಸ್ಥಾವರೇ ಪೂಜನಂ ಭವೇತ್ ॥೩೧॥

ದೇವೇ ಚಾರ್ಷೇ ಸ್ವಯಂಭೂತೇ ಭಾಸ್ಮೇ ಭಗ್ನೇಽಥಸಂಧಿತೇ ।
ಪೂಜಾಂ ಮಾಂಡಲಿಕೀಂ ಕುರ್ಯಾತ್ತ್ರಿಗುಣಂ ಹೋಮತರ್ಪಣಂ॥೩೨॥

ದ್ವಿಜಾನಾಂ ಭೋಜನಂ ಚೈವ ಚತುರ್ಗುಣಿತಮಾಚರೇತ್ ।
ಸ್ಥಾವರೇ ಜಂಗಮೇ ಚೈವ ಏಷ ಸಾಮಾನ್ಯತೋ ವಿಧಿಃ ॥೩೩॥

ಚರೇ ವಾ ಸ್ಥಾವರೇ ವಾಪಿ ಮೂರ್ತೀನಾಂ ಪೂಜನಂ ಭವೇತ್ ।
ಸರ್ವೋಪಚಾರೈರಾರಾಧ್ಯ ಮಧ್ಯೇ ವತ್ಸ ತತೋಽರ್ಚಯೇತ್ ॥೩೪॥

ಪ್ರಥಮೇಽಷ್ಟದಳೇ ಮೂರ್ತೀರ್ಯಜೇತ್ತತ್ಪುರುಷಾದಿಕಾಃ ।
ದಿಕ್ಪತೇಷು ಗಣಶ್ರೇಷ್ಠ ಈಶಂ ಮಧ್ಯೇ ಸಮರ್ಚಯೇತ್ ॥೩೫॥

---

ಮಾಘ ಕೃಷ್ಣ ಚತುರ್ದಶೀತಿಥಿಯ ಅರ್ಧರಾತ್ರಿಯನ್ನು ಬಿಟ್ಟು ಉಳಿದ ದಿನದಲ್ಲಿ ಸ್ಥಾವರಲಿಂಗಗಳಿಗೆ ಸಾಮಾನ್ಯವಾಗಿ ಮೂರು ಕಾಲದಲ್ಲಿಯೇ ಪೂಜೆಯು ನಡೆಯಬೇಕು. ಶಿವಲಿಂಗವು ಆರ್ಷೇಯವಾಗಿ ಬಂದು ಅಥವಾ ಸ್ವಯಮುದ್ಭವವಾಗಿ ಒಡೆದು ಅಥವಾ ಬಿರಿದಿದ್ದರೆ ಮಾಂಡಲಿಕ ಪೂಜೆಯನ್ನೂ ಮೂರರಷ್ಟು ಹೋಮ ಮತ್ತು ತರ್ಪಣಗಳನ್ನು ಮಾಡಿ ಪುನಃ ಸ್ಥಾವರಲಿಂಗ ಪ್ರತಿಷ್ಠಾವಿಧಿಯಂತೆ ಪ್ರತಿಷ್ಠಿಸಬೇಕು. ॥೩೧-೩೨॥

ಆಗ ನಾಲ್ಕರಷ್ಟು ಪ್ರಮಾಣದಲ್ಲಿ ಬ್ರಾಹ್ಮಣರ ಭೋಜನವನ್ನೂ ಮಾಡಿಸಬೇಕು. ಸ್ಥಾವರ ಮತ್ತು ಜಂಗಮಲಿಂಗಗಳಿಗೆ ಇದು ಸಾಮಾನ್ಯವಾದ ವಿಧಿಯಾಗಿರುವುದು. ಚರ ಅಥವಾ ಸ್ಥಾವರಗಳಲ್ಲಿ ಮಾತ್ರ ಮೂರ್ತಿಪೂಜೆಯೇರ್ಪಟ್ಟಿರುವುದು. ಸಕಲ ಉಪಚಾರಗಳಿಂದಲೂ ಪೂಜಿಸಿ, ಶಿವನು ಆ ಮೂರ್ತಿಯ ಮಧ್ಯದಲ್ಲಿರುವಂತೆ ಯಾವಾಗಲೂ ಭಾವಿಸಿ ಅರ್ಚನೆಮಾಡಬೇಕು. ॥೩೩-೩೪॥

ಮೊದಲನೆಯ ಎಂಟು ದಳಪದ್ಮದಲ್ಲಿ ತತ್ಪುರುಷ, ವಾಮದೇವ ಮೊದಲಾದ ಪಂಚಮೂರ್ತಿಗಳನ್ನು ಪೂಜಿಸಬೇಕು. ಎಲೈ ಗಣಶ್ರೇಷ್ಠನೆ, ಇಂದ್ರಾದ್ಯಷ್ಟದಿಕ್ಪಾಲಕರ ಮಧ್ಯದಲ್ಲಿ ಈಶ್ವರನಿರುವಂತೆ ಪೂಜೆಮಾಡಬೇಕು. ಹೊಂಬಣ್ಣ, ಕಪ್ಪು, ಬಿಳುಪು ಮತ್ತು ಕೆಂಪು ಕಾಂತಿಗಳುಳ್ಳ ನಾಲ್ಕುಮುಖಗಳಿಂದಲೂ ವರದ, ಅಭಯ,

ಪೀತಾಸಿತಶ್ವೇತರಕ್ತಾ ಯತ್ರಾಪ್ರಭಾಶ್ಚ ತುರಾನನಾಃ ।
ವರಾಭಯಮೃಗಾಂಶ್ಚೈವ ಪರಶುಂ ಬಿಭ್ರತೀಕರೈಃ ॥೩೬॥

ಕೋಣತ್ರಯೇಷು ಮಧ್ಯೇ ಚ ನಿವೃತ್ತ್ಯಾದ್ಯಾಃ ಕಲಾ ಯಜೇತ್ ।
ನಿವೃತ್ತಿಶ್ಚ ಪ್ರತಿಷ್ಠಾ ಚ ವಿದ್ಯಾ ಶಾಂತಿಸ್ತಥೈವ ಚ ॥೩೭॥

ಶಾಂತ್ಯತೀತಾಃ ಕಲಾಃ ಪ್ರೋಕ್ತಾಸ್ತೇಜೋರೂಪಾಃ ಕ್ರಮಾತ್ತದಾ ।
ಆಗ್ನೇಯ್ಯಾಂ ಪೂರ್ವವಾಯವ್ಯಮಧ್ಯೇ ದಿಕ್ಷು ಚ ಪೂಜಯೇತ್ ॥೩೮॥

ಕೇಸರೇಷು ಷಡಂಗಾನಿ ದ್ವಿತೀಯೇಽಷ್ಟದಳೇ ಪುನಃ ।
ಅನೇನಾದ್ಯಂತಮನುನಾ ಯಜೇದ್ದೇವಾನ್ಪ್ರದಕ್ಷಿಣಂ ॥೩೯॥

ಅನಂತಸೂಕ್ಷ್ಮನಾಮಾನಂ ಶಿವೋತ್ತಮಮನಂತರಂ ।
ಏಕನೇತ್ರಂ ಚತುರ್ಬಾಹುಂ ತ್ರಿಮೂರ್ತಿಂ ತದನಂತರಂ ॥೪೦॥

ಶಿತಿಕಂಠಂ ಗಣಶ್ರೇಷ್ಠಂ ಶಿಖಂಡಿನಮಿತಿ ಕ್ರಮಾತ್ ।
ಶ್ವೇತಪೀತಾಸಿತಾರಕ್ತಕೃಷ್ಣಧೂಸರಸಾಂಜನಾಃ ॥೪೧॥

---

ಜಿಂಕೆ ಮತ್ತು ಕೊಡಲಿಯನ್ನು ಕ್ರಮವಾಗಿ ಹೊಂದಿರುವ ನಾಲ್ಕುತೋಳ್ಗಳಿಂದಲೂ ಕೂಡಿರುವ ಮಹಾದೇವನನ್ನು ಧ್ಯಾನಿಸಿ ಪೂಜೆಮಾಡಬೇಕು. ॥೩೪-೩೬॥

ಮೂರು ಕೋಣಗಳಲ್ಲಿಯೂ ಮತ್ತು ಮಧ್ಯದಲ್ಲಿಯೂ ನಿವೃತ್ತಿ, ಪ್ರತಿಷ್ಠಾ, ವಿದ್ಯಾ ಮತ್ತು ಶಾಂತಿ ಮತ್ತು ಶಾಂತ್ಯತೀತರೂಪವಾದ ಕಲೆಗಳನ್ನು ಪೂಜಿಸಬೇಕು. ಈ ಶಿವಪೀಠ ಮತ್ತು ಶಿವದೇಹದಲ್ಲಿ ಕಂಡುಬರುವ ಕಲೆಗಳು ತೇಜೋರೂಪ ಗಳೆಂದು ಹೇಳಲ್ಪಟ್ಟವೆ. ಅವುಗಳನ್ನು ಕ್ರಮವಾಗಿ ಆಗ್ನೇಯ, ಪೂರ್ವ, ವಾಯವ್ಯ ಮತ್ತು ಇತರ ಮಧ್ಯದಿಕ್ಕುಗಳಲ್ಲಿ ಪೂಜೆಮಾಡಬೇಕು. ॥೩೭-೩೮॥

ಅಷ್ಟದಳ ಪದ್ಮದ ಕೇಸರಗಳಲ್ಲಿ ಷಡಂಗಗಳನ್ನೂ ನ್ಯಾಸಮಾಡಿ ಅರ್ಚನೆ ಮಾಡಬೇಕು. ಎರಡನೆಯ ಅಷ್ಟದಳಪದ್ಮದಲ್ಲಿ ಪುನಃ ಇದೇ ಆದ್ಯಂತ ಮಂತ್ರ ಗಳಿಂದ ದೇವನಿಗೆ ಪ್ರದಕ್ಷಿಣೆಮಾಡಬೇಕು. ಅಪರಿಮಿತವಾದ ಸೂಕ್ಷ್ಮನಾಮಗಳುಳ್ಳ ವನೂ, ಮಂಗಳಪ್ರದವಾದ ಗುಣದಲ್ಲಿ ಶಿವೋತ್ತಮನೂ, ಒಂದು ಕಣ್ಣುಳ್ಳವನೂ, ನಾಲ್ಕು ತೋಳ್ಗಳುಳ್ಳವನೂ, ಮೂರು ಮೂರ್ತಿಗಳುಳ್ಳವನೂ ಎನಿಸಿಕೊಂಡಿರುವ

ಕಿರೀಟಾರ್ಪಿತಬಾಲೇಂದೂನ್ಪದ್ಮಸ್ಥಾನ್ನಾಗಭೂಷಣಾನ್ ।
ತ್ರಿನೇತ್ರಾಂಛೂಲವಜ್ರೇಷು ಚಾಪಹಸ್ತಾನ್ಮನೋಹರಾನ್ ॥೪೨॥

ತತೋಽರ್ಚಯೇದ್ಗಣಶ್ರೇಷ್ಠ ತೃತೀಯೇಽಷ್ಟದಳೇ ಪುನಃ ।
ಉಮಾಚಂಡೇಶ್ವರಂ ನಂದಿಂ ಮಹಾಕಾಲಂ ಗಣೇಶ್ವರಂ ॥೪೩॥

ವೃಷಭಂ ಭೃಂಗಿಂ ಚ ರಿಟಿಮಿತ್ಯಹಂತಾನ್ಯಥಾಕ್ರಮಂ ।
ಉತ್ತರಂ ದಳಮಾರಭ್ಯ ಪೀತನೀಲಾರುಣಾಸಿತಾನ್ ॥೪೪॥

ಉಕ್ತಾನಿ ವರ್ಣತಃ ಶ್ವೇತಪಾಟಲಾನ್ಕ್ರಮತಃ ಸುಧೀಃ ।
ಚತುರಶ್ರೇ ಗಣಶ್ರೇಷ್ಠ ಪೂರ್ವಾದಿಕ್ರಮತೋ ಯಜೇತ್ ॥೪೫॥

ಇಂದ್ರಂ ಸುರಾಧಿಪಂ ಪೀತಂ ವಜ್ರಹಸ್ತಂ ಸವಾಹನಂ ।
ಅಗ್ನಿಂ ತೇಜೋಽಧಿಪಂ ರಕ್ತಂ ಶಕ್ತಿಹಸ್ತಂ ಸುಭೂಷಿತಂ ॥೪೬॥

---

ಶಿತಿಕಂಠ, ಗಣಶ್ರೇಷ್ಠ, ಶಿಖಂಡೀ ಈ ರೀತಿ ಕ್ರಮವಾಗಿ ದೇವತೆಗಳನ್ನು ಪೂಜಿಸ ಬೇಕು. ಬಿಳುಪು, ಹೊಂಬಣ್ಣ, ಕಪ್ಪು, ಕೆಂಪು, ಧೂಸರ, ಅಂಜನವರ್ಣ ಈ ರೀತಿ ಯಾಗಿ ಮೂರ್ತಿಗಳ ಬಣ್ಣಗಳನ್ನು ಅರಿಯಬೇಕು. ॥೩೯-೪೦-೪೧॥

ಬಾಲಚಂದ್ರನನ್ನು ಕಿರೀಟದಲ್ಲಿ ಪಡೆದಿರುವವರೂ, ಪದ್ಮಾಸನಾಸೀನರೂ, ಸರ್ಪಾಭರಣರೂ, ಸೋಮಸೂರ್ಯಾಗ್ನಿಲೋಚನರೂ, ಶೂಲ, ವಜ್ರಾಯುಧ, ಧನುಸ್ಸುಗಳನ್ನು ಮನೋಹರವಾದ ಕೈಗಳಲ್ಲಿ ಧರಿಸಿರುವವರೂ ಆದ ಶಿವಮೂರ್ತಿ ಗಳನ್ನು ಪೂಜೆಮಾಡಬೇಕು. ಅಯ್ಯಾ ಗಣಶ್ರೇಷ್ಠನೆ, ಮೂರನೆಯ ಅಷ್ಟದಳ ಪದ್ಮದಲ್ಲಿ ಪುನಃ ಈ ರೀತಿ ಪೂಜೆಮಾಡಬೇಕು. ॥೪೨॥

ಉಮಾ, ಚಂಡೀಶ್ವರ, ನಂದಿ, ಮಹಾಕಾಲ, ಗಣೇಶ, ವೃಷಭ, ಭೃಂಗ, ರಿಟಿ ಎಂಬುದಾಗಿ ಶಿವಗಣನಾಯಕರನ್ನು ಕ್ರಮವಾಗಿ ಉತ್ತರ ದಳದಿಂದ ಮೊದಲು ಮಾಡಿಕೊಂಡು ಹೊಂಬಣ್ಣ, ಕಪ್ಪು, ಕೆಂಪು, ಬಿಳುಪು ಮತ್ತು ಪಾಟಲವರ್ಣಗಳನ್ನು ಅವುಗಳಲ್ಲಿ ಭಾವಿಸುತ್ತಾ ಆವಾಹಿಸಬೇಕು. ಪೂರ್ವದಿಕ್ಕಿನಿಂದ ಮೊದಲಾಗಿ ಕ್ರಮ ದಿಂದ ಅವರನ್ನು ಪೂಜೆಮಾಡಬೇಕು. ॥೪೩-೪೪-೪೫॥

ದೇವತೋತ್ತಮನೂ, ಹೊಂಬಣ್ಣವುಳ್ಳವನೂ, ವಜ್ರಾಯುಧಪಾಣಿಯೂ, ವಾಹನಸಮೇತನೂ ಆದ ಇಂದ್ರನನ್ನು ಮೊದಲು ಪೂಜೆಮಾಡಬೇಕು. ಅನಂತರ

ಯಮಂ ಪ್ರೇತಾಧಿಪಂ ಕೃಷ್ಣಂ ದಂಡಹಸ್ತಂ ಸಮರ್ಚಯೇತ್ ।
ರಕ್ಷೋಽಧಿಪಂ ಚ ನಿಋಋತಿಂ ಖಡ್ಗಹಸ್ತಂ ಬಲೋನ್ನತಂ ॥೪೭॥

ಪಾಶಹಸ್ತಂ ಸುಶುಭ್ರಾಂಗಂ ವರುಣಂ ಯಾದಸಾಂಪತಿಂ ।
ವಾಯುಂ ಪ್ರಾಣಾಧಿಪಂ ಧೂಮ್ರಂ ಅಂಕುಶಾಢ್ಯಕರಂ ಯಜೇತ್ ॥೪೯॥

ನಾಗಾಧಿಪಂ ತಥಾನಂತಂ ಗೌರಂ ಚ ಶ್ರೀಗಲಂ ಯಜೇತ್ ।
ಲೋಕಾಧಿಪಂ ವಿಧಾತಾರಂ ರಕ್ತಂ ಪದ್ಮಾಸನಂ ಯಜೇತ್ ॥೫೦॥

ಅಂಕುಶಂ ರಕ್ತವರ್ಣಂ ಚ ಶುಕ್ಲವರ್ಣಾಂ ಗದಾಂ ಯಜೇತ್ ।
ತ್ರಿಶೂಲಂ ನೀಲವರ್ಣಂ ಚ ಯಜೇದಗ್ರೇ ಸಮಾಹಿತಃ ॥೫೧॥

ರಥಾಂಗಂ ಕುರುವಿಂದಾಭಂ ಪದ್ಮಂ ರಕ್ತಂ ಸಮರ್ಚಯೇತ್ ।
ಲೋಕಪಾಲಾಯುಧಾನ್ಯೇವಂ ಕಥಿತಾನಿ ತವಾನಘ ॥೫೨॥

---

ತೇಜಸ್ಸಿಗೆ ಅಧಿಪತಿಯೂ, ಕೆಂಪುಬಣ್ಣವುಳ್ಳವನೂ, ಶಕ್ತ್ಯಾಯುಧಪಾಣಿಯೂ, ಚೆನ್ನಾಗಿ ಅಲಂಕೃತನೂ ಆದ ಅಗ್ನಿಯನ್ನು ಪೂಜಿಸಬೇಕು- ಪ್ರೇತರಾಜನೂ, ಕಪ್ಪು ವರ್ಣವಿಶಿಷ್ಟನೂ ದಂಡಾಯುಧಪಾಣಿಯೂ, ಆದ ಯಮನನ್ನು ಪೂಜಿಸಬೇಕು. ರಾಕ್ಷಸರ ಅಧಿಪನೂ, ಖಡ್ಗಹಸ್ತನೂ, ಬಲದಿಂದ ಕೊಬ್ಬಿದವನೂ ಆದ ನಿಋಋತಿಯನ್ನು ಪೂಜಿಸಬೇಕು. ॥೪೬-೪೭॥

ಪಾಶಾಯುಧಪಾಣಿಯೂ, ಅತ್ಯಂತ ಶುಭ್ರವಾದ ಅವಯವವುಳ್ಳವನೂ, ಜಲಾಧಿಪತಿಯೂ ಆದ ವರುಣನನ್ನು ಪೂಜಿಸಬೇಕು. ಪ್ರಾಣಾಧಿಪನೂ, ಧೂಸರ ವರ್ಣವುಳ್ಳವನೂ, ಅಂಕುಶಯುಕ್ತವಾದ ಕೈಯುಳ್ಳವನೂ ಆದ ವಾಯುವನ್ನು ಪೂಜಿಸಬೇಕು. ನಾಗಗಳಿಗೆ ಅಧಿಪತಿಯೂ, ಬಿಳಿಯ ಬಣ್ಣವುಳ್ಳವನೂ, ಶ್ರೀಕಂಠನೂ ಆದ ಅನಂತನನ್ನು ಪೂಜಿಸಬೇಕು. ಲೋಕಗಳಿಗೆ ಒಡೆಯನೂ, ವಿಧಾತೃವೂ, ಕೆಂಪುಬಣ್ಣವುಳ್ಳವನೂ, ಪದ್ಮಾಸನದಲ್ಲಿರುವವನೂ ಆದ ಲೋಕನಾಥನನ್ನು ಪೂಜಿಸಬೇಕು. ॥೪೯-೫೦॥

ಕೆಂಪುಬಣ್ಣದ ಅಂಕುಶ, ಬಿಳಿಯ ಬಣ್ಣದ ತ್ರಿಶೂಲ, ಮುಂದುಗಡೆ ಗೊರವಂಟಬಣ್ಣದ ಚಕ್ರ, ಕೆಂದಾವರೆ ಇವುಗಳನ್ನು ಪೂಜಿಸಬೇಕು. ಪ್ರತಿಷ್ಠಾಕಾಲದಲ್ಲಿ ಈ ರೀತಿ ಸಕಲ ಲೋಕಪಾಲಕರ ಆಯುಧಗಳೆಲ್ಲವನ್ನೂ ಪೂಜಿಸಬೇಕು. ಅಯ್ಯ

ಯ ಏವಂ ಪೂಜಯೇದ್ದೇವಂ ಸ ಸದ್ಯಃ ಶಿವತಾಂ ವ್ರಜೇತ್ ।
ಯದ್ಯಶಕ್ತಶ್ಚರೇ ವಾಪಿ ಸ್ಥಾವರೇ ವಾ ಗಣೇಶ್ವರಂ ॥೫೩॥

ಕೇವಲಂ ಪಂಚಮನುಭಿಃ ಪಾದ್ಯಾರ್ಘ್ಯಾಚಮನೀಯಕಂ ।
ಮೂಲೇನ ತ್ರ್ಯಂಬಕೇಣಾಪಿ ಶಿವಮಾವಾಹ್ಯ ಪೂಜಯೇತ್ ॥೫೪॥

ಶತಾಷ್ಟೋತ್ತರಸಂಖ್ಯಾಕಂ ಜಪೇತ್ತತ್ರ ಷಡಕ್ಷರಂ ।
ಭವಾಯೇತಿ ತಥಾಷ್ಟೌ ಚ ನಾಮಭಿಃ ಪೂಜಯೇತ್ತತಃ ॥೫೫॥

ಮೂಲೇನ ಧೂಪದೀಪಾದಿನೈವೇದ್ಯಾಂತವಿಸರ್ಜನಂ ।
ಸ್ತ್ರೀಶೂದ್ರಾಣಾಂ ನಮೋಂತೇನ ಪೂಜನಂ ಪರಿಕೀರ್ತಿತಂ ॥೫೬॥

ಪ್ರಣವಾದ್ಯಂತವರ್ಣೇನ ಯತಿಃ ಪಂಚಾಕ್ಷರೇಣ ಹಿ ।
ಪೂಜಯೇಲ್ಲಿಂಗಮೀಶಾನಮನ್ಯೇಷಾಂ ಚ ಯಥಾವಿಧಿ ॥೫೭॥

---

ನಂದಿಯೆ, ಈ ರೀತಿ ಮಹಾದೇವನನ್ನು ಪೂಜೆಮಾಡುವವನು ಕೂಡಲೇ ಶಿವಸಾರೂಪ್ಯವನ್ನೈದುವನು. ॥೫೧-೫೨॥

ಚರ ಅಥವಾ ಸ್ಥಿರಲಿಂಗಗಳಲ್ಲಿ ಈ ರೀತಿ ಪೂಜಿಸಲು ಅಶಕ್ತನಾದವನು ಕೇವಲ ಪಂಚಾಕ್ಷರಮಂತ್ರಗಳಿಂದಲೇ ಪಾದ್ಯ, ಅರ್ಘ್ಯ, ಆಚಮನೀಯಗಳನ್ನು ಸಮರ್ಪಿಸಿ, ಮೂಲಮಂತ್ರದಿಂದಲಾಗಲೀ ಅಥವಾ ತ್ರ್ಯಂಬಕಂ ಯಜಾಮಹೇ ಎಂಬ ಮಂತ್ರದಿಂದಲಾಗಲೀ ಶಿವನನ್ನು ಆವಾಹನೆಮಾಡಿ ಮನಸಾ ಪೂಜಿಸಬೇಕು. ಅನಂತರ ನೂರೆಂಟು ಬಾರಿ ಆ ಷಡಕ್ಷರಮಂತ್ರವನ್ನು ಜಪಮಾಡಬೇಕು. 'ಭವಾಯ ದೇವಾಯ ನಮಃ' ಎಂಬುದಾಗಿರುವ ಮಹೇಶ್ವರನ ಎಂಟು ವಿಧವಾದ ನಾಮಧ್ಯಾನಗಳಿಂದ ಪೂಜೆ ಮಾಡಬೇಕು. ॥೫೩-೫೪-೫೫॥

ಮೂಲಮಂತ್ರದಿಂದಲೇ ಧೂಪ, ದೀಪ, ನೈವೇದ್ಯಗಳ ಸಮರ್ಪಣೆ ಆದ ನಂತರ ಕೊನೆಯಲ್ಲಿ ವಿಸರ್ಜನೆ ಮಾಡಬೇಕು. ಸ್ತ್ರೀ ಮತ್ತು ಶೂದ್ರರಿಗೆ ನಮಶ್ಶಬ್ದಾಂತವಾಗಿರುವ ಪಂಚಾಕ್ಷರಮಂತ್ರದಿಂದಲೇ ಪೂಜೆಯು ಹೇಳಲ್ಪಟ್ಟಿವೆ. ಸಂನ್ಯಾಸಿಯು ಆದ್ಯಂತದಲ್ಲಿ ಓಂಕಾರಗಳನ್ನುಳ್ಳ ಪಂಚಾಕ್ಷರಮಂತ್ರದಿಂದ ಈಶ್ವರನ

ನಾಸ್ತಿ ಲಿಂಗಾರ್ಚನಸಮಂ ತಪಸ್ತ್ರಿಭುವನೇಶ್ವರಿ ।
ಯದ್ಯಾಚರತ್ಯೇವಮೇವಮಾಪ್ರಾಣಾಂತಂ ಗಣೋತ್ತಮ ॥೫೮॥

ಸ ಏವ ರುದ್ರಗಣಪಃ ಸ ಭಕ್ತಃ ಸ ಚ ಶಾಂಭವಃ ।
ತದೇಕಸ್ಮಿನ್ದಿನೇ ತ್ಯಕ್ತ್ವಾ ಪಂಚಾಬ್ದಂ ನರಕಂ ವ್ರಜೇತ್ ॥೫೯॥

॥ ಸ್ಕಂದ ಉವಾಚ ॥

ಏವಂ ಸ್ಥಿರಾಚರಮಯೇ ಪರಮೇಶಲಿಂಗೇ
ಸಂಪೂಜಯೇದ್ಭುವಿ ಮುನೇ ವರಭೋಗಭಕ್ತ್ಯಾ ।
ಪಾರತ್ರಿಕಾಂ ಸ ಚ ಗತಿಂ ಲಭತೇಽನುರೂಪಾಂ
ಮುಕ್ತೋಽಥಭಕ್ತಿಪರಮೋ ಮಯಿ ಸತ್ಯಮೇವ ॥೬೦॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಸ್ಥಾವರಲಿಂಗಪೂಜಾ ವಿಸ್ತಾರಕಥನಂ
ನಾಮ ಪಂಚಚತ್ವಾರಿಂಶೋಽಧ್ಯಾಯಃ

---

ಶಿವಲಿಂಗವನ್ನು ಪೂಜೆಮಾಡಬೇಕು. ಇತರರಿಗೆ ಮಾತ್ರ ಹಿಂದೆ ಹೇಳಿದ ವಿಧಿಗನು ಸಾರವಾಗಿ ಪೂಜೆಯು ಹೇಳಲ್ಪಟ್ಟಿದೆ. ॥೫೬-೫೭॥

ದೇವಿಯೇ ಕೇಳು. ಮೂರು ಲೋಕಗಳಲ್ಲಿ ಹುಡುಕಿದರೂ ಶಿವಲಿಂಗ ಪೂಜೆಗೆ ಸಮಾನವಾದ ಕರ್ಮವು ಬೇರೊಂದಿಲ್ಲವೆಂದೇ ತಿಳಿ; ಅಯ್ಯ ಗಣೋತ್ತ ಮನೆ, ಹೀಗೆಯೇ ಪ್ರಾಣತ್ಯಾಗಪರ್ಯಂತವೂ ಆಚರಿಸಿದರೆ ಅವನೇ ರುದ್ರಗಣಗಳಿಗೆ ಒಡೆಯನಾಗುವನು. ಅವನೇ ನನ್ನ ಭಕ್ತನು ಮತ್ತು ಶಾಂಭವನು; ಈ ಶಿವಲಿಂಗ ಪೂಜೆಯನ್ನು ಒಂದು ದಿನ ಬಿಟ್ಟರೂ ಐದು ವರ್ಷಗಳ ಕಾಲನರಕವಾಸ ದೊರೆಯು ವುದು. ಇದನ್ನು ನಿತ್ಯವ್ರತದಂತೆ ಭಾವಿಸಿ ಅನುಷ್ಠಾನಮಾಡಬೇಕು, ಎಂದು ಪರಮೇಶ್ವರನು ದೇವಿಗೆ ಹೇಳಿದನು. ॥೫೮-೫೯॥

ಅಯ್ಯ ಮುನಿಯೆ, ಹೀಗೆ ಚರಾಚರವಾದ ಪರಮೇಶ್ವರ ಲಿಂಗವನ್ನು ಭೂಮಿ ಯಲ್ಲಿ ಶ್ರೇಷ್ಠವಾದ ಭೋಗ ಮತ್ತು ಭಕ್ತಿಯಿಂದ ಪೂಜೆಮಾಡಿದರೆ ಅವನು ಅನು ರೂಪವಾದ ಪರಮಗತಿಯನ್ನು ಪಡೆದು ಕೊನೆಗೆ ಮುಕ್ತನಾಗಿ ಭಕ್ತಿಪರಮನೆನಿಸಿ ಕೇವಲ ಸುಖಸ್ವರೂಪನಾದ ನನ್ನಲ್ಲಿ ಐಕ್ಯನಾಗುವುದರಲ್ಲಿ ಸತ್ಯವಾಗಿಯೂ ಸಂದೇ

ಹವೇ ಇಲ್ಲ, ಎಂದು ಶಿವನು ದೇವಿಗೆ ಹೇಳಿದ್ದನ್ನು ಸ್ಕಂದನು ಜೈಗೀಷವ್ಯನಿಗೆ ನಿರೂಪಣೆಮಾಡಿದನು. ||೬೦||

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ಸ್ಥಾವರಲಿಂಗಪೂಜೆಯ ವಿಸ್ತಾರವಾದ ಹೇಳಿಕೆಯೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

### ದಶಮಾಂಶೇ ಪೂರ್ವಾರ್ಧೇ

## ಅಥ ಷಟ್ಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ನಿತ್ಯನೈಮಿತ್ತಿಕೇ ಫಲಂ ।
ಕಾಲಂ ಲಿಂಗವಿಶೇಷಂ ಚ ಬ್ರಹ್ಮಕ್ಷತ್ರವಿಶಾಂ ತಥಾ ॥೧॥

ಆಶ್ರಮಾಣಾಂ ಚ ಸರ್ವೇಷಾಮೇಷ ಲಿಂಗಾರ್ಚನೇ ವಿಧಿಃ ।
ನಿತ್ಯಲಿಂಗಾರ್ಚನೇ ಶಸ್ತಂ ಧಾತುಸ್ಫಾಟಿಕಸಂಭವಂ ॥೨॥

ಬಾಣಲಿಂಗಂ ಮಾರಕತಂ ರಸೇಂದ್ರಕಕೃತಂ ಶಿವೇ ।
ಪಾರ್ಥಿವಂ ಕಾಮುದಂ ಜ್ಞೇಯಂ ಸರ್ವಕರ್ಮಸು ಶೋಭನೇ ॥೩॥

---

## ನಲವತ್ತಾರನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೆ, ಇನ್ನು ಮುಂದೆ ನಿತ್ಯನೈಮಿತ್ತಿಕರೂಪವಾದ ಶಿವಲಿಂಗಗಳ ಪೂಜೆ, ಫಲ, ಕಾಲ ಮತ್ತು ಲಿಂಗವಿಶೇಷಗಳನ್ನು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರ ಜಾತ್ಯನುಗುಣವಾಗಿ ಹೇಳುವೆನು. ಎಲ್ಲಾ ಆಶ್ರಮಗಳಿಗೂ ಎಲ್ಲ ಜಾತಿಯ ವರಿಗೂ ಶಿವಲಿಂಗಪೂಜೆಯಲ್ಲಿ ಒಂದು ರೀತಿಯ ವಿಧಿಯು ಹೇಳಲ್ಪಟ್ಟಿದೆ. ಅದರಲ್ಲಿ ಧಾತು ಮತ್ತು ಸ್ಫಟಿಕಗಳಿಂದ ಮಾಡಿದ ಶಿವಲಿಂಗವು ನಿತ್ಯಲಿಂಗಪೂಜೆಯಲ್ಲಿ ಪ್ರಶಸ್ತ ವೆನಿಸಿದೆ. ಇದೇ ವಿಚಾರವಾಗಿ ಪಾರ್ವತಿಗೆ ಪರಶಿವನು ಹೇಳಿದ್ದನ್ನು ಹೇಳುವೆನು ಕೇಳು. ॥೧-೨॥

ದೇವಿಯೇ ಕೇಳು, ಬಾಣಲಿಂಗ, ಮರಕತದಲಿಂಗ, ಪಾದರಸದಿಂದ ಮಾಡಿದ ಶಿವಲಿಂಗಗಳು, ಇವು ಪೂಜೆಗೆ ಅತ್ಯಂತ ಶ್ರೇಷ್ಠವಾದುವು. ಮಂಗಳಾಂಗಿಯೇ, ಎಲ್ಲ

ನ ಯಸ್ಯ ಶಿವಲಿಂಗಾರ್ಚಾ ಗೃಹೇ ಭವತಿ ಶಂಕರಿ ।
ಸ ನಿತ್ಯಸೂತಕೀ ಜ್ಞೇಯೋ ಬ್ರಾಹ್ಮಣೋ ವಾಂತ್ಯಜೋಽಪಿ ವಾ ॥೪॥

ಬಾಣಲಿಂಗಂ ನ ಯಸ್ಯಾಸ್ತಿ ಗೃಹೇ ಬಿಲ್ವಾದಿಪೂಜಿತಂ ।
ತದ್ಗೃಹೇ ಜಲಮಲ್ಪಂ ವಾ ನ ಪೇಯಂ ಸರ್ವದಾ ಬುಧೈಃ ॥೫॥

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ವಾ ।
ಯೇಽರ್ಚಯಂತ್ಯೇವ ನಿಯತಂ ಮಮ ಲಿಂಗಂ ಮಹೇಶ್ವರಿ ॥೬॥

ತೇ ವೈ ಗಣೇಂದ್ರಾ ವಿಜ್ಞೇಯಾಃ ಮಮ ತೋಷಪ್ರದಾಃ ಶಿವೇ ।
ಪ್ರದೋಷೇಷು ವಿಶೇಷೇಣ ಯಃ ಪೂಜಯತಿ ಶಂಕರಂ ॥೭॥

ಸ ಮಹಾಪಾತಕೈರ್ಮುಕ್ತೋ ಭವಿಷ್ಯತಿ ನ ಸಂಶಯಃ ।
ಋಣದಾರಿದ್ರ್ಯನಾಶಾಯ ಪ್ರದೋಷೇ ಪೂಜಯೇಚ್ಛಿವಂ ॥೮॥

---

ಕರ್ಮಗಳಲ್ಲಿಯೂ ಪಾರ್ಥಿವಲಿಂಗವು ಇಷ್ಟಾರ್ಥಪ್ರದವೆನಿಸಿರುವುದು. ಶಂಕರಿ, ಯಾರ ಮನೆಯಲ್ಲಿ ಶಿವಲಿಂಗಪೂಜೆಯಿಲ್ಲವೋ ಅವನು ಬ್ರಾಹ್ಮಣನಾಗಲೀ, ಅಂತ್ಯಜನೇ ಆಗಲೀ, ನಿತ್ಯಸೂತಕವುಳ್ಳವನೆಂದು ತಿಳಿಯಬೇಕು. ಬಿಲ್ವಾದಿಗಳಿಂದ ಪೂಜಿಸಲ್ಪಟ್ಟ ಬಾಣಲಿಂಗವಿಲ್ಲದವನ ಮನೆಯಲ್ಲಿ ಯಾವಾಗಲೂ ವಿವೇಕಿಗಳಾದವರು ಕೊಂಚವಾದರೂ ನೀರನ್ನು ಕೂಡ ಕುಡಿಯಬಾರದು. ||೩-೪-೫||

ಮಹೇಶ್ವರಿಯೇ ಕೇಳು, ಪ್ರತಿದಿನವೂ ಒಂದು, ಎರಡು ಮತ್ತು ಮೂರು ಕಾಲಗಳಲ್ಲಿ ಅಥವಾ ನಿತ್ಯವೂ ಒಂದೇಸಾರಿಯಾದರೂ ನಿಯಮದಿಂದ ನನ್ನ ಲಿಂಗವನ್ನು ಪೂಜೆಮಾಡುವವರೇ ಗಣೇಂದ್ರರೆನಿಸುವರು. ದೇವಿ, ಅವರೇ ನನಗೆ ಸಂತೋಷಪ್ರದರೆಂದು ತಿಳಿ. ಪ್ರದೋಷಕಾಲಗಳಲ್ಲಿ ವಿಶೇಷವಾಗಿ ಶಂಕರನನ್ನು ಪೂಜೆಮಾಡುವವನು ಸಕಲ ಮಹಾಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂಶಯವೇ ಇಲ್ಲ. ||೬-೭||

ಸಾಲ ಮತ್ತು ಬಡತನವನ್ನು ಕಳೆದುಕೊಳ್ಳಲು ಇಷ್ಟಪಡುವ ಮಾನವನು ಪ್ರದೋಷವೇಳೆಯಲ್ಲಿ ಶಿವನನ್ನು ಪೂಜೆಮಾಡಬೇಕು. ಹತ್ತುಪಲಪ್ರಮಾಣದಿಂದ ಘೃತಾಭಿಷೇಕವನ್ನು ಶಿವನಿಗೆ ಮಾಡಬೇಕು. ನೈಧಿಲೆ .ಬಿಲ್ವದಳ ಇವುಗಳಿಂದ

ಘೃತಾಭಿಷೇಕಂ ಕುರ್ವೀತ ಕುರ್ಯಾತ್ಪಲದಶೇನ ವೈ ।
ಉತ್ಪಲೈರ್ಬಿಲ್ವಪತ್ರೈಶ್ಚ ಪೂಜನೀಯೋ ಮಹೇಶ್ವರಃ ॥೯॥

ಸೋಮವಾರೇಽರ್ಚನಂ ಶಂಭೋರ್ನಕ್ತೃಮಾಯುಷ್ಯವರ್ಧನಂ ।
ಕ್ಷೀರೇಣ ಸ್ನಾಪಯೇದ್ದೇವಂ ಗವಾಂ ಕಾಪಿ ಜಲೇನ ವಾ ॥೧೦॥

ಕಮಲೈರ್ಬಿಲ್ವಪತ್ರೈಶ್ಚ ಪೂಜನೀಯೋ ಭವೋ ಮುನೇ ।
ಚತುರ್ದಶ್ಯಾಂ ನಿಶೀಥಿನ್ಯಾಮಪಾಮಾರ್ಗೈಶ್ಚ ಬಿಲ್ವಕೈಃ ॥೧೧॥

ಪೂಜಯೇಲ್ಲಿಂಗಮೇಕಾಗ್ರೋ ದಧ್ನಾ ಸಂಸ್ನಾಪಯೇಚ್ಛುಚಿ ।
ಕಾಲಾಷ್ಟಮ್ಯಾಂ ಕಾಲಕಾಲಮರ್ಚಯೇನ್ನಿಯತವ್ರತಃ ॥೧೨॥

ಮಧುನಾ ಸ್ನಾಪ್ಯ ದೇವೇಶಂ ಬಿಲ್ವಪತ್ರೈಃ ಪ್ರಪೂಜಯೇತ್ ।
ಬೋಧಾಯನೋಕ್ತವಿಧಿನಾ ಸರ್ವಂ ನಕ್ತವ್ರತಂ ಶಿವೇ ॥೧೩॥

ತತ್ರಾವಾಹನಪೂಜಾಂ ಚ ಪ್ರವಕ್ಷ್ಯಾಮಿ ಶಿವೇ ತವ ।
ಯಥಾಭಿರುಚಿತೇ ಲಿಂಗೇ ಧಾತುಜೇ ಸ್ಫಾಟಿಕೇಽಪಿವಾ ॥೧೪॥

---

ಮಹೇಶ್ವರನನ್ನು ಪೂಜೆಮಾಡಬೇಕು. ಸೋಮವಾರ ಸಾಯಂಕಾಲ ಮಾಡುವ ಶಂಭುವಿನ ಪೂಜೆಯು ಆಯುಷ್ಯವನ್ನು ಹೆಚ್ಚಿಸುವುದು. ಹಸುವಿನ ಹಾಲು ಮತ್ತು ಶುದ್ಧವಾದ ನೀರಿನಿಂದಲಾಗಲೀ ದೇವನಿಗೆ ಅಭಿಷೇಕಮಾಡಬೇಕು. ಅಯ್ಯ ಜೈಗೀಷವ್ಯ ಮುನಿಯೆ,ತಾವರೆ ಮತ್ತುಬಿಲ್ವದಳಗಳಿಂದ ಶಿವನಿಗೆ ಪೂಜೆಮಾಡಬೇಕು.॥೮-೯-೧೦॥

ಚತುರ್ದಶೀ ದಿನ ರಾತ್ರಿ ಉತ್ತರಣೆ ಮತ್ತು ಬಿಲ್ವದಳಗಳಿಂದ ಶಿವಲಿಂಗಕ್ಕೆ ಪೂಜೆಮಾಡಬೇಕು. ಏಕಾಗ್ರಚಿತ್ತನಾಗಿ ಶುಚೀಭೂತನಾಗಿ ಮೊಸರಿನಿಂದ ಅಭಿಷೇಕಮಾಡಬೇಕು. ಕೃಷ್ಣಾಷ್ಟಮಿಯ ದಿನ ಯಮಾಂತಕನನ್ನು ನಿಯಮಬದ್ಧನಾಗಿ ಪೂಜೆಮಾಡಿ ಆ ದಿನ ದೇವತೋತ್ತಮನಿಗೆ ಜೇನುತುಪ್ಪದಿಂದ ಅಭಿಷೇಕ ಮಾಡಿ ಬಿಲ್ವದಳಗಳಿಂದ ಅರ್ಚನೆ ಮಾಡಬೇಕು. ಬೋಧಾಯನ ಮಹರ್ಷಿಗಳು ಹೇಳಿದ ವಿಧಿಗನುಸಾರವಾಗಿ ಎಲ್ಲಾ ರಾತ್ರಿವ್ರತಗಳಲ್ಲಿಯೂ ಮಾಡುವ ಆವಾಹನೆ, ಪೂಜೆ ಇವುಗಳ ವಿಚಾರವಾಗಿ ನಿನಗೆ ಹೇಳುವೆನು ಕೇಳು. ॥೧೧-೧೨-೧೩॥

ಧಾತುಜನ್ಯವಾದ ಅಥವಾ ಸ್ಫಟಿಕ, ಬಾಣ, ಪಾದರಸ ಮತ್ತು ಮರಕತಗಳಿಂದ ರಚಿತವಾದ ಲಿಂಗಗಳಲ್ಲಿ ತನಗೆ ಇಷ್ಟವಾದ ಲಿಂಗವನ್ನು ಆರಿಸಿಕೊಂಡು ನೆಲವನ್ನು

ಬಾಣೇ ರಸೇಂದ್ರಕಲಿತೇ ತಥಾ ಮರಕತೋದ್ಭವೇ ।
ಸ್ಥಾಪ್ಯ ಪೀಠೇ ರಂಗವಲ್ಲೀ ಮಂಡಿತೇ ಚೋಪಲೇಪಿತೇ ॥೧೫॥

ಭೂಮೌ ನಕ್ತವ್ರತೇ ಮೌನೀ ಸ್ನಾತೋ ಭಸ್ಮತ್ರಿಪುಂಡ್ರಧೃಕ್ ।
ರುದ್ರಾಕ್ಷಮಾಲಾಭರಣೋ ಜಪೇತ್ಪಂಚಾಕ್ಷರಂ ಮನುಂ ॥೧೬॥

ಸಂಪಾದ್ಯ ಪೂಜಾದ್ರವ್ಯಾಣಿ ಶತಮಷ್ಟೋತ್ತರಂ ಶಿವೇ ।
ಜಪೇತ್ಪಂಚಾಕ್ಷರಂ ಮಂತ್ರಂ ಸದಾ ಜಪಪರಾಯಣಃ ॥೧೭॥

ಋಷಿಶ್ಛಂದೋದೇವತಾದೀನ್ಜ್ಞಾತ್ವಾ ನ್ಯಸ್ಯ ತನೌ ಮುನೇ ।
ಕರೇ ಕರತಲೇ ಚೈವ ಹೃದಯೇ ಚ ನ್ಯಸೇದ್ಪೃಥಃ ॥೧೮॥

ಧ್ಯಾಯೇತ್ತತ್ರ ಮಹಾದೇವಂ ಪೂಜಾದೌ ಜಪಕರ್ಮಣಿ ॥೧೯॥

ಮೂಲೇ ಕಲ್ಪದ್ರುಮಸ್ಯ ಧೃತಕನಕನಿಭಂ ಹೇಮಸಿಂಹಾಸನಸ್ಥಂ
ವಾಮಾಂಕಾರೂಢಗೌರೀನಿಬಿಡಕುಚಭರಾಭೋಗಗಾಢೋಪಗೂಢಂ।

---

ಸಾರಿಸಿ, ರಂಗವಲ್ಲೀ ಮುಂತಾದವುಗಳಿಂದಲಂಕರಿಸಿರುವ ಭದ್ರಪೀಠದಲ್ಲಿ ಅದನ್ನು ಸ್ಥಾಪಿಸಿ, ಮೌನದಿಂದ ಸ್ನಾನಮಾಡಿ, ಭಸ್ಮತ್ರಿಪುಂಡ್ರಗಳನ್ನು ಧರಿಸಿ ರುದ್ರಾಕ್ಷ ಮಾಲೆಗಳನ್ನು ಅಲಂಕಾರಮಾಡಿಕೊಂಡು ಶಿವಪಂಚಾಕ್ಷರಮಂತ್ರವನ್ನು ಜಪಮಾಡ ಬೇಕು. ಇದರಿಂದಲೇ ಶಿವಲಿಂಗಪೂಜೆಗೆ ಒಂದು ಅಧಿಕಾರ ದೊರೆತಂತಾಗುವುದು. ॥೧೪-೧೫-೧೬॥

ಎಲ್ಲಕ್ಕೂ ಮೊದಲು ಪೂಜಾಸಾಮಗ್ರಿಗಳನ್ನು ಸಂಪಾದಿಸಿಕೊಂಡು ಯಾವಾಗಲೂ ಜಪಾಸಕ್ತನಾಗಿ ನೂರೆಂಟು ಸಾರಿ ಷಡಕ್ಷರಮಂತ್ರವನ್ನು ಜಪಮಾಡಬೇಕು. ಅಯ್ಯ ಮುನಿಯೇ, ಋಷಿ, ಛಂದಸ್ಸು, ದೇವತೆ ಮುಂತಾದ ಅಂಗಗಳನ್ನೆಲ್ಲಾ ತಿಳಿದು ಅಂಗನ್ಯಾಸ, ಕರನ್ಯಾಸಗಳನ್ನು ಮಾಡಿ ಕೈ, ಅಂಗೈ ಮತ್ತು ಹೃದಯಗಳಲ್ಲಿ ವಿಧಿವತ್ತಾಗಿ ನ್ಯಾಸಮಾಡಬೇಕು. ಪೂಜೆಯ ಪ್ರಾರಂಭ ಮತ್ತು ಜಪಕರ್ಮಗಳಲ್ಲಿ ಮಹಾದೇವನನ್ನು ಹೀಗೆ ಧ್ಯಾನಮಾಡಬೇಕು. ॥೧೭-೧೮-೧೯॥

" ಕಲ್ಪವೃಕ್ಷದ ಬುಡದಲ್ಲಿ ನಿರ್ದುಷ್ಟವಾದ ಶುದ್ಧ ಚಿನ್ನದಂತೆ ಕಾಂತಿಯಿಂದ ಶೋಭಿಸುತ್ತಾ, ಸುವರ್ಣಸಿಂಹಾಸನದ ಮೇಲೆ ಕುಳಿತು ಎಡದೊಡೆಯ ಮೇಲೆ ಮಂಡಿಸಿರುವ ಗೌರೀದೇವಿಯ ಸಾಂದ್ರವಾದ ಸ್ತನಪ್ರದೇಶವನ್ನು ಗಾಢವಾಗಿ

ಸರ್ವಾಲಂಕಾರದೀಪ್ತಂ ವರಪರಶುಮೃಗಾಭೀತಿಹಸ್ತಂ ತ್ರಿನೇತ್ರಂ
ವಂದೇ ಚಂದ್ರಾರ್ಧಚೂಡಂ ಗುಹಗಣಪಶಿವಾಶ್ಲಿಷ್ಟಪಾರ್ಶ್ವಂ ಮಹೇಶಂ ॥೨೦॥

ಏವಂ ಧ್ಯಾತ್ವಾ। ಜಪೇನ್ಮೂಲಮಂತ್ರಮಷ್ಟೋತ್ತರಂ ಶತಂ ।
ಸೋದಕಂ।ಕಲಶಂ ಪೂಜ್ಯ ಗಂಧಪುಷ್ಪಾಕ್ಷತೈರ್ಯುತಂ ॥೨೧॥

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ಚಾಸ್ಯ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಥಿತಾಃ ॥೨೨॥

ಕುಕ್ಷೌ ತು ಸಾಗರಾನದ್ಯಃ ಕಲಶಸ್ಯ ಸಮಾಶ್ರಿತಾಃ ।
ಆಯಾಂತು ಶಿವಪೂಜಾರ್ಥಂ ದುರಿತಕ್ಷಯಕಾರಕಾಃ ॥೨೩॥

ಏವಂ ಕಲಶಮಭ್ಯರ್ಚ್ಯ ಪಶ್ಚಾಚ್ಛಂಖಂ ಸಮರ್ಚಯೇತ್ ।
ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ॥೨೪॥

---

ಆಲಿಂಗಿಸಿಕೊಂಡು ಸಕಲ ಅಲಂಕಾರಗಳಿಂದಲೂ ಪ್ರಜ್ವಲಿಸುತ್ತಾ ವರದಮುದ್ರೆ ಕೊಡಲಿ, ಜಿಂಕೆ ಮತ್ತು ಅಭಯ ಮುದ್ರೆಗಳನ್ನುಳ್ಳ ನಾಲ್ಕು ತೋಳ್ಗಳಿಂದಲೂ, ಮೂರು ಕಣ್ಣುಗಳಿಂದಲೂ ಯುಕ್ತನಾಗಿ, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿ ಸ್ಕಂದ, ಗಣೇಶ ಮತ್ತು ಪಾರ್ವತಿಯರಿಂದ ಆಶ್ರಯಿಸಲ್ಪಟ್ಟ ಪಾರ್ಶ್ವಪ್ರದೇಶವುಳ್ಳ ಮಹೇಶ್ವರದೇವನನ್ನು ನಾನು ಬಹಳ ಭಕ್ತಿಯಿಂದ ನಮಸ್ಕರಿಸುತ್ತೇನೆ. ॥೨೦॥

ಹೀಗೆ ಧ್ಯಾನಮಾಡಿ ನೂರೆಂಟು ಸಲ ಮೂಲಮಂತ್ರವನ್ನು ಜಪಮಾಡಬೇಕು. ಅನಂತರ ಜಲಪೂರ್ಣವಾದ ಒಂದು ಕಲಶವನ್ನು ತಂದು ಅದಕ್ಕೆ ಗಂಧ, ಹೂವು ಮತ್ತು ಅಕ್ಷತೆಗಳೊಡನೆ ಪೂಜಿಸಿ, 'ಕಲಶದ ಮುಖಭಾಗದಲ್ಲಿ ವಿಷ್ಣುವೂ, ಕಂಠದಲ್ಲಿ ರುದ್ರನೂ, ಬುಡದಲ್ಲಿ ಬ್ರಹ್ಮನೂ, ಮಧ್ಯದಲ್ಲಿ ಮಾತೃಗಣಗಳೂ ನೆಲಸಿರುವರು. ಹೊಟ್ಟೆಯಲ್ಲಿ ಸಕಲ ಸಾಗರಗಳೂ ಮತ್ತು ನದಿಗಳೂ ಇತರ ತೀರ್ಥಗಳೂ ಇಲ್ಲಿ ಶಿವಪೂಜೆಗೋಸ್ಕರ ಕಲಶದಲ್ಲಿ ಬಂದು ನಿಂತು ನಮ್ಮ ಸಮಸ್ತ ಪಾಪಕ್ಷಯವನ್ನುಂಟುಮಾಡಲಿ.' ॥೨೧-೨೨-೨೩॥

ಎಂಬುದಾಗಿ ಕಲಶವನ್ನು ಪೂಜಿಸಿ, ಅನಂತರ ಅಭಿಷೇಕಸಾಧನವಾದ ಶಂಖವನ್ನು ಇಂತು ಪೂಜಿಸಬೇಕು. 'ಎಲೈ ಪಾಂಚಜನ್ಯವೆ, ನೀನು ಹಿಂದೆ ಸಾಗರದಲ್ಲಿ ಹುಟ್ಟಿ ವಿಷ್ಣುವಿನ ಕೈಯಿಂದ ಆರಿಸಲ್ಪಟ್ಟಿರುವೆ. ಎಲ್ಲಾ ದೇವತೆಗಳಿಂದಲೂ

ಪೂಜಿತಸ್ತ್ವಂ ಸರ್ವದೇವೈಃ ಪಾಂಚಜನ್ಯ ನಮೋಽಸ್ತು ತೇ ।
ತತಃ ಶಂಖಸ್ಥತೋಯಂ ತು ಸಮಂತಾತ್ಪುರತೋ ಕ್ಷಿಪೇತ್ ॥೨೫॥

ಗಂಗೇ ಚ ಯಮುನೇ ಚೇತಿ ಕಲಶಸ್ಥಜಲಂ ಸ್ಪೃಶೇತ್ ।
ಪೀಠಪೂಜಾಂ ತತಃ ಕುರ್ಯಾದ್ಗುರುಂ ಗಣಪತಿಂ ತಥಾ ॥೨೬॥

ದಕ್ಷವಾಮೇ ತಥಾಧಾರಶಕ್ತಿಂ ಚ ಪ್ರಕೃತಿಂ ಪರಾಂ ।
ಅನಂತಂ ಪೃಥಿವೀಂ ಚೈವ ಕೈಲಾಸಂ ರತ್ನಮಂಟಪಂ ॥೨೭॥

ಕಲ್ಪವೃಕ್ಷಂ ರತ್ನವರಂ ಸಿಂಹಾಸನಮನುತ್ತಮಂ ।
ಶ್ವೇತಚ್ಛತ್ರಂ ಚಾಮರಂ ಚ ಪ್ರಾಗಾದಿಕ್ರಮಯೋಗತಃ ॥೨೮॥

ಧರ್ಮಜ್ಞಾನಾದಿವೈರಾಗ್ಯಮೈಶ್ವರ್ಯಂ ಪ್ರಾಕ್ಸಮರ್ಚಯೇತ್ ।
ಅಧರ್ಮಂ ಚ ತಥಾಜ್ಞಾನಮವೈರಾಗ್ಯಮನೈಶ್ವರಂ ॥೨೯॥

---

ಸರ್ವದಾ ಪೂಜಿಸಲ್ಪಟ್ಟಿರುವ ನಿನಗೆ ನಮಸ್ಕಾರಮಾಡುವೆನು' ಎಂದು ಧ್ಯಾನಿಸಿ ಪೂಜಿಸಿ, ಆ ಶಂಖದಲ್ಲಿದ್ದ ನೀರನ್ನು ಆ ಪ್ರದೇಶದ ಸುತ್ತಲೂ ಶುದ್ಧ್ಯರ್ಥವಾಗಿ ಮುಂದುಗಡೆಯಲ್ಲೆಲ್ಲಾ ಚುಮುಕಿಸಬೇಕು. ॥೨೪-೨೫॥

ಕಲಶದಲ್ಲಿರುವ ನೀರನ್ನು 'ಗಂಗೇಚ ಯಮುನೇ ಚೈವ' ಎಂಬ ಮಂತ್ರ ಪೂರ್ವಕವಾಗಿ ಸ್ಪರ್ಶಮಾಡಬೇಕು. ಆ ಮೇಲೆ ಪೀಠಪೂಜೆಯನ್ನು ಮಾಡಿ ಗುರು, ಗಣಪತಿ ಇವರನ್ನೂ, ಬಲಭಾಗದಲ್ಲಿ ಆಧಾರಶಕ್ತಿಯನ್ನೂ, ಎಡಭಾಗದಲ್ಲಿ ಪರಾದೇವತೆಯಾದ ಪ್ರಕೃತಿಯನ್ನೂ ಆವಾಹಿಸಬೇಕು. ಪೀಠದ ಅಧೋಭಾಗದಲ್ಲಿ ಅನಂತ, ಪೃಥಿವೀ, ಕೈಲಾಸ, ರತ್ನಮಂಟಪ, ಕಲ್ಪವೃಕ್ಷ, ಶ್ರೇಷ್ಠವಾದ ರತ್ನ, ಉತ್ತಮ ಸಿಂಹಾಸನ, ಶ್ವೇತಚ್ಛತ್ರ, ಚಾಮರ ಮುಂತಾದವುಗಳನ್ನು ಪೂರ್ವವೇ ಮೊದಲಾದ ನಾಲ್ಕು ದಿಕ್ಕುಗಳಲ್ಲಿಯೂ ಕ್ರಮಾನುಗುಣವಾಗಿ ಮುಂದೆ ಹೇಳುವ ದೇವತೆಗಳನ್ನೂ ಆವಾಹಿಸಬೇಕು. ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳನ್ನು ಪೂರ್ವ ದಿಗ್ಭಾಗದಲ್ಲಿ ಆವಾಹನೆ ಮಾಡಬೇಕು. ॥೨೭-೨೮॥

ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಇವುಗಳನ್ನು ದಕ್ಷಿಣದಿಕ್ಕಿನಲ್ಲಿ ಪೂಜೆಮಾಡಬೇಕು. ಸತ್ವ, ರಜಸ್ಸು, ತಮಸ್ಸು, ಮಾಯೆ, ವಿದ್ಯೆ, ಅಗ್ನಿ, ಸೂರ್ಯ

ದಕ್ಷಿಣೇ ಪೂಜಯೇದೇತಾನ್ಸತ್ವಂ ಚೈವ ರಜಸ್ತಮಃ ।
ಮಾಯಾಂ ವಿದ್ಯಾಂ ಚ ವಹ್ನಿಂ ಚ ಅರ್ಕಂ ಸೋಮಂ ತಥೈವ ಚ॥ ೩೦॥

ಆತ್ಮಾನಂತೌ ಜ್ಞಾನಪದ್ಮೇ ಪ್ರಾಣಾದಿದಲಕೇ ಯಜೇತ್ ।
ವಾಮಾಂ ಜ್ಯೇಷ್ಠಾಂ ತಥಾ ರೌದ್ರೀಂ ಕಾಲೀಂ ಕಲವಿಕಾರಿಣೀಂ ॥ ೩೧॥

ಬಲಾಂ ಬಲಪ್ರಮಾಥಾಂ ಚ ಸರ್ವಭೂತದಮನ್ಯಕಾಂ ।
ಮನೋನ್ಮನೀಂ ತಥೈವಾಂತ್ಯಾಂ ಪೂಜಯೇತ್ಸಾಕ್ಷತಾಭಿಃ ॥ ೩೨॥

ಆವಾಹ್ಯ ಕ್ಷಣಿಕೇ ಲಿಂಗೇ ಪಾರ್ಥಿವೇ ಧಾತುಜೇ ತಥಾ ।
ಬಾಣವರ್ಜಂ ರಸೇಂದ್ರೇವಾ ಸ್ಫಾಟಿಕೇ ರತ್ನಜೇಷು ವಾ ॥ ೩೩॥

ಸಾಕ್ಷತಂ ಚ ಸಪುಷ್ಪಂತು ಸಂಗೃಹ್ಯ ಸ್ವಗೃಹಾಂತರೇ ।
ಧ್ಯಾಯೇದೇವಂ ವಿರೂಪಾಕ್ಷಂ ನಿಮೀಲ್ಯಾಕ್ಷೀಣಿ ಸತ್ತಮ ॥ ೩೪॥

ವಂದೇ ಮಹೇಶಂ ಸುರಸಿದ್ಧಸೇವಿತಂ
ಸ್ಫುರದ್ದ್ರುಮ್ಯೈಃ ಪೂಜಿತಪಾದಪದ್ಮಂ ।
ವಿದ್ಯಾಪ್ರದಂ ಭಕ್ತಜನೈಶ್ಚ ಸೇವಿತಂ
ಧ್ಯಾಯೇತ್ಸದಾ ಸಾಂಬಶಿವಂ ಪ್ರಸನ್ನಂ ॥ ೩೫॥

---

ಚಂದ್ರ, ಆತ್ಮ, ಅನಂತ, ಜ್ಞಾನ, ಪದ್ಮ ಇವುಗಳನ್ನು ಪ್ರಾಣವೇ ಮೊದಲಾದ ದಳಗಳಲ್ಲಿ ಅಂದರೆ ಪಶ್ಚಿಮದಿಗ್ಭಾಗದಲ್ಲಿ ಅರ್ಚಿಸಬೇಕು. ॥೨೯-೩೦॥

ವಾಮಾ ಜ್ಯೇಷ್ಠಾ, ರೌದ್ರೀ, ಕಾಲೀ, ಕಲವಿಕಾರಿಣೀ ಬಲಾ, ಬಲಪ್ರಮಾಥಿನೀ, ಸರ್ವಭೂತದಮನೀ, ಮನೋನ್ಮನೀ ಇವರನ್ನು ಕೊನೆಯಲ್ಲಿ ಅಕ್ಷತೆಯೇ ಮುಂತಾದವುಗಳಿಂದ ಉತ್ತರದಿಕ್ಕಿನಲ್ಲಿ ಪೂಜೆಮಾಡಬೇಕು. ॥೩೧-೩೨।

ಅಯ್ಯ ಜೈಗೀಷವ್ಯನೆ, ಬಾಣಲಿಂಗವನ್ನು ಳಿದು, ಕ್ಷಣಿಕಲಿಂಗ, ಪಾರ್ಥಿವಲಿಂಗ, ಹಾಗೆಯೇ ಪಾದರಸ, ಸ್ಫಟಿಕ, ರತ್ನ ಇವುಗಳಿಂದ ರಚಿತವಾದ ಲಿಂಗಗಳಲ್ಲಿ ಅಕ್ಷತೆ, ಹೂಗಳನ್ನು ಕೈಯ್ಯಲ್ಲಿ ಹಿಡಿದು ತನ್ನ ಮನೆಯೊಳಗೆ ಕಣ್ಣುಗಳನ್ನು ಮುಚ್ಚಿಕೊಂಡು, ಮುಂದೆ ಹೇಳುವಂತೆ ಮಹಾದೇವನನ್ನು ಧ್ಯಾನಮಾಡಬೇಕು. ॥೩೩-೩೪॥

ದೇವತೆಗಳು, ಸಿದ್ಧಪುರುಷರೇ ಮುಂತಾದವರಿಂದ ಸೇವಿಸಲ್ಪಟ್ಟವನೂ, ಕಲ್ಪವೃಕ್ಷಕುಸುಮಗಳಿಂದರ್ಚಿತವಾದ ಪಾದಕಮಲಗಳುಳ್ಳವನೂ, ಜ್ಞಾನಪ್ರದನೂ,

ಸರ್ವಾಧಾರೇ ಧರೇ ದೇವಿ ಪೂಜಾರ್ಥಂ ಶಂಕರಸ್ಯ ಹಿ ।
ಸ್ಥಾನಂ ದೇಹಿ ಮಹಾದೇವಿ ಪೂಜಿತಾ ಭವ ಮೇ ಸದಾ ॥೩೬॥

ಇತ್ಯಾಕ್ಷತಾಭಿಃ ಸಂಪೂಜ್ಯ ಘಂಟಾಮಾತಾಡಯೇತ್ತತಃ ।
ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ॥೩೭॥

ಘಂಟಾನಾದಂ ಕರೋಮ್ಯದ್ಯ ತೇನ ಪ್ರೀತೋ ಭವೇಚ್ಛಿವಃ ।
ಲಿಂಗಂ ಪೀಠೇ ಚ ಸಂಸ್ಥಾಪ್ಯ ದೇವ್ಯಾ ಸಹ ತತೋ ಯಜೇತ್ ॥೩೮॥

ಸ ಪುಷ್ಪಂ ಸಾಕ್ಷತಂ ಗೃಹ್ಯ ಸ್ಪ್ರಾರ್ಥಯೇತ ಮಹೇಶ್ವರಂ ।
ಆರಾಧಿತೋ ಮನುಷ್ಯೈಸ್ತ್ವಂ ಸಿದ್ಧೈರ್ದೇವಾಸುರಾದಿಭಿಃ ॥೩೯॥

ಆರಾಧಯಾಮಿ ಭಕ್ತ್ಯಾ ತ್ವಾಂ ಮಮ ಗೃಹಾಣ ಮಹೇಶ್ವರ ।
ಆತ್ಮಾವಯಂ ತ್ರಿತೀಶಾನಂ ಸೋದಕೇನಾಭಿಷಿಂಚಯೇತ್ ॥೪೦॥

---

ಭಕ್ತಜನರಿಂದ ಸೇವಿಸಲ್ಪಡುವವನೂ ಆದ ಮಹೇಶ್ವರನಿಗೆ ನಮಸ್ಕಾರಮಾಡುವೆನು. ಹೀಗೆಂದು ಪ್ರಸನ್ನನಾದ ಸದಾಶಿವಸ್ವಾಮಿಯನ್ನು ಯಾವಾಗಲೂ ಧ್ಯಾನಮಾಡಬೇಕು. ॥೩೫॥

ಎಲ್ಲಕ್ಕೂ ಆಧಾರಳಾಗಿರುವ ಎಲೌ ಭೂದೇವಿಯೆ, ಮಹಾದೇವಿಯೆನಿಸಿದ ನೀನು ಯಾವಾಗಲೂ ಪ್ರಸನ್ನಳಾಗಿ, ಮಹೇಶನ ಪೂಜೆಗೆ ಅವಕಾಶವನ್ನು ಕೊಡೆಂದು ಭೂದೇವಿಯನ್ನು ಪೂಜೆಮಾಡಿ, ಅನಂತರ ರಾಕ್ಷಸರು ತೊಲಗಿ, ದೇವತೆಗಳು ಬರುವುದಕ್ಕೋಸ್ಕರ ಈಗ ಘಂಟೆಯ ನಾದವನ್ನು ಮಾಡುತ್ತೇನೆ. ಇದರಿಂದ ಶಿವನು ಪ್ರೀತನಾಗಲೆಂಬುದಾಗಿ ಪೂಜಾರಂಭದಲ್ಲಿ ಗಂಟೆಯನ್ನು ಬಾರಿಸಬೇಕು. ॥೩೬-೩೭॥

ಪೀಠದಲ್ಲಿ ಶಿವಲಿಂಗವನ್ನು ದೇವಿಯೊಡನೆ ಸ್ಥಾಪಿಸಿ, ಅನಂತರ ಪೂಜೆಮಾಡಬೇಕು. ಹೂವು, ಅಕ್ಷತೆಗಳನ್ನು ತೆಗೆದುಕೊಂಡು, ' ಮಹೇಶ್ವರನೇ, ಮನುಷ್ಯರು, ಸಿದ್ಧರು, ದೇವತೆಗಳು ಮತ್ತು ರಾಕ್ಷಸರಿಂದ ನೀನು ಸದಾ ಪೂಜಿಸಲ್ಪಟ್ಟಿರುವೆ. ಶಿವನೆ ! ಭಕ್ತಿಯಿಂದ ನಿನ್ನನ್ನು ಪೂಜೆಮಾಡುತ್ತೇನೆ. ಅನುಗ್ರಹಮಾಡೆ'ಂದು ಪೂಜಿಸಬೇಕು. 'ಆತ್ಮಾವಯಂ' ಎಂಬ ಮಂತ್ರವನ್ನುಚ್ಚರಿಸುತ್ತಾ ನೀರಿನಿಂದ ಅಭಿಷೇಕಮಾಡಬೇಕು. ॥೩೮-೩೯-೪೦॥

ಮಧುಪರ್ಕಂ ತತೋ ದದ್ಯಾನ್ಮೂಲೇನೈವ ತಥಾ ಮುನೇ ।
ಆಪ್ಯಾಯಸ್ವೇತಿ ಚ ಕ್ಷೀರಂ ದಧಿಕ್ರಾವ್ಣೇತಿ ವೈ ದಧಿ ॥೪೧॥

ಘೃತಂ ಮಿಮಿಕ್ಷೇತಿ ಘೃತಂ ಮಧುವಾತೇತಿ ವೈ ಮಧು ।
ಸ್ವಾದುಃ ಪವಸ್ವೇತಿ ಸಿತಾಂ ನಾರಿಕೇಳಜಲಂ ತಥಾ ॥೪೨॥

ರಂಭಾಪನಸಜಾಮ್ರಾದಿಜಂಬೀರೇಕ್ಷುರಸೈರಪಿ ।
ಷಡಕ್ಷರೇಣ ಸಂಸ್ನಾಪ್ಯ ಗಂಧರತ್ನಸುಮಾದಿಭಿಃ ॥೪೩॥

ಅಭಿಷಿಚ್ಯ ತತೋಽನ್ನಸ್ಯ ಅಂಧಸಸ್ಪತಯೇತ್ಯಪಿ ।
ಕುರ್ವೀತಾನ್ನಾಭಿಷೇಕಾಂತಂ ತಂ ನಿವೃತ್ಯ ಸುಶೀತಲೈಃ ॥೪೪॥

ಧಾರಾಪಾತ್ರಗತಾಂಭೋಭಿರವಿಚ್ಛಿನ್ನಾದಿಧಾರಯಾ ।
ಗೋಶೃಂಗೈರಪಿ ವಾಸಮ್ಯಗ್ರುದ್ರಾವೃತ್ಯಾಭಿಷೇಚಯೇತ್ ॥೪೫॥

---

ಅಯ್ಯಾ ಮುನಿಯೇ, ಮೂಲಮಂತ್ರದಿಂದಲೇ ಅನಂತರ ಮಧುಪರ್ಕವನ್ನು ಕೊಡಬೇಕು. "ಆಪ್ಯಾಯಸ್ವ ಸಮೇತುತೇ' ಎಂಬ ಮಂತ್ರದಿಂದ ಹಾಲು, 'ದಧಿ ಕ್ರಾವ್ಣೋ ಅಕಾರಿಷಂ' ಎಂಬ ಮಂತ್ರದಿಂದ ಮೊಸರು, 'ಘೃತಂ ಮಿಮಿಕ್ಷೇ' ಎಂಬ ಮಂತ್ರದಿಂದ ಜೇನು, 'ಸ್ವಾದುಃ ಪವಸ್ವ ದಿವ್ಯಾಯ' ಎಂಬ ಮಂತ್ರದಿಂದ ಸಕ್ಕರೆ 'ಯಾಃ ಫಲಿನೀರ್ಯಾ ಅಫಲಾ' ಎಂಬ ಮಂತ್ರದಿಂದ ಎಳನೀರು, ಇವುಗಳನ್ನು ಅಭಿಷೇಕಮಾಡಿ, ಬಾಳೆ, ಹಲಸು, ಮಾವು, ನಿಂಬೆ, ಮತ್ತು ಕಬ್ಬಿನ ರಸಗಳಿಂದಲೂ ಷಡಕ್ಷರಮಂತ್ರಪೂರ್ವಕವಾಗಿ ಅಭಿಷೇಕಮಾಡಬೇಕು. ಅಭಿಷೇಕವಾದ ನಂತರ ಯಥಾಶಕ್ತಿ, ಗಂಧ, ಹೂ, ರತ್ನ ಮುಂತಾದವುಗಳಿಂದ ಪೂಜಿಸಬೇಕು. ॥೪೧-೪೨-೪೩॥

'ಅನ್ನಸ್ಯ ಅಂಧಸಸ್ಪತಯೇ' ಎಂಬ ಮಂತ್ರಪೂರ್ವಕವಾಗಿ ಶಾಲ್ಯನ್ನದಿಂದ ಅಭಿಷೇಕಮಾಡಿ ಅದನ್ನು ತೆಗೆದು ಆ ಮೇಲೆ ತುಂಬಾ ಸಣ್ಣಗೆ ಧಾರಾಕಾರವಾಗಿ ಬೀಳುವ ಪಾತ್ರೆಗಳಿಂದಲಾಗಲೀ ಹಸುವಿನ ಕೊಂಬುಗಳಿಂದಲಾಗಲೀ ಮಧ್ಯೆ ಸಿಲ್ಲದಂತೆ ಬೀಳುವ ಜಲಧಾರೆಗಳಿಂದ ಏಕವಾರ, ಮೂರುಸಲ ಅಥವಾ ಹನ್ನೊಂದು ಬಾರಿ ರುದ್ರಮಂತ್ರವನ್ನುಚ್ಚರಿಸುತ್ತಾ ಭಕ್ತಿಪೂರ್ವಕವಾಗಿ ಅಭಿಷೇಕ ಮಾಡಬೇಕು. ॥೪೪-೪೫॥

ಏಕವಾರಂ ತ್ರಿವಾರಂ ವಾ ತಥೈಕಾದಶಿನೀಮಪಿ।
ಸಂಸ್ನಾಪ್ಯಾಸಾದ್ಯ ಪೀಠೇ ಚ ವಾಸಶ್ಚೈವೋಪವೀತಕಂ ॥೪೬॥

ದದ್ಯಾಚ್ಚ ತ್ರ್ಯಂಬಕೇನೈವ ಭೂತಿಗಂಧಾಕ್ಷತಾಸ್ತಥಾ।
ಉತ್ತಾನೈರುತ್ತರಾಗ್ರೈಶ್ಚ ಬಿಲ್ವೈಃ ಸಂಕ್ಷಾಳಿತೈರ್ಯಜೇತ್ ॥೪೭॥

ಮಾಲಾಭಿಃ ಕುಸುಮೈಶ್ಚೈವ ಶತಾಷ್ಟೋತ್ತರನಾಮಭಿಃ।
ಭವಾಯೇತಿ ತಥೈವಾಷ್ಟೌ ನಿಧನೇತ್ಯಾದಿಭಿಸ್ತಥಾ ॥೪೮॥

ಧೂಪಂ ದೀಪಂ ಚ ನೈವೇದ್ಯಂ ತಾಂಬೂಲಂ ಚ ವಿಶೇಷತಃ।
ದೇವೀಂ ಪಾರ್ಶ್ವೇ ಯಜೇಚ್ಛಂಭೋಃ ವಾಮೇ ದಕ್ಷೇಽಥವಾ ಮುನೇ॥೪೯॥

ದೇವೀ ಮಂತ್ರೇಣಾಭಿಷಿಚ್ಯ ಗಂಧಧೂಪಾದಿವಾಸಸಾ।
ಪೂಜಯೇಲ್ಲಿಂಗಪಾರ್ಶ್ವೇ ತು ಸ್ಕಂದಂ ಚ ಗಣಪಂ ತಥಾ ॥೫೦॥

---

ಶಿವಲಿಂಗಕ್ಕೆ ಸ್ನಾನಮಾಡಿಸಿದ ಮೇಲೆ ಪೀಠದ ಮೇಲೆ ಕೂರಿಸಿ, ವಸ್ತ್ರ, ಉಪವೀತಗಳನ್ನು 'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಸಮರ್ಪಿಸಿ, ಅದೇ ಮಂತ್ರದಿಂದಲೇ ವಿಭೂತಿ, ಗಂಧ ಮತ್ತು ಅಕ್ಷತೆಗಳನ್ನು ಸಮರ್ಪಿಸಬೇಕು. ನೆಟ್ಟಗೆ ಉತ್ತರಾಗ್ರವಾಗಿರುವ ಬಿಲ್ವದಳಗಳನ್ನು ನೀರಿನಿಂದ ತೊಳೆದು ಅವುಗಳಿಂದಲೂ ಹೂಮಾಲೆ, ಇತರ ಬಿಡಿಹೂಗಳು ಇವೇ ಮುಂತಾದವುಗಳಿಂದಲೂ ನೂರೆಂಟು ಶಿವನಾಮಗಳನ್ನು ಉಚ್ಚಾರಮಾಡಿಕೊಂಡು ಪೂಜಿಸಬೇಕು. ಆ ಮೇಲೆ 'ಭವಾಯ ನಮಃ' ಎಂಬ ಮಂತ್ರಪೂರ್ವಕವಾಗಿ ಎಂಟು ಬಾರಿಯೂ, 'ನಿಧನ ಪತಯೇ ನಮಃ' ಎಂಬ ಮಂತ್ರಪೂರ್ವಕವಾದ ನಮಸ್ಕಾರಾಂತಪದಗಳಿಂದಲೂ ಅರ್ಚನೆ ಮಾಡಬೇಕು. ॥೪೬-೪೭-೪೮॥

ಅನಂತರ, ಧೂಪ, ದೀಪ, ನೈವೇದ್ಯ ಮತ್ತು ತಾಂಬೂಲಗಳನ್ನು ವಿಶೇಷ ಭಕ್ತಿಯಿಂದ ಸಮರ್ಪಿಸಿ, ಶಂಭುವಿನ ಎಡಭಾಗ ಅಥವ ಬಲಗಡೆಯಲ್ಲಿ ದೇವಿಯನ್ನು ಪೂಜೆಮಾಡಬೇಕು. ದೇವಿಗೆ ಹೇಳಿರುವ ಸೂಕ್ತಮಂತ್ರದಿಂದ ಅಭಿಷೇಕಮಾಡಿ, ಗಂಧ, ಧೂಪ, ವಸ್ತ್ರ ಮುಂತಾದವುಗಳಿಂದ ಸತ್ಕರಿಸಬೇಕು. ಹಾಗೆಯೇ ಶಿವಲಿಂಗದ ಪಕ್ಕದಲ್ಲಿ ಕುಮಾರಸ್ವಾಮಿ ಮತ್ತು ಗಣೇಶರನ್ನು ಅರ್ಚಿಸಬೇಕು. ॥೪೯-೫೦॥

ನೀರಾಜಯೇತ್ತತೋ ಲಿಂಗಂ ದೇವೀಂ ಸ್ಕಂದವಿನಾಯಕೌ।
ಕಾಂಸ್ಯವಾದಿತ್ರನಿನದೈರ್ಘೋಷಯೇಚ್ಛಿವಮಂದಿರಂ ॥೫೧॥

ಪ್ರದಕ್ಷಿಣತ್ರಯಂ ಕೃತ್ವಾ ನಮಸ್ಕಾರಾದಿಪಂಚಕಂ।
ಷಡಕ್ಷರೇಣ ಮಂತ್ರೇಣ ಕುರ್ವೀತ ಮುನಿಸತ್ತಮ ॥೫೨॥

ಛತ್ರಂ ಚ ಚಾಮರೇ ದಿವ್ಯೇ ವ್ಯಜನಾದರ್ಶಕಂ ತತಃ।
ನೃತ್ತಂ ಗೀತಂ ತಥಾ ವಾದ್ಯಂ ಪ್ರದದ್ಯಾನ್ಮೂಲಮಂತ್ರತಃ ॥೫೩॥

ಸ್ತೋತ್ರಮೇತತ್ಪಠೇದ್ವಿದ್ವಾನ್ವೇದತ್ರಯಗತಂ ದ್ವಿಜ।
ದೇವಾರ್ಣಂ ವಾ ಜಪೇದ್ವಿದ್ವಾನೇತತ್ಸ್ತೋತ್ರಂ ಪಠೇತ್ಸದಾ ॥೫೪॥

ನಮೋ ನಾದಾತ್ಮನೇ ತುಭ್ಯಂ ನಮೋ ಬಿಂದುಕಲಾತ್ಮನೇ।
ಅಲಿಂಗ ಲಿಂಗರೂಪಾಯ ರೂಪಾತೀತಾಯ ತೇ ನಮಃ ॥೫೫॥

---

ಆ ಮೇಲೆ, ಶಿವಲಿಂಗ, ದೇವಿ, ಕುಮಾರಸ್ವಾಮಿ ಮತ್ತು ವಿನಾಯಕ ಈ ನಾಲ್ವರಿಗೂ ಒಟ್ಟಾಗಿ ಮಂಗಳಾರತಿ ಮಾಡಬೇಕು. ಆ ಸಮಯದಲ್ಲಿ ಕಂಚಿನ ಜಾಗಟೆ ಮುಂತಾದವುಗಳಿಂದ ಮಂಗಳವಾದ್ಯಧ್ವನಿಗಳು ಶಿವಮಂದಿರದಲ್ಲಿ ಮೊಳಗುವಂತೆ ಮಾಡಬೇಕು. ಮಂಗಳಾರತಿ ಮಾಡಿದ ಅನಂತರ ಮೂರು ಪ್ರದಕ್ಷಿಣೆಮಾಡಿ ಐದು ನಮಸ್ಕಾರಗಳನ್ನು ಷಡಕ್ಷರಮಂತ್ರದಿಂದ ಮಾಡಬೇಕು. ॥೫೧-೫೨॥

ಅಯ್ಯ ಮುನಿವರ್ಯನೆ, ಇಷ್ಟಾದ ನಂತರ ಛತ್ರಿ, ಎರಡು ದಿವ್ಯಚಾಮರಗಳು, ಬೀಸಣಿಗೆ, ಕನ್ನಡಿ ಇವುಗಳ ಉಪಚಾರಗಳನ್ನು ಸಮರ್ಪಿಸಿ ಅನಂತರ, ನಾಟ್ಯ, ಗಾನ ಮತ್ತು ವಾದ್ಯಗಳನ್ನು ಮೂಲಮಂತ್ರದಿಂದ ಸಮರ್ಪಣಮಾಡಬೇಕು. ಕೊನೆಯಲ್ಲಿ ಮೂರು ವೇದಗಳ ಸಾರಭೂತವಾದ ಈ ಸ್ತೋತ್ರವನ್ನು ವಿದ್ವಾಂಸನು ಓದಬೇಕು. ಅಥವಾ ದೇವಋಣರೂಪವಾಗಿರುವ ಈ ಸ್ತೋತ್ರವನ್ನು ವಿವೇಕಿಯಾದವನು ಯಾವಾಗಲೂ ಪಠಿಸುತ್ತಿರಬೇಕು. ॥೫೩-೫೪॥

" ನಾದರೂಪಿಯಾದ ಶಿವನೇ, ನಿನಗೆ ನಮಸ್ಕಾರವು ; ಬಿಂದು ಮತ್ತು ಕಲಾತ್ಮಕನಾದ ನಿನಗೆ ಪ್ರಣಾಮವು. ವಸ್ತುತಃ ಲಿಂಗರೂಪವಾಗಿಲ್ಲದೇ ಕೇವಲ ಜಗದ್ಧಿತಕ್ಕೋಸ್ಕರ ಲಿಂಗರೂಪವನ್ನು ಧರಿಸಿ, ರೂಪಕ್ಕೆ ಗುರಿಯಾಗಿರುವ ನಿನಗೆ ನಮಸ್ಕಾರ

ತ್ವಂ ಮಾತಾ ಸರ್ವಲೋಕಾನಾಂ ತ್ವಮೇವ ಜಗತಾಂ ಪಿತಾ ।
ತ್ವಂ ಭ್ರಾತಾ ತ್ವಂ ಸುಹೃನ್ಮಿತ್ರಂ ತ್ವಮೇವ ಪ್ರಪಿತಾಮಹಃ ॥೫೬॥

ನಮಃ ಸತ್ಯಾಯ ದೇವಾಯ ನಮಸ್ತತ್ಪುರುಷಾಯ ಚ ।
ಅಘೋರಾಯ ನಮಸ್ತೇಽಸ್ತು ವಾಮದೇವಾಯ ತೇ ನಮಃ ॥೫೭॥

ಈಶಾನಾಯ ನಮಸ್ತೇಽಸ್ತು ದೇವದೇವಾಯ ತೇ ನಮಃ ।
ಶರ್ವಾಯ ಕ್ಷಿತಿರೂಪಾಯ ಶುದ್ಧಮಾತ್ರಾಯ ತೇ ನಮಃ ॥೫೮॥

ನಮಃ ಪಶೂನಾಂ ಪತಯೇ ಪಾವಕಾಯಾಮಿತೌಜಸೇ ।
ಭವಾಯ ವಾಯುರೂಪಾಯ ಶಬ್ದರೂಪಾಯ ತೇ ನಮಃ ॥೫೯॥

ಮಹಾದೇವಾಯ ಸೋಮಾಯ ಅಮೃತಾಯ ನಮೋನಮಃ ।
ಅರ್ಕಾಯ ಯಜಮಾನಾಯ ನಮೋಽಸ್ತ್ವಾಕಾಶಮೂರ್ತಯೇ ॥೬೦॥

---

ಮಾಡುವೆನು. ದೇವ, ನೀನೇ ಎಲ್ಲಾ ಲೋಕಗಳಿಗೂ ತಾಯಿ ಮತ್ತು ತಂದೆ ಯಾಗಿರುವೆ. ಸರ್ವರಿಗೂ ಸಹೋದರ, ಸ್ನೇಹಿತ ಮತ್ತು ಅಜ್ಜನೆನಿಸಿರುವವನೂ ನೀನೇ ಆಗಿರುವೆ. ॥೫೫-೫೬॥

ಸತ್ಯಸ್ವರೂಪನೂ, ತತ್ಪುರುಷರೂಪಿಯೂ ಆದ ನಿನಗೆ ನಮಸ್ಕಾರಗಳು; ಭಕ್ತರಿಗೆ ಸೌಮ್ಯಮೂರ್ತಿಯೂ, ಎಡಭಾಗದಲ್ಲಿ ದೇವಿಯಿಂದ ಶೋಭಿಸುವ ದೇಹ ವುಳ್ಳವನೂ ಆದ ನಿನಗೆ ಪ್ರಣಾಮವು; ಐಶ್ವರ್ಯಪ್ರದನೂ, ದೇವಾದಿದೇವನೂ ಆದ ನಿನಗೆ ನಮಸ್ಕಾರ; ಪ್ರಳಯಕಾಲದಲ್ಲಿ ಪ್ರಪಂಚವನ್ನು ಸಂಹರಿಸುವವನೂ, ಭೂಸ್ವರೂಪನೂ, ಶುದ್ಧಸ್ವರೂಪನೂ ಆದ ನಿನಗೆ ಪ್ರಣಾಮವು; ॥೫೭-೫೮॥

ಜನನ ಮರಣರೂಪವಾದ ಪಾಶಕ್ಕೊಳಗಾಗಿ ನರಳುವ ಪ್ರಾಣಿಗಳೆಂಬ ಪಶು ಗಳಿಗೆ ಒಡೆಯನೂ, ಅತಿ ತೇಜಸ್ಸುಳ್ಳ ಅಗ್ನಿರೂಪನೂ ಆದ ನಿನಗೆ ನಮಸ್ಕಾರವು; ಜಗದುತ್ಪತ್ತಿಕಾರಣನೂ, ವಾಯುರೂಪಿಯೂ, ಶಬ್ದಸ್ವರೂಪನೂ ಆದ ನಿನಗೆ ಪ್ರಣಾಮವು; ದೇವತೆಗಳಲ್ಲಿ ದೊಡ್ಡವನೂ, ಚಂದ್ರರೂಪಿಯೂ, ಮರಣವಿಲ್ಲ ದವನೂ ಆದ ನಿನಗೆ ಪ್ರಣಾಮಮಾಡುತ್ತೇನೆ. ಸೂರ್ಯರೂಪಿಯೂ, ಯಜಮಾನ ಸ್ವರೂಪನೂ, ಆಕಾಶರೂಪಿಯೂ ಆಗಿರುವ ನಿನಗೆ ನಮಸ್ಕಾರವು, ದೇವ ದೇವನೆ! ಅಗ್ನ್ಯಾದಿ ಈ ಎಂಟು ಮೂರ್ತಿಗಳಾಗಿ ತೋರುವ ನಿನ್ನಲ್ಲಿ ಸ್ಥಾವರಜಂಗಮಾತ್ಮಕ ವಾದ ಜಗತ್ತೆಲ್ಲವೂ ಅಡಕವಾಗಿದೆ. ॥೫೯-೬೦॥

ತ್ವದಷ್ಟಮೂರ್ತಿಭಿರ್ವ್ಯಾಪ್ತಂ ಜಗತ್ಸರ್ವಂ ಚರಾಚರಂ ।
ಮಯಾದ್ಯಾಜ್ಞಾನತಃ ಶಂಭೋ ಯತ್ಕೃತಂ ಪೂಜನಂ ತವ ॥೬೧॥

ತತ್ಕ್ಷಮಸ್ವ ಮಹಾದೇವ ಶರಣಾಗತವತ್ಸಲ ।
ಇತಿ ಸ್ತುತ್ವಾ ಜಪೇನ್ಮಂತ್ರಂ ಷಡಕ್ಷರಮತಂದ್ರಿತಃ ॥೬೨॥

ನ್ಯಾಸಂ ದಿಗ್ಮೋಚನಂ ಕೃತ್ವಾ ಶಂಖತೋಯಭ್ರಮೇಣ ಚ ।
ತೇನೈವ ಪ್ರೋಕ್ಷಯೇದ್ದೇಹಂ ನಿರ್ಮಾಲ್ಯಾಂಬು ಪಿಬೇತ್ತ್ರಿಧಾ ॥೬೩॥

ನಾತ್ಯಂತಂ ತತ್ಪ್ರಾಶಯೇಚ್ಚ ಸ ಮೂತ್ರಪರಿಣಾಮಿ ಯತ್ ।
ಹೃತ್ಪದ್ಮಕರ್ಣಿಕಾಮಧ್ಯಮುಮಯಾ ಸಹ ಶಂಕರ ॥೬೪॥

ಪ್ರವಿಶ ತ್ವಂ ಮಹಾದೇವ ಸರ್ವೈರಾವರಣೈಃ ಸಹ ।
ಅಯಂ ಮೇ ಹಸ್ತ ಇತ್ಯಾದ್ಯೈಃ ಸ್ಪರ್ಶೋ ಲಿಂಗೇ ವಿಧೀಯತೇ ೬೫॥

ಏವಂ ಚಾಹರಹಃ ಪೂಜ್ಯೋ ಲಿಂಗೇದೈವಃ ಸನಾತನಃ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾ ಯಥಾಬಲಂ ॥೬೬॥

---

'ಶಂಕರನೇ' ಈಗ ನಾನು ತಿಳಿವಳಿಕೆಯಿಲ್ಲದೇ ಮಾಡಿರುವ ನಿನ್ನ ಪೂಜೆಯಲ್ಲಿ ಉಂಟಾದ ದೋಷಗಳನ್ನು ಶರಣಾಗತವಾತ್ಸಲ್ಯವುಳ್ಳ ಸ್ವಾಮಿಯೇ, ನೀನು ಕ್ಷಮಿಸು," ಎಂದು ಸ್ತೋತ್ರಮಾಡಿ, ಆಲಸ್ಯವಿಲ್ಲದೆ ಷಡಕ್ಷರಮಂತ್ರವನ್ನು ಜಪಮಾಡಬೇಕು. ಅಂಗನ್ಯಾಸ ಕರನ್ಯಾಸಗಳನ್ನೂ ದಿಗ್ವಿಮೋಚನವನ್ನೂ ಮಾಡಿ ಶಂಖದ ನೀರಿನಿಂದ ದೇಹಕ್ಕೆ ಪ್ರೋಕ್ಷಣೆಮಾಡಿಕೊಂಡು, ನಿರ್ಮಾಲ್ಯೋದಕವನ್ನು ತೀರ್ಥವಾಗಿ ಮೂರುಬಾರಿ ಕುಡಿಯಬೇಕು. ॥೬೨-೬೩॥

ಈ ನಿರ್ಮಾಲ್ಯೋದಕವು ಸಾಮಾನ್ಯಜಲದಂತೆ ಮೂತ್ರರೂಪವಾಗಿ ಪರಿಣಾಮವಾಗದಿರುವುದಕ್ಕಾಗಿ ಇದನ್ನೇ ಹೆಚ್ಚು ಪಾನಮಾಡಬಾರದು. ಹೀಗೆ ತೀರ್ಥಪ್ರಾಶನ ಮಾಡಿದ ಮೇಲೆ, ಶಂಕರನೆ, ಹೃದಯಕಮಲದ ಮೊಗ್ಗಿನ ಮಧ್ಯದಲ್ಲಿ ಉಮೆಯೊಡನೆ ಸಕಲ ಆವರಣಗಳಿಂದ ಯುಕ್ತನಾಗಿ ನೀನು ಪ್ರವೇಶಿಸೆಂದು ಮಹಾದೇವನನ್ನು ಪ್ರಾರ್ಥಿಸಿ ವಿಸರ್ಜನೆಮಾಡಬೇಕು. ಆ ಮೇಲೆ 'ಅಯಂ ಮೇ ಹಸ್ತೋ ಭಗವಾನ್ 'ಎಂಬ ಮಂತ್ರದಿಂದ ಲಿಂಗವನ್ನು ಸ್ಪರ್ಶಮಾಡಬೇಕು.॥೬೪-೬೫॥

ಹೀಗೆ ಸನಾತನನಾದ ಮಹಾದೇವನನ್ನು ಶಿವಲಿಂಗದಲ್ಲಿ ಹಗಲಿರುಳೂ ಪೂಜೆ

ಅಷ್ಟಮ್ಯಾಂ ಸೋಮವಾರೇಷು ಪ್ರದೋಷೇ ದೋಷವರ್ಜಿತೇ ।
ಚತುರ್ದಶ್ಯಾಂ ತಥಾಸಕ್ತ್ಯಾಂ ನಿತ್ಯೇ ನೈಮಿತ್ತಿಕೇಽಪಿ ಚ ॥೬೭॥

ಗ್ರಹಣೇ ವಿಷುವೇ ಚೈವ ಪೂಜೇಯುಂ ಕಥಿತಾ ತವ ।
ನಾಸ್ತಿ ಶಂಭೋಃ ಪೂಜನೇನ ಸದೃಶಂ ನ ವೃಷಂ ಭವೇತ್ ॥೬೮॥

ಪೂಜಯಾ ಭೋಗಮೋಕ್ಷೌ ಚ ಸಿದ್ಧ್ಯತಃ ಕಿಂ ಬಹೂಕ್ತಿತಃ ॥೬೯॥

॥ ಶ್ರೀ ಸ್ಕಂದ ಉವಾಚ ॥

ತುರಂಗ ಮಾತಂಗ ಶತಾಂಗ ಸಂಘಾಃ
ಸ್ಯಾತ್ತುಂಗಲಿಂಗಾರ್ಚಕಗೇಹನಿಷ್ಠಾಃ ।
ಧನಂ ಚ ಧಾನ್ಯಂ ಚ ಸುರತ್ನವಸ್ತ್ರ-
ಭುಕ್ತ್ಯನ್ನಸಿದ್ಧಿಂ ಗೃಹಸೌಧಪಂಕ್ತಿಂ ॥೭೦॥

ಪರಾಕ್ರಮಂ ಸರ್ವಕಲಾಸು ದಾಕ್ಷ್ಯಂ
ಪುತ್ರಾಂಸ್ತಥಾ ತ್ರ್ಯಕ್ಷಸಮರ್ಚನಾಲ್ಲಭೇತ್ ।

---

ಮಾಡಬೇಕು. ಹೀಗೆ ಒಂದು, ಎರಡು, ಮೂರು ಕಾಲಗಳಲ್ಲಿ ಅಥವಾ ಶಕ್ತಿಯಿದ್ದಷ್ಟು ಕಾಲಗಳಲ್ಲಿ ಅರ್ಚನೆಮಾಡಬೇಕು. ಅಯ್ಯ ಜೈಗೀಷವ್ಯನೆ, ಅಷ್ಟಮೀ, ಸೋಮವಾರ, ದೋಷಗಳಿಲ್ಲದ ಪ್ರದೋಷಕಾಲ, ಚತುರ್ದಶೀ, ರಾತ್ರಿ, ನಿತ್ಯ ಮತ್ತು ನೈಮಿತ್ತಿಕ ಕಾಲಗಳು, ಗ್ರಹಣ, ವಿಷುವತ್ಪುಣ್ಯಕಾಲ ಮುಂತಾದ ಸಮಯಗಳಲ್ಲಿ ಈ ಶಿವಲಿಂಗ ಪೂಜೆಯು ಮಾಡಲ್ಪಡಬೇಕೆಂದು ನಿನಗೆ ಒತ್ತಿ ಹೇಳುತ್ತೇನೆ. ಈ ಶಂಭುವಿನ ಪೂಜೆಯೇ ಅತ್ಯಂತ ಶ್ರೇಷ್ಠವಾದುದು ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಈ ಶಂಭುವಿನ ಪೂಜೆಗೆ ಸಮಾನವಾದ ಪುಣ್ಯವು ಬೇರೊಂದು ಇಲ್ಲ. ಅಯ್ಯ ಜೈಗಿಷವ್ಯನೆ, ಹೆಚ್ಚುಮಾತಿನಿಂದೇನು? ಈ ಶಿವಲಿಂಗಪೂಜೆಯಿಂದಲೇ ಭೋಗ ಮೋಕ್ಷಗಳೆರಡೂ ಸಿದ್ಧಿಸುವುವೆಂದು ತಿಳಿ. ॥೬೬-೬೭-೬೮-೬೯॥

ಕುದುರೆ, ಆನೆ, ರಥಾದಿವಾಹನಗಳು ಮುಂತಾದವುಗಳು ಉನ್ನತವಾದ ಶಿವಲಿಂಗವನ್ನು ಪೂಜೆಮಾಡುವವನ ಮನೆಯಲ್ಲಿ ಗುಂಪುಗುಂಪಾಗಿ ನೆಲಸುವುವು. ಧನ, ಧಾನ್ಯ, ಶ್ರೇಷ್ಠವಾದ ರತ್ನಗಳು, ಬಟ್ಟೆ, ಭೋಗ, ಅನ್ನ, ಸಿದ್ಧಿಗಳು, ಮನೆ, ಉಪ್ಪರಿಗೆಗಳ ಸಮೂಹ, ಪರಾಕ್ರಮ ಎಲ್ಲಾ ಕಲೆಗಳಲ್ಲೂ ದಕ್ಷತೆ, ಮಕ್ಕಳು ಮುಂತಾದ ಫಲ

ಪುನಸ್ತಥಾಂತೇ ಚ ಶಿವಪ್ರಸಾದಾ
ನ್ಮುಕ್ತಿಂ ಚ ಸಾಯುಜ್ಯಪದಂ ಧ್ರುವಂ ಹಿ ॥೭೧॥

ಇತಿ ಶ್ರೀ ಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಶ್ರೀ ಶಿವಪೂಜಾಕ್ರಮ ವರ್ಣನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

ಗಳನ್ನು ಶಿವನ ಅನುಗ್ರಹದಿಂದಲೇ ಪಡೆಯುಬೇಕು. ಇಷ್ಟೂ ಅಲ್ಲದೇ ಕೊನೆಯಲ್ಲಿ ಆ ಪರಶಿವನ ಅನುಗ್ರಹದಿಂದಲೇ ನಿಶ್ಚಯವಾಗಿಯೂ ಸಾಯುಜ್ಯಪದಪ್ರಾಪ್ತಿರೂಪ ವಾದ ಮೋಕ್ಷವನ್ನೂ ಭಕ್ತನು ಪಡೆಯುತ್ತಾನೆಂದು ಕುಮಾರಸ್ವಾಮಿಯು ಜೈಗೀಷವ್ಯ ನಿಗೆ ಹೇಳಿದನು. ॥೭೦-೭೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ಶ್ರೀಶಿವಪೂಜಾಕ್ರಮದ ವರ್ಣನೆಯೆಂಬ ನಲವತ್ತಾರನೆಯಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಸಪ್ತಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಜೈಗೀಷವ್ಯ ಶೃಣುಷ್ವಾದ್ಯ ಸಂವಾದಂ ಪರಮೇಶಯೋಃ ।
ಕದಾಚಿದ್ವಿಹಸಂತೀ ಸಾ ದೇವ್ಯಪೃಚ್ಛತ ಶಂಕರಂ ॥೧॥

॥ ಶ್ರೀದೇವ್ಯುವಾಚ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ವೇದಾಂತೇ ನಿರ್ಗುಣೋ ದೇವಃ ಕಥಿತಸ್ತ್ವಂ ಮಹೇಶ್ವರ ॥೨॥

ತ್ವಲ್ಲಿಂಗಂ ನಿರ್ಗುಣಂ ಸಾಕ್ಷಾತ್ಪೂಜಿತಂ ಮುಕ್ತಿದಾಯಕಂ ।
ಅಮೂರ್ತಸ್ಯಾಪಿ ಮೂರ್ತಿತ್ವಂ ಕಥಂ ದೇವ ಮಹೇಶ್ವರ ॥೩॥

---

## ನಲವತ್ತೇಳನೆಯ ಅಧ್ಯಾಯವು

ಅಯ್ಯ ಜೈಗೀಷವ್ಯನೆ, ಈಗ ಪಾರ್ವತೀಪರಮೇಶ್ವರರ ಸಂವಾದರೂಪದಲ್ಲಿರುವ ಬೇರೊಂದು ವಿಷಯವನ್ನು ಹೇಳುವೆನು ಕೇಳು. ಒಂದುದಿವಸ ದೇವಿಯು ಸಂತೋಷದಿಂದ ನಗುತ್ತಾ ಶಂಕರನನ್ನು ಕುರಿತು ಹೀಗೆ ಪ್ರಶ್ನೆಮಾಡಿದಳು. ದೇವಾದಿದೇವನಾದ ಮಹೇಶ್ವರನೆ, ದಯಾಸಮುದ್ರನಾದ ಶಂಕರನೆ, ಮಹೇಶ್ವರನಾದ ನೀನು ವೇದಾಂತದಲ್ಲಿ ಗುಣರಹಿತನೆಂದು ಹೇಳಲ್ಪಟ್ಟಿರುವೆಯಲ್ಲವೆ ? ಅಂತಹ ನಿರ್ಗುಣವಾದ ನಿನ್ನ ಲಿಂಗವನ್ನು ಹೇಗೆ ಪೂಜಿಸಿದರೆ ಮೋಕ್ಷಪ್ರಾಪ್ತಿಯಾಗುವುದು ? ಮಹೇಶ್ವರದೇವನೆ, ಮೂರ್ತವಲ್ಲದ ನಿನಗೆ ಆಕೃತಿಯು ಹೇಗೆ ತಾನೆ ಉಂಟಾಯಿತು. ॥೧-೨-೩॥

॥ ಶ್ರೀಸ್ಕಂದ ಉವಾಚ ॥

ಇತಿ ದೇವಸ್ತಯಾ ದೇವ್ಯಾ ಪೃಷ್ಟಸ್ತುಷ್ಟ ಉವಾಚ ತಾಂ।
ರಹಸ್ಯಂ ಗೋಪನೀಯಂ ತೇ ನಾಖ್ಯೇಯಂ ಯಸ್ಯ ಕಸ್ಯಚಿತ್ ॥೪॥

॥ ಶ್ರೀಶಿವ ಉವಾಚ ॥

ಶೃಣುಷ್ವ ಗಿರಿಜೇ ಧನ್ಯಂ ಮೂರ್ತೀನಾಮುದ್ಭವಂ ಮಮ।
ಅಮೂರ್ತಸ್ಯಾಪಿ ಮೇ ಮೂರ್ತಿಃ ಕಲ್ಪಿತಾ ಲೋಕಸೇವನೇ ॥೫॥

ಲಿಂಗಂ ಮೇ ನಿರ್ಗುಣಂ ಸಾಕ್ಷಾತ್ಪರಮಾನಂದದಾಯಕಂ।
ಸಕೃತ್ಪೂಜಾಕೃತಾಂ ಪುಂಸಾಂ ಉತ್ಸವಾರ್ಥೇ ಶಿವಾಗಮೈಃ ॥೬॥

ಸದ್ಯೋಜಾತೋದ್ಭವಾಃ ಪಂಚ ಪಂಚ ತತ್ಪುರುಷೋದ್ಭವಾಃ।
ಅಘೋರಸಂಭವಾಃ ಪಂಚ ವಾಮದೇವಭವಾಃ ಶಿವೇ ॥೭॥

---

ಅಯ್ಯ ಜೈಗೀಷವ್ಯನೆ, ಈ ರೀತಿ ದೇವಿಯಿಂದ ಪ್ರಶ್ನಿಸಲ್ಪಟ್ಟು ಸಂತುಷ್ಟನಾದ ಪರಮೇಶ್ವರನು, ದೇವಿ, ಈ ನಿನ್ನ ಪ್ರಶ್ನೆಯು ಬಹಳ ರಹಸ್ಯವಾದುದು. ಇದನ್ನು ಸಿಕ್ಕಿದವರಿಗೆಲ್ಲಾ ಹೇಳದೇ ಗುಟ್ಟಾಗಿ ಕಾಪಾಡಬೇಕು. ಆದರೂ ನಿನ್ನ ಮೇಲಿನ ಅಭಿಮಾನದಿಂದ ಈಗ ನಾನು ತಿಳಿಯಪಡಿಸುವೆನು, ಕೇಳು. ॥೪॥

ಎಲೌ ಗಿರಿರಾಜಕುಮಾರಿಯೇ, ಅತ್ಯಂತ ರಹಸ್ಯವೂ, ಪವಿತ್ರವೂ ಆದ ಈ ನನ್ನ ಮೂರ್ತಿಗಳ ಉತ್ಪತ್ತಿಯ ಕಥೆಯನ್ನು ಕೇಳು, ನಾನು ನಿಜವಾಗಿಯೂ ಆಕಾರ ರಹಿತನಾದವನು. ನನ್ನ ಈ ಮೂರ್ತಿಗಳು ಲೋಕದಲ್ಲಿರುವ ಜನಗಳ ಸೇವಾದೃಷ್ಟಿಯಿಂದ ಔಪಾಧಿಕವಾಗಿ ಕಲ್ಪಿತವಾದುವೆಂದು ತಿಳಿ. ನಿರ್ಗುಣವಾದರೂ ಈ ನನ್ನ ಶಿವಲಿಂಗವು ಒಂದುಬಾರಿ ಪೂಜೆಮಾಡಿದ ಪುರುಷರಿಗೆ ಸಾಕ್ಷಾತ್ಪರಮಾನಂದವನ್ನು ಒದಗಿಸುವ ಶಕ್ತಿಯುಳ್ಳದ್ದಾಗಿದೆ. ದೇವಿಯೇ, ಉತ್ಸವಾದಿಗಳಿಗಾಗಿ ಶೈವಾಗಮಗಳಲ್ಲಿ ಈ ರೀತಿ ನನ್ನ ಮೂರ್ತಿಗಳ ಉತ್ಪತ್ತಿಯು ವಿಸ್ತಾರವಾಗಿ ಹೇಳಲ್ಪಟ್ಟಿದೆ. ಸದ್ಯೋಜಾತ, ತತ್ಪುರುಷ, ಅಘೋರ, ವಾಮದೇವ ಮತ್ತು ಈಶಾನರೂಪವಾದ ನನ್ನ ಐದು ಮುಖಗಳಿಂದ ಕ್ರಮವಾಗಿ ಒಂದೊಂದರಿಂದಲೂ ಐದೈದು ಮೂರ್ತಿಗಳು ಉತ್ಪನ್ನವಾದವು. ಈಗ ಅವುಗಳ ಹೆಸರನ್ನು ಕ್ರಮವಾಗಿ ಹೇಳುತ್ತೇನೆ ಕೇಳು. ॥೫-೬-೭॥

ಈಶಾನಸಂಭವಾಃ ಪಂಚ ತೇಷಾಂ ನಾಮಾನಿ ಮೇ ಶೃಣು ।
ಮಹಾಲಿಂಗೋದ್ಭವಂ ಶ್ರೀಮದ್ದಕ್ಷಿಣಾಮೂರ್ತಿಮೀಶ್ವರಿ ॥೮॥

ಏಕಪಾದಂ ಸುಖಾಸೀನಂ ವಿಘ್ನೇಶಾನುಗ್ರಹೇ ರತಂ ।
ಸದ್ಯೋದ್ಭವಾ ಮೂರ್ತಯೋಽಮೀ ತತ್ಪುರುಷಭವಾಃ ಶೃಣು ॥೯॥

ಸೋಮಾಸ್ಕಂದಂ ವೃಷಾರೂಢಂ ಪುರತ್ರಯವಿದಾರಣಂ ।
ಚಂಡೀಶ್ವರಾನುಗ್ರಹದಂ ಕಾಮಘ್ನಂ ಕಾಲದಾರಣಂ ॥೧೦॥

ಅಘೋರಸಂಭವಂ ದೇವಿ ಕಾಲದಾರಣತಃ ಪ್ರಿಯೇ ।
ಗಜಸಂಹರಣಂ ವೀರಭದ್ರಂ ಭಿಕ್ಷಾಟನೇಶ್ವರಂ ॥೧೧॥

ಕಿರಾತರೂಪಂ ಕಂಕಾಲಂ ಕಲ್ಯಾಣಕೃತಿಸುಂದರಂ ।
ವಾಮದೇವಭವಾಃ ಪಂಚಮೂರ್ತಯೋಽಮೀ ಗಿರೀಂದ್ರಜೇ ॥೧೨॥

---

ಮಹಾಲಿಂಗೋದ್ಭವಮೂರ್ತಿ, ಶ್ರೀಮದ್ದಕ್ಷಿಣಾಮೂರ್ತಿ, ಏಕಪಾದೇಶ್ವರ, ಸುಖಾಸೀನೇಶ್ವರ, ಅನುಗ್ರಹಪ್ರದಮೂರ್ತಿ, ಈ ಐದು ಶಿವಮೂರ್ತಿಗಳೂ ಸದ್ಯೋಜಾತಮುಖದಿಂದ ಹುಟ್ಟಿದವುಗಳು. ಇದೇ ರೀತಿ ತತ್ಪುರುಷಮುಖದಿಂದ ಜನಿತವಾದ ಮೂರ್ತಿಗಳ ಹೆಸರನ್ನು ಹೇಳುವೆನು ಕೇಳು. ॥೮-೯॥

ಸೋಮಶೇಖರನಾದ ವೃಷಭವನ್ನೇರಿದ ಮೂರ್ತಿ, ತ್ರಿಪುರರನ್ನು ಧ್ವಂಸ ಮಾಡಿದ ಮೂರ್ತಿ, ಚಂಡೀಶ್ವರನಿಗೆ ಅನುಗ್ರಹಮಾಡಿದ ಮೂರ್ತಿ, ಮನ್ಮಥ ಧ್ವಂಸಕ ಮೂರ್ತಿ ಮತ್ತು ಯಮಾಂತಕ ಮೂರ್ತಿ ಎಂಬುದಾಗಿ ತತ್ಪುರುಷ ಮುಖದಿಂದ ಐದು ಮೂರ್ತಿಗಳು ಉತ್ಪನ್ನವಾದವು. ಯಮನನ್ನು ನಿಗ್ರಹಿಸಿದ ಅಘೋರರೂಪವಾದ ಮುಖದಿಂದ ಗಜಾಸುರಧ್ವಂಸಮಾಡಿದ ಮೂರ್ತಿಯೂ ವೀರಭದ್ರರೂಪಿಯೂ, ಭಿಕ್ಷಾಟನೇಶ್ವರ ಮೂರ್ತಿಯೂ, ಬೇಡರ ರೂಪವನ್ನು ಧರಿಸಿದ ಮೂರ್ತಿಯೂ, ಕಂಕಾಲಮೂರ್ತಿಯೂ, ಕಲ್ಯಾಣಕೃತಿ ಸುಂದರಮೂರ್ತಿಯೂ, ಲೋಕಕಲ್ಯಾಣಕ್ಕಾಗಿ ಉತ್ಪನ್ನವಾದವು. ॥೧೦-೧೧॥

ಅದೇ ರೀತಿ ವಾಮದೇವನೆಂಬ ನನ್ನ ಮುಖದಿಂದ ವಿಷ್ಣುವಿಗೆ ಚಕ್ರವನ್ನು ಕೊಟ್ಟ ಚಕ್ರಪ್ರದಾನಮೂರ್ತಿಯೂ, ದೇವಕಾಂತಾರಮೂರ್ತಿಯೂ, ಗೌರೀಸಮೇತ

ವಿಷ್ಣುಚಕ್ರಪ್ರದಾತಾರಂ ದೇವಕಾಂತಾರವಿಗ್ರಹಂ ।
ಗೌರೀಸಹಾಯಂ ವೈಕುಂಠನೇತ್ರಾರ್ಚ್ಯಂ ಚಂದ್ರಶೇಖರಂ ॥೧೩॥

ಈಶಾನವಕ್ತ್ರಸಂಭೂತಾ ಮೂರ್ತಯೋಽನೀ ಮನ್ಯೈವ ಹಿ ।
ಜಲಂಧರಾರ್ದಕಂ ನಾಟ್ಯಕೋವಿದಂ ಕಾಲಭೈರವಂ ॥೧೪॥

ಶರಭಂ ವಿದ್ಧಿ ಗೋವಿಂದಜನಕಂ ನಾಗಭೂಷಣಂ ।
ಅಂಧಕಾರಿಂ ವಿರೂಪಾಕ್ಷಂ ವಿರಾಡ್ರೂಪಂ ದಿಗಂಬರಂ ॥೧೫॥

ಕೈಲಾಸನಾಥಂ ಕಲ್ಪಾಂತರುದ್ರಂ ಕರ್ಪೂರಸುಂದರಂ ।
ಕಾಲಾಗ್ನಿರುದ್ರಂ ಶೂಲಾಸಿಧರಂ ವ್ಯಾಘ್ರಾಜಿನಾಂಬರಂ ॥೧೬॥

ಪಂಚವಕ್ತ್ರಂ ವೃಂದವಕ್ತ್ರರೂಪಿಣಂ ಮುನಿರೂಪಿಣಂ ।
ಷೋಡಶಾಬ್ದಾಕೃತಿಃ ಸಾಕ್ಷಾದ್ಘೋರಾಗ್ನಿವಿನಿವಾರಣಂ ॥೧೭॥

ಜ್ವರಾರ್ತಿಶಮನಂ ವಿಷ್ಣುವಲ್ಲಭಂ ಭಕ್ತವತ್ಸಲಂ ।
ವಿಧಿಮಸ್ತಕಸಂಹರ್ತೃ ಪಾರ್ವತೀಪ್ರಣಯಾತ್ಮಕಂ ॥೧೮॥

---

ಮೂರ್ತಿಯೂ, ವೈಕುಂಠನೇತ್ರಾರ್ಚಿತಮೂರ್ತಿಯೂ ಮತ್ತು ಚಂದ್ರಶೇಖರ ಮೂರ್ತಿಯೂ ಉತ್ಪನ್ನವಾದುವು. ॥೧೨-೧೩॥

ಇನ್ನು ಐದನೆಯದಾದ ಈಶಾನಸಂಜ್ಞಕವಾದ ನನ್ನ ಮುಖದಿಂದ ಜನಿಸಿದ ಐದು ಮೂರ್ತಿಗಳ ಸ್ವರೂಪವನ್ನು ಹೇಳುವೆನು ಕೇಳು ; ಜಲಂಧರನನ್ನು ಸಂಹರಿಸಿದ ಮೂರ್ತಿಯೂ, ನಾಟ್ಯನಿಪುಣನೆನಿಸಿದ ನಟರಾಜಮೂರ್ತಿಯೂ, ಕಾಲಭೈರವ ಮೂರ್ತಿಯೂ, ವಿಷ್ಣುಜನಕಮೂರ್ತಿಯೂ, ಸರ್ಪಭೂಷಣಮೂರ್ತಿಯೂ ಇವು ಈಶಾನಮುಖಜನ್ಯವಾದುವುಗಳು. ಇವಲ್ಲದೆ ದುಷ್ಟಶಿಕ್ಷಣ, ಶಿಷ್ಟರಕ್ಷಣಕಾರ್ಯಕ್ಕೆ ಕಾಲಾನುಗುಣವಾಗಿ ಹುಟ್ಟಿದ ಅಂಧಕಾಸುರಸೂದನ, ವಿರೂಪಾಕ್ಷಮೂರ್ತಿ, ವಿರಾಡ್ರೂಪಮೂರ್ತಿ, ದಿಗಂಬರಮೂರ್ತಿ, ಕೈಲಾಸನಾಥಮೂರ್ತಿ, ಹಾಗೆಯೇ ಕಲ್ಪಾಂತ ರುದ್ರ, ಕರ್ಪೂರಸುಂದರ, ಕಾಲಾಗ್ನಿರುದ್ರ, ಶೂಲಖಡ್ಗಪಾಣಿ, ಹುಲಿಯಚರ್ಮವನ್ನು ಧರಿಸಿರುವುದು, ಐದು ಮುಖಗಳುಳ್ಳದು, ಮುನಿರೂಪವಾದುದು, ಹದಿನಾರು ವಯಸ್ಸಿನ ಆಕೃತಿ ಹೊಂದಿರುವುದು, ಭಯಂಕರವಾದ ಅಗ್ನಿಯನ್ನು ನಿವಾರಿಸಿದುದು, ಜ್ವರದ ಬಾಧೆಯನ್ನು ಹೋಗಲಾಡಿಸಿದುದು, ವಿಷ್ಣುಪ್ರಿಯನೆನಿಸಿದುದೂ,

ಗಂಗಾಧರಂ ಚಂದ್ರಧರಂ ಮೃಗಹಸ್ತಂ ಚತುರ್ಭುಜಂ ।
ಭೂತೇಶ್ವರಂ ಕೋಟಿರುದ್ರಂ ಮೂರ್ತಿಶಕ್ತಿಲಸತ್ಕರಂ ॥೧೯॥

ಪಂಚಬ್ರಹ್ಮೋದ್ಭವಾಃ ಸರ್ವಾಃ ಕಾಮದಾಃ ಶಾಂತವಿಗ್ರಹಾಃ ।
ಏವಂ ಧ್ಯಾಯಂತಿ ಯೇ ಮೂರ್ತೀಸ್ತೇಷಾಂ ಜ್ಞಾನಂ ಭವೇಚ್ಛಿವೇ ॥೨೦॥

ತೇಭ್ಯೋ ವಿಶಿಷ್ಟಾ ದೇವೇಶಿ ಮೂರ್ತಯಃ ಸ್ಯುಸ್ತ್ರಯೋ ಮಮ ।
ಜ್ಞಾನದಾ ದಕ್ಷಿಣಾ ಮೂರ್ತಿಃ ಸಚ್ಚಿದ್ರೂಪಾ ನಿರಾಮಯಾ ॥ ॥೨೧॥

ಮುನೀನಾಂ ಜ್ಞಾನದಾತ್ರೀ ಚ ಸದೈವೋಪನಿಷಚ್ಛ್ರುತಾ ।
ಕೈವಲ್ಯಶ್ರುತಿಬೋಧ್ಯಾ ಚ ಶ್ರೀಮೂರ್ತಿರ್ಮಮ ಚೇಶ್ವರಿ ॥೨೨॥

---

ಭಕ್ತವತ್ಸಲರೂಪಿಯಾದುದು, ಬ್ರಹ್ಮನ ಶಿರಸ್ಸನ್ನು ಕತ್ತರಿಸಿದುದೂ, ಪಾರ್ವತೀ ದೇವಿಯ ಪ್ರೀತಿಗೆ ಪಾತ್ರವಾದುದು, ಗಂಗಾಧರನಾದುದೂ, ಚಂದ್ರಶಿರಸ್ಕನೆನಿಸಿದುದೂ, ಜಿಂಕೆಯನ್ನು ಕೈಯಲ್ಲಿ ಹಿಡಿದುದೂ, ನಾಲ್ಕು ತೋಳ್ಗಳುಳ್ಳದೂ, ಭೂತೇಶ್ವರ, ಕೋಟಿರುದ್ರ ಮೂರ್ತಿ, ಶಕ್ತ್ಯಾಯುಧದಿಂದ ಶೋಭಿಸುತ್ತಿರುವ ಕೈಯುಳ್ಳದೂ, ಈ ರೀತಿಯಾದ ಅನೇಕ ಭಿನ್ನಭಿನ್ನ ಮೂರ್ತಿಗಳು ಜಗತ್ತಿಗೆ ನನ್ನಿಂದ ಗೋಚರವಾದವು. ॥॥೧೪-೧೫-೧೬-೧೭-೧೮-೧೯॥

ಪಾರ್ವತಿಯೇ ಕೇಳು, ಪಂಚಬ್ರಹ್ಮರೂಪವಾದ ಈ ನನ್ನ ಐದುಮುಖಗಳಿಂದ ಜನಿಸಿ ಇಷ್ಟಾರ್ಥಪ್ರದಗಳಾದ ಈ ಮೂರ್ತಿಗಳೆಲ್ಲವೂ ಶಾಂತಮೂರ್ತಿಗಳು. ಹೀಗೆ ನನ್ನ ಮೂರ್ತಿಗಳನ್ನು ಸರ್ವದಾ ಧ್ಯಾನಮಾಡುವವರಿಗೆ ಸುಜ್ಞಾನೋದಯವಾಗುವುದು. ಇಷ್ಟು ಮೂರ್ತಿಗಳಿಗಿಂತಲೂ ಭಿನ್ನವಾಗಿ, ಅತ್ಯಂತ ಶ್ರೇಷ್ಠವೆನಿಸಿರುವ ನನ್ನ ಮೂರು ಮೂರ್ತಿಗಳಿರುವುವು. ಅದರಲ್ಲಿ ಜ್ಞಾನಪ್ರದವಾದ ದಕ್ಷಿಣಾಮೂರ್ತಿಯು ಸಚ್ಚಿತ್ಸ್ವರೂಪವಾಗಿ ದುಃಖರಹಿತವೆನಿಸಿರುವುದು. ಇದು ಯಾವಾಗಲೂ ಉಪನಿಷತ್ತುಗಳಲ್ಲಿ ಪ್ರಖ್ಯಾತವಾಗಿ ಮುನಿಗಳಿಗೂ ಜ್ಞಾನಪ್ರದವಾದ ಮೂರ್ತಿಯೆನಿಸಿರುವುದು. ಎರಡನೆಯದಾದ ಕೈವಲ್ಯಶ್ರುತಿಯಲ್ಲಿ ಹೇಳಿರುವ ಶ್ರೀಶಿವಮೂರ್ತಿಯೂ, ಮೂರನೆಯದಾಗಿ ಪಾರ್ವತೀ ಸಹಚಾರಿಯಾಗಿ ಮೂರುಕಣ್ಣು, ವಿಷಕಂಠಗಳಿಂದ ವಿರಾಜಿಸುವ ಶ್ರೀರುದ್ರಮೂರ್ತಿಯೂ, ಕ್ಷಿಪ್ರದಲ್ಲಿಯೇ ಮೋಕ್ಷಪ್ರದಗಳೆಂದು ಪ್ರಸಿದ್ಧಿ ಪಡೆದಿರುವುವು. ॥೨೦-೨೧-೨೨॥

ಉಮಾಸಹಾಯಾ ತ್ರ್ಯಕ್ಷಾ ಚ ನೀಲಕಂಠಾವಿಮುಕ್ತಿದಾ ।
ಶ್ರೀರುದ್ರಕಥಿತಾ ಚೇಯಂ ಸಭಾಪತಿರಿತಿ ಸ್ಥಿರಾ ॥೨೩॥

ಆಸಾಂ ಮೂರ್ತಿಷು ಚೋತ್ಕೃಷ್ಟಾ ಕೈವಲ್ಯಶ್ರುತಿದರ್ಶಿತಾ ।
ಮೂರ್ತಿಃ ಪರತರಾ ಶಂಭೋಸ್ತನ್ಮೂರ್ತಸ್ಯಾಪ್ಯಸಂಗಿನಃ ॥೨೪॥

ಕಲ್ಪಯಂತಿ ಯಥಾಜೋಷಂ ಸ್ವಾಧಿಕಾರಾನುರೂಪತಃ ।
ಧ್ಯಾಯೀತೇಶಾನಮಿತ್ಯಾದ್ಯಾಃ ಶ್ರುತಯೋ ಜ್ಞಾನಕರ್ಮಣಿ ॥೨೫॥

ಪ್ರವೃತ್ತಾಸ್ತಾ ಮಹಾದೇವಿ ಧ್ಯಾನಮೀಶೇ ವಿಮುಕ್ತಿದಂ ।
ವಿಷ್ಣುಬ್ರಹ್ಮೇಂದ್ರರುದ್ರಾಣಾಂ ಜನನೀ ಯಾ ಪರಾಶಿವಾ ॥೨೬॥

ಸೈವೋಮಾ ಪ್ರೋಚ್ಯತೇ ವೇದೈಸ್ತಯಾ ಯುಕ್ತೋ ಮಹೇಶ್ವರಃ ।
ಅಸಂಗೋಽಪಿ ಪರಾನಂದಃ ಸಚ್ಚಿದ್ಧರ್ಮಸುಖಾದ್ವಯಃ ॥೨೭॥

---

ಮಂತ್ರಗಳಲ್ಲಿ ಅತ್ಯಂತ ಶ್ರೇಷ್ಠವೆನಿಸಿದ ಶ್ರೀರುದ್ರದಲ್ಲಿ ಹೇಳಲ್ಪಟ್ಟಿರುವ ಶಾಶ್ವತವಾದ ಸಭಾಪತಿಯೆಂಬ ಸಂಜ್ಞೆಯುಳ್ಳಮೂರ್ತಿಯು, ಹಿಂದೆ ಹೇಳಿದ ಮೂರು ಮೂರ್ತಿಗಳಲ್ಲಿಯೂ ಶ್ರೇಷ್ಠವಾದುದೆಂದು ಕೈವಲ್ಯಶ್ರುತಿಯಲ್ಲಿ ಉಕ್ತವಾಗಿದೆ. ಅದಕ್ಕಾಗಿಯೇ ಆ ಮೂರ್ತಿಯು ಪರಾತ್ಪರವೂ ಉತ್ಕೃಷ್ಟವೂ ಎನಿಸಿಕೊಂಡಿದೆ. ಸ್ವಯಂ ಆಕಾರರಹಿತವಾದರೂ, ಲೋಕಾನುಗ್ರಹಕ್ಕಾಗಿ ಆಕೃತಿವೆತ್ತಿರುವ ಈ ಮೂರ್ತಿಗಳು ತನ್ನ ಇಚ್ಛೆಗೆ ಅನುಸಾರವಾಗಿ ಬೇರೆ ಬೇರೆ ಆಕಾರಗಳನ್ನು ಧರಿಸಿ ತನ್ನ ಭಕ್ತರನ್ನುದ್ಧರಿಸುತ್ತವೆ. ॥೨೩-೨೪॥

‘ಧ್ಯಾಯೀತೇಶಾನಂ’ ಮುಂತಾದ ಶ್ರುತಿಗಳು ಶಿವಜ್ಞಾನವಿಷಯಕವಾದ ಕರ್ಮದಲ್ಲಿ ಪ್ರವೃತ್ತವಾಗಿವೆ. ಮತ್ತು ಶಿವವಿಷಯಕವಾದ ಧ್ಯಾನವೇ ಮುಕ್ತಿಪ್ರದವೆಂದೂ ಹೇಳಲ್ಪಟ್ಟಿದೆ. ಹಾಗೆಯೇ ವಿಷ್ಣು, ಬ್ರಹ್ಮ, ಇಂದ್ರ ಮತ್ತು ರುದ್ರರಿಗೆ ಜನನಿಯಾಗಿರುವ ಪರಶಿವೆಯೇ ‘ಉಮಾ’ ಎಂಬುದಾಗಿ ವೇದಗಳಲ್ಲಿ ಹೇಳಲ್ಪಡುವಳು. ಆ ಉಮೆಯಿಂದೊಡಗೂಡಿದವನೇ ಮಹೇಶ್ವರನು. ಅಂತಹ ಮಹೇಶ್ವರನು ಸಂಗವಿವರ್ಜಿತನು, ಆನಂದರೂಪಿಯು, ಸತ್ಯ, ಜ್ಞಾನ, ಸುಖ ಇವುಗಳ ಸ್ವರೂಪನು. ॥೨೫-೨೬-೨೭॥

ಮಾಯಾ ಸಾ ಪ್ರಕೃತಿರ್ಜ್ಞೇಯಾ ಸ ಮಾಯೀ ಪರಮೇಶ್ವರಃ ।
ತಸ್ಯಾವಯವಭೂತಂ ಯಜ್ಜಗದೇತತ್ಪ್ರಕಾಶ್ಯತೇ ॥೨೮॥

ನೈವ ನಾನಾಸ್ತಿ ಭೂತೇಭ್ಯೋಽಪ್ಯತಿರಿಕ್ತಂ ಜಗನ್ಮುನೇ ।
ತಪಸ್ಯೈವ ಮುನೇ ಜ್ಞಾತ್ವಾ ನಿಷ್ಕ್ರಿಯಂ ಶಾಂತಮವ್ಯಯಂ ॥೨೯॥

ಅಗಾಧರಸರೂಪಾದಿಮಸ್ಪರ್ಶಂ ತನ್ಮನೋಽತಿಗಂ ।
ಧ್ಯಾನಧ್ಯೇಯಾದಿರಹಿತಂ ನಿಷ್ಕಲಂ ತತ್ತುರೀಯಕಂ ॥೩೦॥

ಮನೋಧರ್ಮೋ ಧ್ಯಾನವಿಧಿಸ್ತನ್ಮನೋತಿಗಮಂ ಮುನೇ ।
ತತ್ತಸ್ಮಾತ್ಸಕಲಂ ಶಂಭುಂ ನಿಷ್ಕಲಂ ಸಂಪ್ರಪೂಜಯೇತ್ ॥೩೧॥

ಹೃದಾಕಾಶಂ ಭಾಸಮಾನಂ ನೀವಾರಶಕಲಾಕೃತಿ ।
ಜ್ವಲಂತಮನಿಶಂ ವಹ್ನಿಂ ತಚ್ಛಿಖಾಯಾಂ ಮಹೇಶ್ವರಂ ॥೩೨॥

---

ಮಾಯಾರೂಪಿಣಿಯೆನಿಸಿದ ಆ ಉಮೆಯೇ ಪ್ರಕೃತಿಯೆಂದು ತಿಳಿಯಬೇಕು. ಅವಳಿಂದ (ಮಾಯೆಯಿಂದ) ಯುಕ್ತನಾದಂತೆ ಕಾಣುವವನೇ ಮಾಯೀ ಎನಿಸಿದ ಪರಮೇಶ್ವರನು. ಅವನ ಅವಯವಭೂತವಾಗಿಯೇ ಈ ಪ್ರಪಂಚವು ಪ್ರಕಾಶಿಸಲ್ಪಡುವುದು. ಅಯ್ಯ ಮುನಿಯೇ, ಪ್ರಾಣಿಗಳು ಅಸಂಖ್ಯಾಕವಾಗಿದ್ದರೂ, ಅವುಗಳ ಮೂಲಭೂತನಾದ ಪರಶಿವನು ಒಬ್ಬನೆಂದೇ ತಿಳಿ. ಅವನಿಗಿಂತ ಕ್ರಿಯಾರಹಿತನೂ, ಶಾಂತನೂ, ದಾಂತನೂ, ಅಚ್ಯುತನೂ, ಅಪರಿಮಿತವಾದ ರಸ, ರೂಪ ಮುಂತಾದವುಗಳುಳ್ಳವನೂ, ಸ್ಪರ್ಶಶೂನ್ಯನೂ, ಮನಸ್ಸಿಗೂ ಗೋಚರನಾಗದವನೂ, ಧ್ಯಾನ, ಧ್ಯೇಯಾದಿಗಳಿ (ತನಗಿಂತಲೂ ಉತ್ತಮವಸ್ತುವಿಲ್ಲವಾದ್ದರಿಂದ) ಲ್ಲದವನೂ, ಕಲಂಕರಹಿತನೂ ಆದ ಆ ಮಹೇಶ್ವರನನ್ನು ಪರಾತ್ಪರನೆಂದು ತಿಳಿಯಬೇಕು. ಇದೇ ನಿಜವಾದ ತಪಸ್ಸು. ಧ್ಯಾನವಿಧಿಯು ಮನಸ್ಸಿನ ಧರ್ಮವಾಗಿರುವುದು. ಆ ಪರಮೇಶ್ವರನು ಈ ಮನಸ್ಸಿಗೂ ಗೋಚರನಾಗದವನು; ಆದ್ದರಿಂದಲೇ ಸಕಲ ಚರಾಚರ ಜಗದ್ರೂಪಿಯಾಗಿ ಕಲಂಕರಹಿತನಾಗಿರುವ ಶಂಭುವನ್ನು ಈರೀತಿ ಧ್ಯಾನಮಾಡಬೇಕು. ॥೨೮-೨೯-೩೦-೩೧॥

ಹೃದಯವೆಂಬ ಆಕಾಶದಲ್ಲಿ ನವಣೆಯ ಧಾನ್ಯದ ಆಕೃತಿಯಂತೆ ಪ್ರಕಾಶಿಸುತ್ತಾ ಇರುವವನೂ, ಸದಾ ಉರಿಯುತ್ತಿರುವ ಬೆಂಕಿಯ ಶಿಖೆಯಲ್ಲಿ ಶೋಭಿಸು

ಆಕಾಶೇ ನಿರ್ಮಲೇ ಶುದ್ಧೇ ಭಾಸಮಾನಂ ಸುಶೀತಲಂ ।
ಸೋಮಮಂಡಲಮಾಪೂರ್ಣಮಚಲಂ ದೃಷ್ಟಿಗೋಚರಂ ॥ ೩೩॥

ಧ್ಯಾತ್ವಾ ಮಧ್ಯೇ ಮಹಾದೇವಮುಮಯಾ ಸಹಿತಂ ಶಿವಂ ।
ಶುದ್ಧಸ್ಫಟಿಕಸಂಕಾಶಂ ಚಂದ್ರರೇಖಾವತಂಸಕಂ ॥ ೩೪॥

ತ್ರಿಲೋಚನಂ ಚತುರ್ಬಾಹುಂ ನೀಲಗ್ರೀವಂ ಪರಾತ್ಪರಂ ।
ಧ್ಯಾಯೇನ್ನಿತ್ಯಂ ಧಾರಣಯಾ ಘಟಿಕಾಪಂಚಕಂ ಮುನೇ ॥ ೩೫॥

ಆದಿತ್ಯಮಂಡಲೇ ವಾಪಿ ಸೋಽಹಮಿತ್ಯಪಿ ಸತ್ತಮ ।
ಹಿರಣ್ಮಯಂ ಶ್ಮಶ್ರುಕೇಶಂ ಹಿರಣ್ಮಯನಖಂ ಶಿವಂ ॥ ೩೬॥

ಹಿರಣ್ಯಬಾಹುಂ ವರದಮಂಬಿಕಾಪತಿಮೀಶ್ವರಂ ।
ಧ್ಯಾಯೇನ್ನಿತ್ಯಂ ಸದಾಭ್ಯಸ್ಯ ಸೋಽಹಮಸ್ಮೀತಿ ಭಾವಯೇತ್ ॥ ೩೭॥

---

ತ್ತಿರುವವನೂ, ಪರಿಶುದ್ಧವಾದ ಆಕಾಶದಲ್ಲಿ ಬಹಳ ತಂಪಾಗಿ ಹೊಳೆಯುತ್ತಿರುವವನೂ; ಪೂರ್ಣ ಚಂದ್ರಮಂಡಲರೂಪನೂ, ಚಾಂಚಲ್ಯವಿಲ್ಲದಿರುವವನೂ, ದೃಷ್ಟಿಗೋಚರನೂ ಆದ ಮಹೇಶ್ವರನನ್ನು ಹೃದಯಕಮಲಮಧ್ಯದಲ್ಲಿ ಸ್ಥಾಪಿಸಿ, ಶುದ್ಧವಾದ ಸ್ಫಟಿಕಸಮಾನವಾದ ಕಾಂತಿಯುಕ್ತನಾಗಿ ಚಂದ್ರಶಿರೋಭೂಷಣನೂ, ಮೂರು ಕಣ್ಣು, ನಾಲ್ಕು ತೋಳು, ಕಪ್ಪುಗೊರಳುಗಳಿಂದ ವಿರಾಜಿಸುತ್ತಿರುವವನೂ, ಪರಾತ್ಪರನೂ ಆದ ಮಹಾದೇವನನ್ನು ಉಮೆಯೊಡನೆ ಐದುಗಳಿಗೆಗಳ ಕಾಲ (ಎರಡು ಗಂಟೆಗಳ ಕಾಲ) ನಿತ್ಯವೂ ಹೃದಯದಲ್ಲಿ ನಿಲ್ಲಿಸಿ ಧ್ಯಾನಮಾಡಬೇಕು. ಅಂದರೆ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಬ್ರಹ್ಮಸ್ವರೂಪವನ್ನು ಅನುಸಂಧಾನ ಮಾಡುತ್ತಾ ಪರಬ್ರಹ್ಮಸಾಕ್ಷಾತ್ಕಾರಸಾಧನೆಯಲ್ಲಿ ನಿರತನಾಗಬೇಕು. ॥೩೨-೩೩-೩೪-೩೫॥

ಅಯ್ಯ ಮುನಿಪುಂಗವನೆ! ಮಹೇಶ್ವರನು ಸೂರ್ಯಮಂಡಲಮಧ್ಯವರ್ತಿಯು ಆ ಪರಶಿವನೇ ನಾನೆಂಬರ್ಥವುಳ್ಳ 'ಸೋಹಂ' ಎಂಬ ಜ್ಞಾನವೇ ಪಾರಮಾರ್ಥಿಕವಾದುದು. ಆದರೆ ಉಪಾಧಿವಶದಿಂದ ಸುವರ್ಣರೂಪನೂ, ಗಡ್ಡ ಮತ್ತು ಜಡೆಗಳುಳ್ಳವನೂ, ಸುವರ್ಣಮಯವಾದ ಉಗುರುಳ್ಳವನೂ, ಸುವರ್ಣವರ್ಣದ ತೋಳುಗಳುಳ್ಳವನೂ, ವರಪ್ರದನೂ, ಅಂಬಿಕಾರಮಣನೂ, ಐಶ್ವರ್ಯಪೂರ್ಣನೂ ಆಗಿ

ಸ್ಥಾನೇಷ್ವೇತೇಷು ವಿಪ್ರೇಂದ್ರ ಧ್ಯಾಯೀತ ಪರಮೇಶ್ವರಂ ।
ಶ್ರೀಪರ್ವತಂ ಶಿರಃಸ್ಥಾನಂ ಕೇದಾರಂ ತು ಲಲಾಟಕಂ ॥೩೮॥

ವಾರಾಣಸೀಭ್ರುವೋರ್ಮಧ್ಯೇ ವಿಜ್ಞೇಯಾ ಧ್ಯಾನಕರ್ಮಣಿ ।
ಕುರುಕ್ಷೇತ್ರಂ ಕಂಠಮೇತತ್ಪ್ರಯಾಗಂ ಕುಚಮುಚ್ಯತೇ ॥೩೯॥

ಚಿದಂಬರಂ ತು ಹೃನ್ಮಧ್ಯಮಾಧಾರಃ ಕಮಲಾಲಯಃ ।
ಏಷು ಸ್ಥಾನವರೇಷ್ವೀಶಂ ಭಾವಯೇದ್ದೇಹಗೇಷು ಚ ॥೪೦॥

ಹೃದಯೇ ನೃತ್ಯಮಾನಂ ಮಾಂ ಧ್ಯಾಯೀತ್ಯೈವಂ ತ್ವಯಾ ಸಹ ।
ಆತ್ಮತೀರ್ಥಾಭಿನಿರತೋ ಭೌತಿಕಂ ತೀರ್ಥಮುತ್ಸೃಜೇತ್ ॥೪೧॥

---

ಸಗುಣನೂ ಸಾಕಾರನೂ ಎನಿಸಿರುವ ಶಿವನನ್ನು ನಿತ್ಯವೂ ಧ್ಯಾನಿಸುತ್ತಾ ಅಭ್ಯಾಸ ಕ್ರಮದಿಂದ 'ಸೋಽಹಮಸ್ಮಿ' ಎಂಬ ಭಾವನೆಯನ್ನು ಪಡೆದು ಮುಕ್ತನಾಗ ಬೇಕು. ॥೩೬-೩೭॥

ಧ್ಯಾನಕ್ರಮದಲ್ಲಿ ಇದೂ ಒಂದು ಮಾರ್ಗವೆನಿಸಿದೆ. ಮುಂದೆ ಹೇಳುವ ಕ್ಷೇತ್ರಗಳನ್ನೇ ಪರಮೇಶ್ವರನ ಒಂದೊಂದು ಅವಯವವನ್ನಾಗಿ ಮಾಡಿಕೊಳ್ಳಬೇಕು ; ಹೇಗೆಂದರೆ ಶ್ರೀಶೈಲವು ಪರಶಿವನಿಗೆ ಶಿರಃಸ್ಥಾನೀಯವಾದದ್ದು; ಕೇದಾರಕ್ಷೇತ್ರವು ಲಲಾಟಸ್ಥಾನೀಯವು ; ಕಾಶಿಯು ಹುಬ್ಬುಗಳ ಮಧ್ಯಪ್ರದೇಶಕ್ಕೆ ಸಮವಾದದ್ದೆಂದು ಭಾವಿಸಬೇಕು. ಕುರುಕ್ಷೇತ್ರವು ಕಂಠಪ್ರದೇಶವೆಂದೂ, ಪ್ರಯಾಗವು ಸ್ತನಪ್ರದೇಶ ವೆಂಬುದಾಗಿಯೂ, ಚಿದಂಬರವು ಹೃದಯದ ಮಧ್ಯಭಾಗವೆಂದೂ, ಕಮಲಾಲಯವು ಎಲ್ಲಕ್ಕೂ ಆಧಾರಪ್ರದೇಶವೆಂದೂ ಹೇಳಲ್ಪಟ್ಟಿದೆ. ಪವಿತ್ರಗಳಾದ ಈ ಶಿವಕ್ಷೇತ್ರ ಗಳನ್ನೂ, ಆಯಾ ಕ್ಷೇತ್ರಗಳಲ್ಲಿ ಕಂಡುಬರುವ ಶಿವಲಿಂಗಸ್ವರೂಪವನ್ನೂ ಧ್ಯಾನಿ ಸುತ್ತಾ, ಆಯಾ ಸ್ಥಾನಗಳು ಪರಶಿವನ ಒಂದೊಂದು ಸ್ಥಾನವೆಂದೂ ಆ ಸ್ಥಾನ ಗಳೆಲ್ಲವೂ ತನ್ನ ದೇಹದಲ್ಲಿಯೇ ಇರುವುವೆಂದೂ ಭಾವಿಸಿ ಧ್ಯಾನಿಸಬೇಕು. ಇದೇ ಸೋಹಂಭಾವರೂಪವಾದ ಧ್ಯಾನ. ॥೩೮-೩೯-೪೦॥

ಪಾರ್ವತಿಯೇ ಕೇಳು, ನಿನ್ನೊಡನೆ ನರ್ತನಮಾಡುತ್ತಿರುವ ನಟರಾಜ ಮೂರ್ತಿಯ ಆಕಾರದಲ್ಲಿ ನನ್ನನ್ನು ಧ್ಯಾನಮಾಡುತ್ತಾ ನನ್ನ ಸ್ವರೂಪದಲ್ಲೇ ಭಕ್ತನು ನಿಂತರೆ ಆತ್ಮತೀರ್ಥದಲ್ಲಿ ಆಸಕ್ತನಾದಂತಾಯಿತು. ಅಂತಹವನಿಗೆ ಇತರ

ಅತ್ಯಲ್ಪೋ ಹಿ ಯಥಾ ವಹ್ನಿಃ ಶುಷ್ಕಮಾರ್ದ್ರಂ ಚ ನಾಶಯೇತ್ ।
ಧ್ಯಾನಾಭ್ಯಾಸಸ್ತಥಾಲ್ಪೋಽಪಿ ಮಹತ್ಪಾಪಂ ವ್ಯಪೋಹತಿ ॥೪೨॥

॥ ಈಶ್ವರ ಉವಾಚ ॥

ಧ್ಯಾನಮೇತದಗಜೇ ವಿಮುಕ್ತಿದಂ
ಚಂದ್ರಚೂಡಚರಣೇಽಸ್ಯ ಕೇವಲಂ ।
ಯಸ್ಯ ತಸ್ಯ ಹೃದಯೇ ವಸತೀಶೋ
ಯಸ್ಯ ಮುಕ್ತಿಮಪಿ ತಸ್ಯ ದದಾಮಿ ॥೪೩॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಪಂಚವಿಂಶತಿಮೂರ್ತಿ ಧ್ಯಾನಕಥನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ಭೌತಿಕವಾದ ಯಾವ ತೀರ್ಥಕ್ಷೇತ್ರಾದಿಗಳೂ ಕಾರ್ಯಕಾರಿಯಾಗಲಾರವು. ಬೆಂಕಿಯು ಸ್ವಲ್ಪ ಪ್ರಮಾಣದಲ್ಲಿದ್ದರೂ ಒಣಗಿರುವ ಅಥವಾ ಹಸಿಯ ಕಟ್ಟಿಗೆಯ ರಾಶಿಯನ್ನು ಸುಟ್ಟು ನಾಶಮಾಡುವಂತೆ ಧ್ಯಾನಾಭ್ಯಾಸವು ಕೊಂಚವಾದರೂ ಮಹಾಪಾಪಗಳನ್ನು ಕ್ಷಣಕಾಲದಲ್ಲಿ ನಾಶಗೊಳಿಸುವುದು. ॥೪೧-೪೨॥

ಪಾರ್ವತಿಯೇ, ಚಂದ್ರಚೂಡನೆನಿಸಿದ ನನ್ನ ಚರಣ ಸರೋಜದಲ್ಲಿ ಏಕಾಗ್ರ ಚಿತ್ತದಿಂದ ಧ್ಯಾನಮಾಡುವುದೇ ಮೋಕ್ಷಪ್ರದವೆಂದು ತಿಳಿ. ಈ ರೀತಿ ಧ್ಯಾನಮಾಡುವವನ ಮನಸ್ಸಿನಲ್ಲಿ (ನಾನು) ಈಶ್ವರನು ಸರ್ವದಾ ವಾಸಮಾಡುವನು. ದೇವಿಯೇ, ಅದೂ ಅಲ್ಲದೇ ಕೊನೆಯಲ್ಲಿ ಆ ಭಕ್ತನಿಗೆ ಶಾಶ್ವತವಾದ ಮುಕ್ತಿಯನ್ನೂ ನಾನು ಕೊಡುವೆನೆಂದು ಶಿವನು ಪಾರ್ವತಿಗೆ ನಿರೂಪಿಸಿದುದನ್ನು ಜೈಗೀಷವ್ಯನಿಗೆ ಕುಮಾರ ಸ್ವಾಮಿಯು ಹೇಳಿದನು. ॥೪೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಶಿವನ ಇಪ್ಪತ್ತೈದು ಮೂರ್ತಿಗಳ ಧ್ಯಾನನಿರೂಪಣೆಯೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಪೂಜಾಕೋಟಿಪ್ರದಂ ಧ್ಯಾನಂ ಧ್ಯಾನಮೇವಂ ಮಮ ಪ್ರಿಯಂ ।
ನಿರ್ವಾತೇ ನಿರ್ಭಯೇ ಶುದ್ಧೇ ಸರ್ವಾಲಂಕಾರಶೋಭಿತೇ ॥೧॥

ಗಂಧಪುಷ್ಪಾಮೋದವರೇ ಮೃದುತೂಲೋಪರಿ ಸ್ಥಿತಃ ।
ಧ್ಯಾಯೇತ್ತೈವಂ ಮಹಾದೇವಿ ಮಹಾಕೈಲಾಸವಾಸಿನಂ ॥೨॥

ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಲಂಕೃತವಿಗ್ರಹಃ ।
ಪಂಚಾಕ್ಷರವರಾಸ್ಯೋಽಥ ನಿಮೀಲ್ಯಾಕ್ಷಿಯುಗಂ ಶಿವೇ ॥೩॥

---

## ನಲವತ್ತೆಂಟನೆಯ ಅಧ್ಯಾಯ

ಮಹಾದೇವಿಯೇ, ನನ್ನ ಧ್ಯಾನವು ಭಕ್ತನಿಗೆ ಕೋಟಿಪೂಜಾಫಲವನ್ನುಂಟು ಮಾಡುವುದು. ಆದರೆ ಇಲ್ಲಿ ಹೇಳುವ ಕ್ರಮದಲ್ಲಿ ಧ್ಯಾನಮಾಡಿದರೆ ನನಗೆ ವಿಶೇಷ ಪ್ರೀತಿಯುಂಟಾಗುತ್ತದೆ. ಅದರಿಂದ ನನಗೂ ತೃಪ್ತಿಯುಂಟಾಗಿ ಅವರಿಗೂ ಮೋಕ್ಷ ದೊರೆಯುತ್ತದೆ. ಗಾಳಿಯು ವಿಶೇಷವಾಗಿ ಬೀಸದಿರುವ ಸ್ಥಳದಲ್ಲಿ, ನಿರ್ಭಯವೂ, ಶುದ್ಧವೂ, ಸಕಲ ಅಲಂಕಾರವಸ್ತುಗಳಿಂದಲಂಕೃತವೂ ಆದ ಪ್ರದೇಶದಲ್ಲಿ, ಗಂಧ ಮತ್ತು ಹೂಗಳ ಆಮೋದದಿಂದ ಶ್ರೇಷ್ಠವೆನಿಸಿರುವ ಮೃದುವಾದ ಹತ್ತಿಯ ಆಸನದ ಮೇಲೆ ಕುಳಿತು ಈರೀತಿ ಮಹಾಕೈಲಾಸಪರ್ವತವಾಸಿಯಾದ ನನ್ನನ್ನು ಧ್ಯಾನ ಮಾಡಬೇಕು. ॥೧-೨॥

ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಮಾಲೆಗಳಿಂದಲಂಕೃತನಾಗಿ ಶ್ರೇಷ್ಠವಾದ ಪಂಚಾಕ್ಷರಮಂತ್ರವನ್ನು ಬಾಯಲ್ಲಿ ಉಚ್ಚರಿಸುತ್ತಾ ಎರಡು ಕಣ್ಣುಗಳನ್ನೂ ಮುಚ್ಚಿ

ಧಾರಣಾಭಿಃ ಸಮಾಹೃತ್ಯ ಯೋಗೇನಾಪ್ಲಾವ್ಯ ವೈ ತನುಂ ।
ಸರ್ವತಶ್ಚಿತ್ತಮಾಕೃಷ್ಯ ಹೃದಯಾಂಭೋಜಮಧ್ಯಮೇ ॥೪॥

ಪ್ರಾಣಾಯಾಮೈರ್ವಿಕಸಿತೇ ಪರಮೇಶ್ವರಮಂದಿರೇ ।
ಅಷ್ಟೈಶ್ವರ್ಯದಳೋಪೇತೇ ವಿದ್ಯಾಕೇಸರಸಂಯುತೇ ॥೫॥

ಜ್ಞಾನನಾಲೇ ಮಹಾಕಂದೇ ಪ್ರಣವೇನ ಪ್ರಬೋಧಿತೇ ।
ಮಧ್ಯೇ ಹೃದಯಪಾಥೋಜೇ ಮಹಾದೇವಾಸನೋಚಿತೇ ॥೬॥

ಮಹಿತಾಕಾರಶೋಭಾಢ್ಯಂ ಮಂಟಪಂ ಪರಿಚಿಂತಯೇತ್ ।
ಅತಿಚಿಂತಾಮಣಿಪ್ರಖ್ಯೈರತಿಕೌಸ್ತುಭಕಾಂತಿಭಿಃ ॥೭॥

ರತ್ನೈರಪ್ರಾಕೃತೈರ್ಲೋಕಂ ರಂಜಯಂತಂ ಸಮಂತತಃ ।
ದಕ್ಷಿಣದ್ವಾರಪಾರ್ಶ್ವೇಽಸ್ಯ ಸಂಸ್ಮರೇನ್ನಂದಿಕೇಶ್ವರಂ ॥೮॥

---

ಕೊಂಡು, ಧಾರಣೆ ಎಂಬ ಯೋಗಬಲದಿಂದ ಶರೀರವನ್ನು ಬಿಗಿಯಾಗಿ ನಿಲ್ಲಿಸಿ, ಎಲ್ಲೆಡೆಯೂ ಹರಡುವ ಸ್ವಭಾವವುಳ್ಳ ತನ್ನ ಮನಸ್ಸನ್ನು ಹೃದಯಕಮಲದ ಮಧ್ಯದಲ್ಲಿ ಸ್ಥಿರವಾಗಿ ನೆಲಸುವಂತೆ ಮಾಡಿಕೊಂಡು, ಪರಮೇಶ್ವರನ ಮಂದಿರವಾದ ಹೃದಯಕಮಲವು ಪ್ರಾಣಾಯಾಮಗಳಿಂದ ವಿಕಸಿತವಾದ ಅನಂತರ, ಅಷ್ಟೈಶ್ವರ್ಯಗಳೆಂಬ ದಳಗಳಿಂದಲೂ ವಿದ್ಯೆಯೆಂಬ ಕೇಸರದಿಂದಲೂ ಯುಕ್ತವಾಗಿ ಜ್ಞಾನಗಳೆಂಬ ನಾಳವುಳ್ಳ, ಮಹತ್ಪರಿಮಾಣವುಳ್ಳ ಬುಡದಿಂದ ಕೂಡಿ, ಪ್ರಣವಮಂತ್ರದಿಂದ ಎಚ್ಚರಗೊಳ್ಳುವಂತಹ ಮಹಾದೇವನ ಆಸನಕ್ಕೆ ಯೋಗ್ಯವಾದ ಹೃದಯಕಮಲದ ಮಧ್ಯದಲ್ಲಿ ದಿವ್ಯವಾದ ಆಕಾರ ಮತ್ತು ಶೋಭೆಗಳಿಂದ ಪೂರ್ಣವಾದ ಮಂಟಪವನ್ನು ಪರಶಿವನಿಗಾಗಿ ಕಲ್ಪಿಸಿ, ಅದರಲ್ಲಿ ಶಂಕರನು ಪಾರ್ವತಿಯೊಡನೆ ಸರ್ವದಾ ನೆಲಸಿರುವನೆಂದು ಭಾವಿಸಿ ಧ್ಯಾನಿಸಬೇಕು. ॥೩-೪-೫-೬॥

ಆ ಮಂಟಪವು ಅತ್ಯಮೂಲ್ಯವಾದ ಚಿಂತಾಮಣಿರತ್ನ ಸಮಾನವಾದ ಕೌಸ್ತುಭಮಣಿಗಳ ಕಾಂತಿಯಿಂದಲೂ, ಅಪ್ರಾಕೃತವಾದ ರತ್ನಗಳಿಂದಲೂ ರಚಿತವಾಗಿ ಸುತ್ತಲೂ ಇರುವ ಸಮಸ್ತ ಲೋಕಗಳನ್ನೆಲ್ಲಾ ಬೆಳಗಿಸುವಂತಿರುವುದು. ಈ ಮಂಟಪದ ಬಲಗಡೆಯ ಬಾಗಿಲಿನಲ್ಲಿ ಅದರ ಪಕ್ಕದಲ್ಲಿ ನೆಲಸಿರುವ ನಂದಿಕೇಶ್ವರನನ್ನು ಮೊದಲು ಸ್ಮರಣೆಮಾಡಬೇಕು. ಆ ನಂದಿಕೇಶ್ವರನು ಅನೇಕ ರುದ್ರಗಣ ಮತ್ತು

ಅನೇಕರುದ್ರಪ್ರಮಥ ಭೂತಸಂಘೈರ್ನಿಷೇವಿತಂ ।
ಶಿವಧರ್ಮಮಹಾಧ್ಯಕ್ಷಂ ಶಿವಾಂತಃಪುರಪಾಲಕಂ ॥೯॥

ಚಾಮೀಕರಾಚಲಪ್ರಖ್ಯಂ ಸರ್ವಾಭರಣಭೂಷಿತಂ ।
ಬಾಲೇಂದುಮುಕುಟಂ ಸೌಮ್ಯಂ ಚತುರ್ಬಾಹುಂ ತ್ರಿಲೋಚನಂ॥೧೦॥

ದೀಪ್ತಶೂಲಮೃಗಂ ಟಂಕಂ ಸ್ವರ್ಣವೇತ್ರಧರಂ ಪ್ರಭುಂ ।
ಚಂದ್ರಬಿಂಬಾಭವದನಂ ಫಾಲಪುಂಡ್ರಂ ಜಟಾಧರಂ ॥೧೧॥

ಉತ್ತರದ್ವಾರಪಾರ್ಶ್ವೇ ತು ತತ್ಪತ್ನೀಂ ಮರುತಾಂ ಸುತಾಂ ।
ಸುಯಶಾಂ ಸುವ್ರತಾಮಂಬಾಪಾದಮಂಡನತತ್ಪರಾಂ ।
ಸಹಿತಾಂ ರುದ್ರಕನ್ಯಾಭಿಃ ಸಖೀಭಿಶ್ಚಾಪ್ಯನೇಕಶಃ ।
ಮಧ್ಯೇಽಥಮಂಡಲಸ್ಯಾಸ್ಯ ವೇದಿಕಾಂ ವಿದ್ರುಮಪ್ರಭಾಂ ॥೧೩॥

---

ಪ್ರಮಥಗಣಗಳಿಂದಲೂ ಭೂತಾದಿಗಳ ಗುಂಪಿನಿಂದಲೂ ಸೇವಿಸಲ್ಪಡುತ್ತಿರುವನು. ಶಿವಧರ್ಮಕ್ಕೆ ತಾನೇ ಮಹಾಧ್ಯಕ್ಷನಾಗಿರುವನು. ಶಿವನ ಅಂತಃಪುರದಲ್ಲಿ ಮುಖ್ಯ ರಕ್ಷಕನಾಗಿರುವನು. ರಜತಾಚಲಕ್ಕೆ ಸಮಾನವಾಗಿರುವನು. ಸಕಲ ಆಭರಣ ಗಳಿಂದಲೂ ಅಲಂಕೃತನಾಗಿರುವನು. ಬಾಲಚಂದ್ರಕಿರೀಟಿಯಾಗಿ ಸೌಮ್ಯನಾಗಿರು ವನು; ನಾಲ್ಕು ತೋಳ್ಗಳಿಂದ, ಮೂರು ಕಣ್ಗಳಿಂದ ಯುಕ್ತನಾಗಿರುವನು. ಪ್ರಜ್ವಲಿ ಸುತ್ತಿರುವ ತ್ರಿಶೂಲ, ಜಿಂಕೆ, ಟಂಕ ಮತ್ತು ಚಿನ್ನದ ಬೆತ್ತಗಳನ್ನು ಧರಿಸಿರುವ ನಾಲ್ಕು ತೋಳ್ಗಳುಳ್ಳವನಾಗಿರುವವನು. ಪ್ರಭುವಾಗಿಯೂ, ಚಂದ್ರಬಿಂಬಸಮಾನವಾದ ಮುಖಕಾಂತಿಯುಳ್ಳವನಾಗಿಯೂ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ, ಜಟಾ ಧಾರಿಯಾಗಿಯೂ ಇರುವನು. ॥೭-೮-೯-೧೦-೧೧॥

ಉತ್ತರದ್ವಾರದ ಪಕ್ಕದಲ್ಲಿ ಆ ನಂದೀಕೇಶ್ವರನ ಪತ್ನಿಯೂ, ವಾಯುಕುಮಾ ರಿಯೂ, ಒಳ್ಳೆಯ ವ್ರತವುಳ್ಳವಳೂ, ಪಾರ್ವತಿಯ ಪಾದಾಲಂಕಾರನಿರತಳೂ, ರುದ್ರ ಕನ್ಯೆಯರಿಂದಲೂ ಅನೇಕ ಸಖಿಯರಿಂದಲೂ ಯುಕ್ತಳೂ ಆದ ಸುಯಶಾದೇವಿ ಯನ್ನು ಸ್ಮರಣೆಮಾಡಬೇಕು. ಈ ಮಂಡಲದ ಮಧ್ಯದಲ್ಲಿ ಹವಳದ ಕಾಂತಿಯುಕ್ತ ವಾಗಿ ನಾಲ್ಕು ಕಂಬಗಳಿಂದ ಕೂಡಿ ದಿವ್ಯಕಾಂತಿಯಿಂದ ಮನೋಹರವಾಗಿರುವ ಒಂದು ವೇದಿಕೆಯನ್ನು ಧ್ಯಾನಮಾಡಬೇಕು. ॥೧೨-೧೩॥

ಚತುಃ ಸ್ತಂಭಯುತಾಂ ಧ್ಯಾಯೇಚ್ಚತುರಶ್ರೀಮನೋಹರಾಂ ।
ತಸ್ಯಾಂ ಶಕ್ತ್ಯಾದಿಯುಕ್ತಾಂ ಚ ತನ್ವೀಂ ತತ್ಪರಮಾನಸಾಂ ॥೧೪॥

ಆಧಾರಶಕ್ತಿಂ ಶ್ಯಾಮಾಂಗೀಂ ಕರೈರ್ಧೃತವರಾಭಯಾಂ ।
ತಸ್ಯಾಃ ಪುರಸ್ತಾದಾಕಂಠಮನಂತಂ ಕುಂಡಲಾಕೃತಿಂ ॥೧೫॥

ತಸ್ಯೋಪರಿ ಶುಭಂ ಧ್ಯಾಯೇತ್ಸಿಂಹಾಸನಮುಮಾಪತೇಃ ।
ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರಂ ಚ ತದದ್ರಯಃ ॥೧೬॥

ಆಗ್ನೇಯಾದಿಸ್ಥಿತಾಶ್ಚೈತತ್ಪೀತರಕ್ತಹರಿಪ್ರಭಾಃ ।
ಸಿಂಹಾಕಾರಾ ಸಿಂಹಕೋಟ್ಯಾ ಪ್ರತ್ಯೇಕಂ ಪರಿವಾರಿತಾಃ ॥೧೭॥

ಅಧರ್ಮಾದೀನಿ ಪೂರ್ವಾದಿಫಲಕಾನಿ ಸಮಂತತಃ ।
ಬಾಣಾವರ್ತಪ್ರಕಾಶಾನಿ ತಾರಾಕಾರಾಧರಾಣಿ ಚ ॥೧೮॥

---

ಆ ವೇದಿಕೆಯಲ್ಲಿ ಶಕ್ತ್ಯಾದಿ ಆಯುಧವಿಶಿಷ್ಟಳೂ ಕೃಶಾಂಗಿಯೂ, ತಲ್ಲೀನ ಮನಸ್ಕಳೂ, ಶ್ಯಾಮದೇಹಳೂ, ಕೈಗಳಲ್ಲಿ ವರದ ಮತ್ತು ಅಭಯಚಿಹ್ನೆಗಳನ್ನುಳ್ಳವಳೂ ಆದ ಆಧಾರಶಕ್ತಿಯನ್ನು ಧ್ಯಾನಮಾಡಬೇಕು. ಅದರ ಮುಂದೆ ಕಂಠದವರೆಗೂ ಕುಂಡಲಾಕೃತಿಯುಳ್ಳ ಅನಂತನನ್ನು ಧ್ಯಾನಿಸಬೇಕು. ಅದರ ಮೇಲೆ ಉಮಾರಮಣನಿಗೆ ಶುಭಕರವಾದ ಸಿಂಹಾಸನವನ್ನು ಧ್ಯಾನಮಾಡಬೇಕು. ॥೧೪-೧೫॥

ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಇವು ಆಗ್ನೇಯಾದಿವಿದಿಕ್ಕುಗಳಲ್ಲಿರುವುವು. ಅವು ಕ್ರಮವಾಗಿ ಹೊಂಬಣ್ಣ, ಕೆಂಪು, ನೀಲ, ಧವಳ ಈ ವಿಧವಾದ ಕಾಂತಿಯನ್ನು ಬೀರುವುವು. ಸಿಂಹದ ಆಕೃತಿಯುಳ್ಳದ್ದಾಗಿ ಸಿಂಹಕೋಟಿಯಿಂದ ಆ ಸಿಂಹಾಸನವು ಪ್ರತ್ಯೇಕವಾಗಿ ಸುತ್ತುವರಿಯಲ್ಪಟ್ಟಿರುವುದು. ಅಧರ್ಮವೇ ಮೊದಲಾದವುಗಳು ಪೂರ್ವವೇ ಮೊದಲಾದ ಉಳಿದ ನಾಲ್ಕು ವಿದಿಕ್ಕುಗಳಲ್ಲಿರುವುವು. ಆ ಸಿಂಹಾಸನವು ಮೇಲ್ಭಾಗದಲ್ಲಿ ಬಾಣದ ಸುಳಿಯಂತೆ ಪ್ರಕಾಶಿಸುತ್ತಾ, ಅಧೋಭಾಗದಲ್ಲಿ ನಕ್ಷತ್ರಗಳ ಆಕೃತಿಯನ್ನು ಪಡೆದಿರುವುದು. ॥೧೬-೧೭-೧೮॥

ಸಿಂಹಾಸನೋಪರಿಗತವಾದ ಹಲಗೆಯ ಮಧ್ಯದಲ್ಲಿ ಸಾಕ್ಷಾಲ್ಲಕ್ಷ್ಮೀಪತಿಯು ನೆಲಸಿರುವನು. ಪೂರ್ವವೇ ಮೊದಲಾದ ದಿಕ್ಕುಗಳ ಮಧ್ಯದಲ್ಲಿ ಪ್ರಣವವೇ ಮೊದಲಾದ ಎಂಟು ಸ್ವರಾಕ್ಷರಗಳು ಕಂಡುಬರುವುವು. ಆಮೆಯ ಆಕೃತಿಯಿಂದ ಅಗ್ನಿ

ಮಧ್ಯೇ ತತ್ಫಲಕಸ್ಯಾಸ್ಯ ಸಾಕ್ಷಾಲ್ಲಕ್ಷ್ಮೀಪತಿಸ್ಸ್ಥಿತಃ ।
ಮಧ್ಯೇ ಪ್ರಾಗಾದಿಮಧ್ಯಸ್ಥ ಪ್ರಣವಾದಿಸ್ವರಾಷ್ಟಕಂ ॥೧೯॥

ಯೋಗಾಸನಂ ವಿಭೋ ಧ್ಯಾಯೇತ್ಕ್ಯೋರ್ವಾಕ್ಕೃತ್ಯನಲಪ್ರಭಂ ।
ಅಸ್ಯಾಧಃ ಛದನಂ ಪದ್ಮಮಾಸನಂ ವಿಪುಲಂ ಸ್ಮರೇತ್ ॥೨೦॥

ಶಿವಧರ್ಮಮಹಾಕಂದಂ ಶಿವಜ್ಞಾನೈಕನಾಲಕಂ ।
ಅಷ್ಟೈಶ್ವರ್ಯದಲೋಪೇತಂ ಪೂರ್ವಾದಿಕ್ರಮಯೋಗತಃ ॥೨೧॥

ಅಷ್ಟವಾಮಾದಿಶಕ್ತ್ಯಂಗರುದ್ರಕಲ್ಪಿತಕೇಸರಂ ।
ವೈರಾಗ್ಯಕರ್ಣಿಕಾಂತಸ್ಥಂ ವಾಮಾದಿನವಬೀಜಕಂ ॥೨೨॥

ವಾಮಾಜ್ಯೇಷ್ಠಾ ತಥಾ ರೌದ್ರೀ ಕಾಲೀ ವಿಕರಿಣೀ ತಥಾ ।
ಬಲಪೂರ್ವಾ ವಿಕಿರಣೀ ಬಲಪ್ರಮಥಿನೀ ತಥಾ ॥೨೩॥

ಅಷ್ಟಾವೇತಾಃ ಸರ್ವಭೂತಾ ದಮನ್ಯೋ ನವಶಕ್ತಯಃ ।
ಕೇಸರೇಷು ಸ್ಥಿತಾ ಧ್ಯೇಯಾ ರಕ್ತಾಭಾ ಧೃತಚಾಮರಾಃ ॥೨೪॥

---

ಕಾಂತಿಯುಳ್ಳ ಯೋಗಾಸನವು ಪೀಠಮಧ್ಯದಲ್ಲಿರುವಂತೆ ಧ್ಯಾನಮಾಡಬೇಕು. ಇದರ ಕೆಳಗೆ ವಿಸ್ತಾರವಾದ ಪದ್ಮಾಸನವು ಹರಡಿರುವಂತೆ ತಿಳಿಯಬೇಕು. 'ಶಿವಧರ್ಮವೆಂಬ ದೊಡ್ಡ ಗೆಡ್ಡೆಯನ್ನೂ, ಶಿವಜ್ಞಾನವೆಂಬ ಮುಖ್ಯನಾಳವನ್ನೂ, ಅಷ್ಟೈಶ್ವರ್ಯರೂಪವಾದ ಎಂಟು ದಳಗಳನ್ನೂ, ಅವು ಪೂರ್ವವೇ ಮೊದಲಾದ ಎಂಟು ದಿಕ್ಕುಗಳನ್ನು ಅನುಸರಿಸಿ ಕ್ರಮವಾಗಿ ಹರಡಿರುವುದೆಂದೂ ಭಾವಿಸಿ ಧ್ಯಾನಮಾಡಬೇಕು. ॥೧೯-೨೦-೨೧॥

ವಾಮಾ, ಜ್ಯೇಷ್ಠಾ, ರೌದ್ರೀ, ಕಾಲೀ, ವಿಕರಿಣೀ, ಬಲವಿಕರಿಣೀ, ಬಲಾ ಬಲಪ್ರಮಥಿನೀ ಎಂಬ ಈ ಎಂಟು ಶಕ್ತಿಗಳೂ, ಅಂಗರುದ್ರದೇವತೆಗಳೂ ಆ ಪದ್ಮದ ಕೇಸರದಲ್ಲಿರುವ ವೈರಾಗ್ಯವೂ ಕರ್ಣಿಕಾಮಧ್ಯದಲ್ಲಿಯೂ, ನವಶಕ್ತಿಗಳು ಬೀಜರೂಪವಾಗಿಯೂ ಇರುವುವೆಂದು ಭಾವಿಸಬೇಕು. ಈ ಅಷ್ಟ ಮತ್ತು ನವಶಕ್ತಿದೇವತೆಗಳು ಚಾಮರಧಾರಿಗಳಾಗಿ, ರಕ್ತಕಾಂತಿಯಿಂದ ಶೋಭಿಸುತ್ತಾ ಕೇಸರಗಳಲ್ಲಿ ನೆಲಸಿರುವುವು. ಹೀಗೆಂದು ತಿಳಿದು ಆ ಸಿಂಹಾಸನವನ್ನು ಧ್ಯಾನಮಾಡಬೇಕು.॥೨೨-೨೩-೨೪॥

ಕಲಾಧರಕಲಾಧೌತಕರ್ಣಿಕಾಯಾಂ ಮನೋನ್ಮನೀಂ ।
ಭರ್ತುರೀಶಾನದಿಗ್ಭಾಗೇ ಪಾಶಾಂಕುಶವರಾಭಯಾಂ ॥೨೫॥

ಪದ್ಮಾಸನಸ್ಥಿತಂ ಧ್ಯಾಯೇದ್ದೇವಸ್ಯ ವಿಮಲಾಸನಂ ।
ಗಣಾಂಬಿಕಾಂ ಮಹಾದೇವೀಂ ತತೋ ಗೌರೀಂ ಪ್ರಚೋದಯಾತ್ ॥೨೬॥

ಕ್ರಾಂತಂ ಶಕ್ತಿಭಿರನ್ಯಾಭಿಃ ಸೌಮ್ಯಾಭಿರ್ವಿಮಲಾಸನಂ ।
ತಸ್ಯೋಪರಿ ಗುಣಾನಾಂ ಚ ಮಂಡಲಾನಾಂ ಚ ಸಾಧಕಃ ॥೨೭॥

ತತ್ತ್ವಾನಾಮಪಿ ಮೂರ್ತೀನಾಂ ತ್ರಿತಯಾನಾಂ ವಿಭಾವಯೇತ್ ।
ಸರ್ವಾಸನೋಪರಿಚಿತಂ ವಿಚಿತ್ರಕುಸುಮಾಸ್ಪದಂ ॥೨೮॥

ಪರಂ ವ್ಯೋಮಾವಕಾಶಾಖ್ಯಮಾಸನಂ ಕಲ್ಪಯೇತ್ಪ್ರಭೋಃ ।
ತಸ್ಮಿನ್ಸದಾಶಿವಂ ಧ್ಯಾಯೇದ್ಬದ್ಧಪದ್ಮಾಸನಸ್ಥಿತಂ ॥೨೯॥

---

ಚಂದ್ರನ ತಲೆಯಂತೆ ಶುಭ್ರವಾಗಿರುವ ಆ ಕರ್ಣಿಕೆಯಲ್ಲಿ ಮೊದಲು ಮನೋನ್ಮನೀ ದೇವಿಯನ್ನೂ, ಆ ದೇವಿಯು ದೇವನ ಈಶಾನ್ಯದಿಕ್ಕಿನಲ್ಲಿ ಪಾಶ, ಅಂಕುಶ, ವರದ ಮತ್ತು ಅಭಯರೂಪವಾದ ನಾಲ್ಕು ಆಯುಧಮುದ್ರೆಗಳುಳ್ಳ ತೋಳಿನಿಂದ ಕೂಡಿರುವಂತೆಯೂ, ಪದ್ಮಾಸನದಲ್ಲಿರುವ ಮಹಾದೇವನ ನಿರ್ಮಲವಾದ ಆಸನವನ್ನೂ ಧ್ಯಾನಮಾಡಬೇಕು. ಅನಂತರ ಗಣಾಂಬಿಕೆಯೂ, ಮಹಾದೇವಿಯೂ ಆದ ಶ್ರೀ ಗೌರಿಯನ್ನು ಧ್ಯಾನಿಸಬೇಕು. ಇತರ ಸೌಮ್ಯವಾದ ಮತ್ತು ಅನೇಕ ಶಕ್ತಿಗಳಿಂದ ವ್ಯಾಪ್ತವಾಗಿರುವ ವಿಮಲವಾದ ಆಸನವನ್ನೂ ಅದರ ಮೇಲೆ ಷಡ್ಗುಣಗಳು ಮತ್ತು ಮಂಡಲಗಳು ಅಲ್ಲದೆ ಅಷ್ಟಾದಶತತ್ವಗಳು ಮತ್ತು ಸತ್ವರಜಸ್ತಮೋರೂಪಗಳಾದ ಮೂರು ಮೂರ್ತಿಗಳು, ಇವುಗಳಿರುವುವೆಂದು ಸಾಧಕನು ಧ್ಯಾನಿಸಬೇಕು. ॥೨೫-೨೬-೨೭॥

ಎಲ್ಲಾ ಆಸನಗಳ ಮೇಲೆ ರಚಿತವಾಗಿರುವ ವಿಚಿತ್ರಪುಷ್ಪಗಳ ಆಶ್ರಯದಲ್ಲಿ ಶ್ರೇಷ್ಠವಾದ ವ್ಯೋಮಾವಕಾಶಸಂಜ್ಞಕವಾದ ಆಸನವನ್ನು ಪ್ರಭುವಿಗೆ ರಚಿಸಬೇಕು. ಮೊಗ್ಗಾದ ಕಮಲದಲ್ಲಿರುವ ಸದಾಶಿವನನ್ನು ಆ ಆಸನದಲ್ಲಿ ಧ್ಯಾನಮಾಡಬೇಕು. ಶುದ್ಧಸ್ಫಟಿಕರಾಶಿಗೆ ಸಮಾನವಾದಕಾಂತಿಯುಳ್ಳವನೂ, ಪ್ರಸನ್ನನೂ, ಶೀತಲಕಾಂತಿಯುಳ್ಳವನೂ, ಮಿಂಚಿನ ಬಳ್ಳಿಯಂತೆ ಶೋಭಿಸುತ್ತಿರುವವನೂ, ಜಡೆ ಮತ್ತು

ಶುದ್ಧಸ್ಫಟಿಕಸಂಕಾಶಂ ಪ್ರಸನ್ನಂ ಶೀತಲದ್ಯುತಿಂ ।
ವಿದ್ಯುದ್ವಲಯವಿದ್ಯೋತಿಜಟಾಮುಕುಟಧಾರಿಣಂ ॥೩೦॥

ಶಾರ್ದೂಲಚರ್ಮವಸನಂ ಮಂದಸ್ಮಿತಮುಖಾಂಬುಜಂ ।
ರಕ್ತಪದ್ಮದಳಪ್ರಖ್ಯಂ ಪಾಣಿಪಾದತಲಾಧರಂ ॥೩೧॥

ದ್ವಾತ್ರಿಂಶಲ್ಲಕ್ಷಣೋಪೇತಂ ಸರ್ವಾಭರಣಭೂಷಿತಂ ।
ದಿವ್ಯಗಂಧಾನುಲಿಪ್ತಾಂಗಂ ದಿವ್ಯಮಾಲ್ಯೈರಲಂಕೃತಂ ॥೩೨॥

ಪಂಚವಕ್ತ್ರಂ ದಶಭುಜಂ ಪ್ರತಿವಕ್ತ್ರತ್ರಿಲೋಚನಂ ।
ದಕ್ಷಿಣೇ ಶೂಲವಜ್ರಾಸಿಪರಶ್ವಭಯಮುದ್ರಿಕಾಂ ॥೩೩॥

ವಾಮೇ ಚ ದಧತಂ ನಾಗಂ ಪಾಶಂ ಘಂಟಾಂ ತಥಾಂಕುಶಂ ।
ಅಸ್ಯೋರ್ಧ್ವವಕ್ತ್ರಂ ವಿಲಸದ್ಬಾಲೇಂದುಮುಕುಟೋಜ್ವಲಂ ॥೩೪॥

---

ಕಿರೀಟಗಳನ್ನು ಧರಿಸಿರುವವನೂ ಆದ ಪರಶಿವನನ್ನು ಇದೇ ಭಾವನೆಯಿಂದ ಧ್ಯಾನಿಸಬೇಕು. ॥೨೮-೨೯-೩೦॥

ಮತ್ತು ಹುಲಿಯ ಚರ್ಮವನ್ನು ಹೊದ್ದಿರುವವನೂ, ಮಂದಹಾಸಯುಕ್ತವಾದ ಮುಖಕಮಲವುಳ್ಳವನೂ, ಕೆಂದಾವರೆಯ ದಳದಂತೆ ಕಾಂತಿಯುಳ್ಳ ಕೈ, ಕಾಲು ಮತ್ತು ತುಟಿಯುಳ್ಳವನೂ, ಮೂವತ್ತೆರಡು ಲಕ್ಷಣಗಳಿಂದ ಯುಕ್ತನಾದವನೂ ಸಕಲ ಒಡವೆಗಳಿಂದಲೂ ಅಲಂಕೃತನೂ, ದಿವ್ಯಗಂಧವನ್ನು ಅವಯವಕ್ಕೆಲ್ಲಾ ಲೇಪನಮಾಡಿಕೊಂಡಿರುವವನೂ. ದಿವ್ಯ ಪುಷ್ಪಮಾಲೆಗಳಿಂದ ಅಲಂಕೃತನೂ, ಆಗಿರುವನೆಂದು ಭಾವಿಸಬೇಕು. ॥೩೧-೩೨॥

ಮಹಾದೇವನಿಗೆ ಐದು ಮುಖಗಳು, ಹತ್ತು ತೋಳುಗಳು ಪ್ರತಿ ಮುಖದಲ್ಲಿಯೂ ಮೂರು ಕಣ್ಣುಗಳು, ಬಲಭಾಗದ ಕೈಗಳಲ್ಲಿ ಶೂಲ, ವಜ್ರ, ಕತ್ತಿ, ಕೊಡಲಿ ಮತ್ತು ಅಭಯಮುದ್ರೆ ಮುಂತಾದ ಆಯುಧಾದಿಗಳೂ, ಎಡಭಾಗದ ಕೈಗಳಲ್ಲಿ ಸರ್ಪ, ಪಾಶ, ಗಂಟೆ ಮತ್ತು ಅಂಕುಶ, ವರದಮುದ್ರಾರೂಪವಾದ ಆಯುಧಾದಿಗಳೂ ಇರುವುವೆಂದು ತಿಳಿದು ಮಹೇಶ್ವರನ ಸ್ವರೂಪವನ್ನು ಧ್ಯಾನಮಾಡಬೇಕು. ಇವನ ಮೇಲ್ಮುಖವು ಬಾಲಚಂದ್ರಕಿರೀಟದಿಂದ ಪ್ರಜ್ವಲಿಸುತ್ತಿರುವುದು.

ಧ್ಯಾನಸ್ಥಮೂರ್ಧ್ವಾಭಿಮುಖಂ ಗಗನಚ್ಛಾಯಯಾಸಿತಂ ।
ಪೂರ್ವವಕ್ತ್ರಂ ಮಹೇಂದ್ರಸ್ಯ ಛಾಯಯಾ ಕನಕಪ್ರಭಂ ॥೩೫॥

ಬಾಲೇಂದುಮುಕುಟಂ ಸೌಮ್ಯಂ ಸಂಪ್ರಾಪ್ತನವಯೌವನಂ ।
ದಕ್ಷಿಣಂ ವದನಂ ಕಾಲಛಾಯಯಾಸಕ್ತಾಂಜನಪ್ರಭಂ ॥೩೬॥

ಭ್ರುಕುಟೀಕುಟಿಲಂ ಘೋರಂ ರಕ್ತವೃತ್ತತ್ರಯೇಕ್ಷಣಂ ।
ದಂಷ್ಟ್ರಾಕರಾಲಂ ದುರ್ಧರ್ಷಂ ಸ್ಫುರಿತಾಧರಪಲ್ಲವಂ ॥೩೭॥

ಚಂದ್ರಾಪೀಡಂ ಚಲತ್ಕೇಶಂ ಕಿಂಚಿಚ್ಚಲಿತಯೌವನಂ ।
ಉತ್ತರಂ ಯಕ್ಷರಾಜಸ್ಯ ಛಾಯಯಾ ವಿದ್ರುಮಪ್ರಭಂ ॥೩೮॥

ಲಲಾಟತಿಲಕೋಪೇತಂ ನೀಲಾಲಕವಿಭೂಷಿತಂ ।
ಸವಿಲಾಸಂ ತ್ರಿನಯನಂ ಚಂದ್ರಾಭರಣಭಾಸ್ಕರಂ ॥೩೯॥

---

ಧ್ಯಾನನಿರತವಾಗಿ ಮೇಲ್ಮುಖವಾಗಿರುವ ಈ ಮುಖವು ಆಕಾಶಛಾಯೆಯಿಂದ ಶುಭ್ರವಾಗಿರುವುದು. ॥೩೩-೩೪॥

ಮಹೇಶನ ಪೂರ್ವದಿಕ್ಕಿನ ಮುಖವು ಇಂದ್ರನ ಛಾಯೆಯಿಂದ ಸುವರ್ಣ ಪ್ರಭೆಯುಳ್ಳದು. ಬಾಲಚಂದ್ರಕಿರೀಟಯುಕ್ತವಾಗಿ ಸೌಮ್ಯವೂ, ನವಯೌವ್ವನ ಭರಿತವೂ ಆಗಿರುವುದು. ದಕ್ಷಿಣಭಾಗದ ಮುಖವು ಯಮನ ಛಾಯೆಯಿಂದ ಕಾಡಿಗೆಯಂತೆ ಕಪ್ಪು ಪ್ರಭೆಯುಳ್ಳದ್ದು. ವಕ್ರವಾದ ಹುಬ್ಬುಗಂಟಿನಿಂದ ಕೂಡಿ ಭಯಂಕರವೂ, ಕೆಂಪುಬಣ್ಣ ಹೊಂದಿ ಸುಂದರವಾಗಿರುವ ಮೂರು ಕಣ್ಣುಗಳುಳ್ಳದ್ದೂ ಆಗಿರುವುದು. ಪಶ್ಚಿಮಭಾಗದ ಮುಖವು ಕೋರೆದಾಡೆಗಳಿಂದ ಭಯಂಕರವಾಗಿ ಶತ್ರು ಧ್ವಂಸಕರವೆನಿಸಿ, ನಡುಗುತ್ತಿರುವ ಕೆಂದುಟಿಯುಳ್ಳದ್ದಾಗಿ, ಚಂದ್ರಶೇಖರವೆನಿಸಿ, ಚಂಚಲವಾದ ಕೇಶಪಾಶವುಳ್ಳದ್ದಾಗಿ ಚ್ಯುತವಾದ ಯೌವನವುಳ್ಳದ್ದಾಗಿ ಅಂದರೆ ವೃದ್ಧಾಪ್ಯದ ಕಳೆಯಿಂದ ಕೂಡಿರುವುದು. ॥೩೫-೩೬-೩೭॥

ಉತ್ತರ ದಿಕ್ಕಿನ ಮುಖವು ಕುಬೇರನ ಛಾಯೆಯಿಂದಲೂ ಹವಳದಂತೆ ಕಾಂತಿಯುಕ್ತವಾಗಿಯೂ, ಹಣೆಯಲ್ಲಿ ತಿಲಕ, ಕಪ್ಪುಮುಂಗುರುಳು ಇವುಗಳಿಂದಲೂ ಅಲಂಕೃತವಾಗಿರುವುದು. ವಿಲಾಸಯುಕ್ತವಾಗಿ ಮೂರು ಕಣ್ಣುಗಳು ಮತ್ತು ಹೊಳೆಯುವ ಚಂದ್ರಕಲೆ ಇವುಗಳಿಂದ ಕೂಡಿ ಹೊಳೆಯುತ್ತಿರುವುದು. ಇಚ್ಛೆ, ಜ್ಞಾನ

ಇಚ್ಛಾಜ್ಞಾನಕ್ರಿಯಾರೂಪವಿಲಸಲ್ಲೋಚನತ್ರಯಂ ।
ಪಶ್ಚಿಮಂ ಪಾಶಹಸ್ತಸ್ಯ ಛಾಯಯಾ ಚಂದ್ರಸಂನಿಭಂ ॥೪೦॥

ಚಂದ್ರೋತ್ತಂಸಂ ಸಿತಾಕಾರಂ ಕೃತಭಸ್ಮತ್ರಿಪುಂಡ್ರಕಂ ।
ಇತಿ ಧ್ಯಾತ್ವಾ ಪುನರಪಿ ಧ್ಯಾಯೇದ್ದೇವಂ ಸದಾಶಿವಂ ॥೪೧॥

ಸೂರ್ಯಚಂದ್ರಾಗ್ನಿನಯನಂ ನೀಲಕಂಠಂ ಜಟಾಧರಂ ।
ಜ್ಞಾನಂ ಚಂದ್ರಕಲಾಜೂಟಂ ಉದ್ಯದ್ಬಾಹುಚತುಷ್ಟಯಂ ॥೪೨॥

ತ್ರೈಗುಣ್ಯಾಮಲಸಂಭೂತೈರ್ದಿವ್ಯೈರ್ದಶಭಿರಾಯುಧೈಃ ।
ಸರ್ವಜ್ಞತ್ವಾದಿಸಂಸಿದ್ಧಿಃ ಹೃದಯಾದಿಷಡಂಗಕಂ ॥೪೩॥

ಪಂಚಬ್ರಹ್ಮಾತ್ಮವದನಂ ಪಂಚಸಿದ್ಧಾಖ್ಯಮೂರ್ತಿಕಂ ।
ಶ್ರೀಮತ್ಪಂಚಾಕ್ಷರಮಯಂ ಪ್ರಣವಾಕಾರಶಾಲಿನಂ ॥೪೪॥

---

ಮತ್ತು ಕ್ರಿಯಾರೂಪಗಳಾದ ಮೂರು ಶಕ್ತಿಗಳಿಂದ ಕೂಡಿದ ಕಣ್ಣುಗಳಿಂದ ಅದು ಶೋಭಿಸುವುದು. ಪಶ್ಚಿಮದಿಕ್ಕಿನ ಮುಖವು ವರುಣನ ಛಾಯೆಯಿಂದ ಚಂದ್ರನಂತೆ ಕಾಂತಿಯುಳ್ಳದ್ದಾಗಿರುವುದು ಚಂದ್ರಶಿರೋಭೂಷಣವೂ, ಶುಭ್ರವಾದ ಆಕೃತಿಯೂ ಭಸ್ಮತ್ರಿಪುಂಡ್ರವೂ ಈ ಮುಖದಲ್ಲಿ ಶೋಭಿಸುತ್ತಿರುವುವು. ||೩೮-೩೯-೪೦||

ಹೀಗೆ ಧ್ಯಾನಿಸಿ ಪುನಃ ಸದಾಶಿವದೇವನನ್ನು ಈ ರೀತಿ ಧ್ಯಾನಮಾಡಬೇಕು. ಸೂರ್ಯ, ಚಂದ್ರ ಮತ್ತು ಅಗ್ನಿರೂಪವಾದ ಮೂರು ನೇತ್ರಗಳುಳ್ಳವನೂ, ವಿಷಭಕ್ಷಣೆಯಿಂದ ನೀಲವಾದ ಕಂಠವುಳ್ಳವನೂ, ಜಟಾಕಲಾಪವನ್ನು ಧರಿಸಿರುವವನೂ, ಜ್ಞಾನರೂಪಿಯೂ, ಚಂದ್ರಕಲೆಯನ್ನು ಧರಿಸಿದವನೂ, ನಾಲ್ಕು ತೋಳ್ಗಳಿಂದ ಯುಕ್ತನಾದವನೂ, ಸತ್ತ್ವರಜಸ್ತಮೋರೂಪವಾದ ಮೂರು ಗುಣಗಳಿಂದ ಪರಿಶುದ್ಧವಾಗಿ ಜನಿಸಿರುವವನೂ, ದಿವ್ಯವಾದ ಹತ್ತು ಆಯುಧಗಳನ್ನು ಹೊಂದಿರುವವನೂ, ಸರ್ವಜ್ಞತ್ವವೇ ಮೊದಲಾದವುಗಳಿಂದ ಸಿದ್ಧವಾದ ಹೃದಯ ಮೊದಲಾದ ಆರು ಅಂಗಗಳುಳ್ಳವನೂ ಎನಿಸಿರುವ ಮಹೇಶ್ವರನನ್ನು ಮನಸಾ ಧ್ಯಾನಿಸಬೇಕು. ||೪೧-೪೨-೪೩||

ಪಂಚಬ್ರಹ್ಮಸ್ವರೂಪವಾದ ಮುಖವುಳ್ಳವನೂ, ಐದು ಮುಖಗಳಿಂದಲೂ ಐದು ವಿಧಗಳಾದ ಸಿದ್ಧಿಯನ್ನು ಅನುಗ್ರಹಿಸುವವನೂ, ಶ್ರೀಮತ್ಪಂಚಾಕ್ಷರಮಂತ್ರರೂಪಿಯೂ, ಪ್ರಣವಮಂತ್ರಾಕಾರವುಳ್ಳವನೂ, ಸಮಸ್ತ ವರ್ಣಸ್ವರೂಪದಿಂದಿರು

ಸಮಸ್ತವರ್ಣರೂಪಂ ಚ ಪಂಚಬ್ರಹ್ಮಕಲಾಮಯಂ ।
ನಿವೃತ್ತಿಜ್ಞಾನವೈರಾಗ್ಯಯೋಗಮೋಕ್ಷಪ್ರತಿಷ್ಠಯಾ ॥೪೫॥

ಆಕಂಠಂ ವಿದ್ಯಯಾಸಿದ್ಧಮಾಲಲಾಟಂ ತು ಶಾಂತಯಾ ।
ತದೂರ್ಧ್ವಶಾಂತ್ಯತೀತಾಖ್ಯಕಲಯಾ ಪರಿಕಲ್ಪಿತಂ ॥೪೬॥

ಏವಂ ಪಂಚಕಲಾರೂಪಮಿದಂ ಸದಾಶಿವವಪುಃ ।
ಚತುರ್ಮೂರ್ತಿತಟಿದ್ವರ್ಣಾಂ ಪ್ರತಿವಕ್ತ್ರಾಂಶುಮಂಡಲಾಂ ॥೪೭॥

ಏಕವಕ್ತ್ರಾಂ ಶಶಾಂಕಾಭಾಂ ಪ್ರತಿಷ್ಠಾಂ ಪದ್ಮಧಾರಿಣೀಂ ।
ಅಗ್ನಿವರ್ಣಾಂ ತ್ರಿವದನಾಂ ವಿದ್ಯಾಂ ಶಾಂತಿಲಸತ್ಕರಾಂ ॥೪೮॥

ಕೃಷ್ಣವರ್ಣಾಂ ಚತುರ್ವಕ್ತ್ರಾಂ ಶಾಂತಿಧ್ವಜವಿರಾಜಿತಾಂ ।
ಪಾಶಹೃತ್ಪಂಚವದನಾಂ ಶಾಂತ್ಯತೀತಾಂ ಶಶಿಪ್ರಭಾಂ ॥೪೯॥

---

ವವನೂ, ನಿವೃತ್ತಿ, ಜ್ಞಾನ, ವೈರಾಗ್ಯ, ಯೋಗ ಮತ್ತು ಮೋಕ್ಷಪ್ರಾಪ್ತಿರೂಪವಾದ ಫಲವುಳ್ಳ ಪಂಚಬ್ರಹ್ಮಕಲಾತ್ಮಕನೂ, ಕಂಠಪರ್ಯಂತವಾಗಿ ವಿದ್ಯಾಸ್ವರೂಪದಲ್ಲಿರುವವನೂ, ಹಣೆಯುವರೆಗೂ ಶಾಂತಿಕಲೆಯಿಂದ ಪೂರ್ಣನೂ, ಆದರಿಂದ ಮೇಲೆ ಶಾಂತ್ಯತೀತವಾದ ನಿಷ್ಕಲಜ್ಞಾನರೂಪದಿಂದಿರುವವನೂ ಆದ ಪರಮೇಶ್ವರನನ್ನು ಮನಸಾ ಧ್ಯಾನಿಸಬೇಕು. ॥೪೪-೪೫-೪೬॥

ಹೀಗೆ ಸದಾಶಿವ ದೇಹವು ನಿವೃತ್ತಿ, ಜ್ಞಾನ, ವೈರಾಗ್ಯ, ಯೋಗ, ಮೋಕ್ಷವೆಂಬ ಪಂಚಕಲಾರೂಪವಾಗಿರುವುದು ; ಆದರಲ್ಲಿ ಪ್ರಥಮ ಕಲೆಯು ನಾಲ್ಕುಮುಖಗಳಿಂದ ಕೂಡಿ ಮಿಂಚಿನ ಬಣ್ಣವುಳ್ಳದ್ದಾಗಿ ಪ್ರತಿ ಮುಖದಿಂದಲೂ ಕಾಂತಿಯನ್ನೆರಚುತ್ತಾ ಪ್ರತಿಮುಖದಲ್ಲಿಯೂ ಕಾಂತಿಸಮೂಹಗಳನ್ನು ಪಡೆದು ಕಂಗೊಳಿಸುವುದು ; ದ್ವಿತೀಯ ಕಲೆಯು ಚಂದ್ರಕಾಂತಿಯುಳ್ಳ ಒಂದು ಮುಖದಿಂದ ಕೂಡಿ ಉದ್ದವಾದ ಕರ್ಣಿಕೆಯುಳ್ಳ ಕಮಲವನ್ನು ಧರಿಸಿರುವುದು ; ಮೂರನೆಯ ಕಲೆಯು ಅಗ್ನಿವರ್ಣವುಳ್ಳದ್ದಾಗಿ ಮೂರು ಮುಖಗಳಿಂದ ಕಂಗೊಳಿಸುತ್ತಾ ವಿದ್ಯಾ ಮತ್ತು ಶಾಂತಿಯನ್ನು ಬೋಧಿಸುವ ಕೈಗಳನ್ನು ಹೊಂದಿದೆ ; ನಾಲ್ಕನೆಯ ಕಲೆಯು ಕಪ್ಪುಬಣ್ಣದ ನಾಲ್ಕು ಮುಖವುಳ್ಳದ್ದಾಗಿ, ಶಾಂತಿರೂಪವಾದ ಧ್ವಜದಿಂದ ವಿರಾಜಿಸುತ್ತಿರುವುದು. ಐದನೆಯದಾದ ಕಲೆಯು ಸಂಸಾರ ಪಾಶಹಾರಿಯಾದ ಐದು ಮುಖಗಳುಳ್ಳದ್ದಾಗಿ ಶಾಂತ್ಯತೀತವೆನಿಸಿ ಚಂದ್ರಪ್ರಭೆಯಿಂದ ವಿರಾಜಿಸುತ್ತಿರುವುದು. ॥೪೭-೪೮-೪೯॥

ಸರ್ವಾಃ ಪದ್ಮಾಕ್ಷಮಾಲಾಢ್ಯಾ ಅಭಯೇನ ವಿರಾಜಿತಾಃ ।
ಚತುರ್ಭುಜಾಸ್ತ್ರಿನಯನಾಃ ಪೀನೋನ್ನತಪಯೋಧರಾಃ ॥೫೦॥

ಆಸಾಂ ಪಂಚಾಧ್ವಗರ್ಭಾಂತಾ ಷಡಧ್ವಾಂತಾ ಸದಾಶಿವಃ ।
ಮಂತ್ರಾಧ್ವಾಚ ಪದಾಧ್ವಾ ಚ ವರ್ಣಾಧ್ವಾ ಚ ವನಾಧ್ವಕಃ ॥೫೧॥

ತತ್ವಾಧ್ವಾ ಚ ಕಲಾಧ್ವಾ ಚ ಷಡಧ್ವಾ ಚ ಇತೀರಿತಾಃ ।
ಚತುರ್ವಿಂಶತ್ಯುತ್ತರಾಣಾಂ ಭುವನಾನಾಂ ಶತದ್ವಯಂ ॥೫೨॥

ಭುವನಾಧ್ವಾ ಚ ಸಂಚಿಂತ್ಯ ರೋಮವೃಂದಾತ್ಮನಾ ವಿಭೋಃ ।
ಪಂಚರುದ್ರಾದಿರೂಪೈಸ್ತು ವರ್ಣೈರ್ವರ್ಣಾಧ್ವಕಲ್ಪನಾ ॥೫೩॥

ಅಸೌ ತ್ವಗಾತ್ಮನಾ ಚಿಂತ್ಯೋ ದೇವದೇವಸ್ಯ ಶೂಲಿನಃ ।
ಸಪ್ತಕೋಟ್ಯೋ ಮಹಾಮಂತ್ರ್ಯಃ ಮೂಲವಿದ್ಯಾಸಮುದ್ಭವೈಃ ॥೫೪॥

---

ಈ ಪಂಚ ಕಲಾರೂಪಗಳಾದ ಎಲ್ಲಾ ಮೂರ್ತಿಗಳೂ ಪದ್ಮಮಣಿಗಳ ಮಾಲಾಯುಕ್ತವಾಗಿ, ಅಭಯಮುದ್ರಾವಿಶಿಷ್ಟವಾಗಿವೆ. ನಾಲ್ಕುತೋಳುಗಳು, ಮೂರು ಕಣ್ಣುಗಳು ದಪ್ಪವಾದ ಮತ್ತು ಎತ್ತರವಾದ ಸ್ತನಗಳು ಈ ಎಲ್ಲಾ ಕಲಾದೇವತೆಗಳಲ್ಲಿಯೂ ಕಂಡುಬರುತ್ತಿವೆ. ಈ ಐದೂ ಐದು ಅಧ್ವಗಳಿಂದ ಕೂಡಿವೆ. ಇವುಗಳಿಂದ ಆವೃತನಾಗಿರುವ ಸದಾಶಿವನು ಷಡಧ್ವರೂಪಿಯೆನಿಸಿರುವನು. ಮಂತ್ರಾಧ್ವ (ಮಾರ್ಗ) ಪದಾಧ್ವ (ಮಾರ್ಗ) ವರ್ಣಾಧ್ವ (ಮಾರ್ಗ) ಅರಣ್ಯಾಧ್ವ (ಮಾರ್ಗ) ತತ್ವಾಧ್ವ (ಮಾರ್ಗ) ಮತ್ತು ಕಲಾಧ್ವ (ಮಾರ್ಗ) ಗಳೆಂಬುದಾಗಿ ಷಡಧ್ವಗಳು ಪರಶಿವಮೂರ್ತಿಯಲ್ಲಿ ಹೇಳಲ್ಪಟ್ಟಿವೆ. ॥೫೦-೫೧॥

ಇನ್ನೂರಿಪ್ಪತ್ತುನಾಲ್ಕು ಭುವನರೂಪಗಳಾಗಿ ಕಂಗೊಳಿಸುವ ಭುವನಾಧ್ವವು ಪರಮೇಶ್ವರನ ರೋಮರೂಪದಲ್ಲಿ ವ್ಯಾಪಿಸಿರುವುದು. ಪಂಚರುದ್ರಮೂರ್ತಿಮಯವಾದ ವರ್ಣಾಧ್ವವು ಮಹಾದೇವನ ದೇಹದ ವರ್ಣವಿಭಾಗವಾಗಿ ರಂಜಿಸುತ್ತಾ ದೇವದೇವನಾದ ಶಂಕರನಿಗೆ ಚರ್ಮರೂಪದಲ್ಲಿರುವುದು. ಏಳುಕೋಟಿ ಮಂತ್ರರೂಪವಾಗಿ ಮೂಲವಿದ್ಯೆಯೆನಿಸಿಕೊಂಡಿರುವ ಮಂತ್ರಾಧ್ವವು ಪಾರ್ವತೀಪತಿಯಾದ ಶಂಕರನಿಗೆ ರಕ್ತರೂಪದಲ್ಲಿರುವುದು. ॥೫೨-೫೩-೫೪॥

ಮಂತ್ರಾಧ್ವಾ ರುಧಿರಾತ್ಮಾಸೌ ವಿಚಿಂತ್ಯಃ ಪಾರ್ವತೀಪತೇಃ ।
ಅನೇಕಭೇದಸಂಭಿನ್ನಾ ಮಂತ್ರಾಣಾಂ ಪಾದಸಂಹತಿಃ ॥೫೫॥

ಪಾದಾಧ್ವಾಸೌ ಪಶುಪತೇಃ ಸಿರಾಮಾಂಸತಯಾ ಮತಂ ।
ಪೃಥಿವ್ಯಾದೀನಿ ಷಟ್ತ್ರಿಂಶತ್ತತ್ವಾನ್ಯಾಗಮವೇದಿಭಿಃ ॥೫೬॥

ಉಕ್ತಾನ್ಯಮೀಭಿಸ್ತತ್ವಾಧ್ವಾ ಶುಕ್ಲಮಜ್ಜಾಸ್ಥಿರೂಪಭೃತ್ ।
ನಾನ್ಯದೇಹೇಽಸ್ತಿರುಧಿರಂ ನ ಮಾಂಸಂ ನಾಸ್ತಿ ಕಿಂಚನ ॥೫೭॥

ಪ್ರತಿಬಿಂಬಮಿವಾದರ್ಶೇ ಶಕ್ರಚಾಪಮಿವಾಂಬರೇ ।
ಜ್ಯೋತಿರ್ಮಯತಯಾ ಸಿದ್ಧಮಿದಂ ಸಾದಾಶಿವಂ ವಪುಃ ॥೫೮॥

ತಥಾಪಿ ಕಲ್ಪನಾಮಾತ್ರಂ ಕಾಲವ್ಯಾಪ್ಯಾಧ್ವನಾಮಿದಂ ।
ಬ್ರಹ್ಮಸ್ವೀಶಾನಮೂರ್ಧಾನಃ ಪುರುಷೇಣ ಚತುರ್ಮುಖಃ ॥೫೯॥

---

ಆದ್ದರಿಂದಲೇ ಮಂತ್ರಮಾರ್ಗವು ಪರಮೇಶ್ವರನ ರಕ್ತರೂಪವೆಂದು ಹೇಳುವರು. ಮಂತ್ರಗಳ ಪಾದಸಮೂಹರೂಪದಿಂದಿದ್ದು ಅನೇಕ ಭೇದಗಳಿಂದ ಕೂಡಿ ಶಂಕರನ, ನರ ಮತ್ತು ಮಾಂಸಗಳ ರೂಪಿನಿಂದ ಈ ಪಾದಾಧ್ವವು ಏರ್ಪಟ್ಟಿದೆ. ಆಗಮಜ್ಞರಿಂದ ಹೇಳಲ್ಪಡುವ ಪೃಥಿವಿಯೇ ಮೊದಲಾದ ಮೂವತ್ತಾರು ತತ್ವಗಳಿಂದ ಕೂಡಿದ ತತ್ತ್ವಾಧ್ವವು ಶಿವನ ಶುಕ್ಲ, ಮೇದಸ್ಸು ಮತ್ತು ಮೂಳೆಯ ರೂಪಗಳಾಗಿ ಪ್ರಕಾಶಿಸುತ್ತಿರುವುವು. ॥೫೫-೫೬॥

ಇತರ ದೇಹಗಳಲ್ಲಿರುವಂತೆ ರಕ್ತ, ಮಾಂಸ ಇವುಗಳು ಪರಶಿವನ ದೇಹದಲ್ಲಿಲ್ಲ. ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆಯೂ, ಆಕಾಶದಲ್ಲಿ ತೋರುವ ಕಾಮನ ಬಿಲ್ಲಿನಂತೆಯೂ, ಜ್ಯೋತಿಸ್ವರೂಪವೆಂದು ಸಿದ್ಧವಾಗಿರುವ ಸದಾಶಿವನ ದೇಹದಲ್ಲಿ ಇವೆಲ್ಲವೂ ಇತರ ದೇಹಗಳಲ್ಲಿರುವಂತೆ ಪ್ರತಿಫಲಿತವಾಗುತ್ತವೆ. ॥೫೭-೫೮॥

ಸಕಲ ಜಗತ್ಕಾರಣನಾಗಿ, ಕಾಲನಿಯಾಮಕನಾಗಿರುವ ಪರಮೇಶ್ವರನಿಗೆ ಕಾಲವ್ಯಾಪಿಯಾದ ಈ ಮಾರ್ಗಗಳು ಕೇವಲ ಕಲ್ಪನಾಮಾತ್ರವೆಂದು ತಿಳಿಯಬೇಕು. ಸದ್ಯೋಜಾತಾದಿ ಪಂಚಬ್ರಹ್ಮಾನುವಾಕಗಳಲ್ಲಿ ಈಶಾನಸ್ಸರ್ವವಿದ್ಯಾನಾಂ ಎಂಬ ಮಂತ್ರವು ಶಿರೋರೂಪದಲ್ಲಿಯೂ, ತತ್ಪುರುಷಾಯವಿದ್ಮಹೇ ಎಂಬ ಮಂತ್ರವು ನಾಲ್ಕು ಮುಖಗಳ ರೂಪದಲ್ಲಿಯೂ ಇರುವುದು. 'ಅಘೋರೇಭ್ಯೋ' ಎಂಬ

ಹೃದಯಾದೀನ್ಯಘೋರೇಣ ಗುಹ್ಯಾದೀನಿತು ವಾಮತಃ ।
ಸದ್ಯೋಜಾತೇನ ಮಂತ್ರೇಣ ಪಾದಾದೀನಿ ಜಗತ್ಪತೇಃ ॥೬೦॥

ಪಂಚಮಂತ್ರತನುಃ ಶಂಭುರೇವಂ ಕಲ್ಪನಯಾ ಭವೇತ್ ।
ಓಂಕಾರಬೀಜಪ್ರಭವಃ ಕಲಾಪಂಚಕಸಂಯುತಃ ॥೬೧॥

ಶುದ್ಧಸ್ಫಟಿಕಸಂಕಾಶಃ ಶುಭಮೇಧಾವಿವರ್ಧನಃ ।
ಸದಾಶಿವಾತ್ಮಾ ವ್ಯೋಮಸ್ಥಃ ಈಶಾನಃ ಪರಿಕೀರ್ತಿತಃ ॥೬೨॥

ಗಾಯತ್ರೀಪ್ರಭವೋ ಮಂತ್ರಃ ಸ್ವರ್ಣವರ್ಣಶ್ಚತುಷ್ಕಲಃ ।
ವಶ್ಯಕೃದ್ಗಜವಾಹಸ್ಥಃ ಈಶ್ವರಃ ಪುರುಷಃ ಸ್ಮೃತಃ ॥೬೩॥

ಅಥರ್ವಪ್ರಭವೋ ಮಂತ್ರಃ ಕಲಾಷ್ಟಕವಿಭೂಷಿತಃ ।
ಅಭಿಚಾರಕ ಇತ್ಯರ್ಥಂ ಅಂಜನಾದ್ರಿಸಮಪ್ರಭಃ ॥೬೪॥

---

ಮಂತ್ರದಿಂದ ಹೃದಯವೇ ಮೊದಲಾದವುಗಳೂ 'ವಾಮದೇವಾಯ ನಮೋ' ಎಂಬ ಮಂತ್ರದಿಂದ ಗುಹ್ಯಾದಿ ಅವಯವಗಳೂ, 'ಸದ್ಯೋಜಾತಂ ಪ್ರಪದ್ಯಾಮಿ' ಎಂಬ ಮಂತ್ರಗಳಿಂದ ಜಗದೀಶ್ವರನ ಪಾದಾದಿ ಅವಯವಗಳೂ ಕಲ್ಪಿತಗಳಾಗಿವೆ. ಈ ರೀತಿ ಶಂಭುವನ್ನು ಕಲ್ಪನೆಯಿಂದ ಐದು ಮಂತ್ರಗಳ ಸ್ವರೂಪವಾದ ದೇಹವುಳ್ಳವನೆಂದು ಭಾವಿಸಿ ಧ್ಯಾನಿಸಬೇಕು. ||೫೯-೬೦||

ಓಕಾರವೆಂಬ ಬೀಜದಿಂದ ಜನಿಸಿದವನು, ಹಿಂದೆ ಹೇಳಿದ ನಿವೃತ್ತಿಯೇ ಮೊದಲಾದ ಐದು ಕಲೆಗಳಿಂದ ಯುಕ್ತನಾದವನು, ಸ್ವಚ್ಛವಾದ ಸ್ಫಟಿಕದಂತೆ ಕಾಂತಿಯುಳ್ಳವನು, ಭಕ್ತರಿಗೆ ಶುಭಕರವಾದ ಪ್ರತಿಭೆಯನ್ನು ಹೆಚ್ಚಿಸುವವನು, ಸದಾಶಿವಾತ್ಮಕನು, ವಿಶಾಲವಾದ ಆಕಾಶವನ್ನೇ ನಿಲಯವನ್ನಾಗಿ ಮಾಡಿಕೊಂಡಿರುವವನು, ಈಶಾನನೆಂದು ಹೇಳಲ್ಪಡುವವನು, ಗಾಯತ್ರೀಮಂತ್ರದಿಂದ ಲಭಿಸುವ ಫಲಸ್ವರೂಪನು. ಸುವರ್ಣವರ್ಣದಿಂದ ಶೋಭಿಸುತ್ತಾ ನಾಲ್ಕು ಕಲಾತ್ಮಕವಾದ ಪ್ರಣವಸ್ವರೂಪಿಯಾದವನು, ಸರ್ವಪ್ರಾಣಿಯನ್ನೂ ವಶಪಡಿಸಿಕೊಳ್ಳುವವನು, ಆನೆಯನ್ನೇ ವಾಹನವನ್ನಾಗಿ ಮಾಡಿಕೊಂಡಿರುವವನು, ಈಶ್ವರನು ಪರಮಪುರುಷನೆಂದು ಹೇಳಲ್ಪಟ್ಟಿರುವವನು, ಸರ್ವವ್ಯಾಪಕನು, ಸಕಲೈಶ್ವರ್ಯಸ್ವರೂಪನು. ||೬೧-೬೨-೬೩||

ಅಥರ್ವಣವೇದಜನ್ಯವಾದ ಮಂತ್ರಕ್ಕೆ ಉತ್ಪತ್ತಿಸ್ಥಾನನೆನಿಸಿದವನೇ ಈ

 

ಅಶೇಷಾಘಹರಃ ಪುಂಸಾಮಘೋರಾರುದ್ರವಿಗ್ರಹಃ ।
ಸಾಮವೇದಭವೋ ಮಂತ್ರಸ್ತ್ರಯೋದಶಕಲಾನ್ವಿತಃ ॥೬೫॥

ವಾಮದೇವಃಪ್ರವಾಲಾಭೋ ವಾರಿತತ್ವಸ್ಥಿತೋ ಹರಿಃ ।
ಯಜುರ್ವೇದೋದ್ಭವೋ ಮಂತ್ರಃ ಕಲಾಷ್ಟಕಯುತಃ ಸ್ಥಿತಃ ॥೬೬॥

ಶಾಂತಿಕೃತ್ಪೃಥಿವೀಸಂಸ್ಥಃ ಸದ್ಯೋಜಾತಃ ಪಿತಾಮಹಃ ।
ತತ್ಪುರುಷಶ್ಚಂದ್ರಬಿಂಬಾಭೋ ಋಗ್ವೇದವದನೋಂಶುಮತ್॥೬೭॥

ಕಲಾಪಂಚದಶೈರ್ಯುಕ್ತೋ ಮುಖ್ಯಮಂತ್ರಾತ್ಮಕೋ ಹಿ ಸಃ ।
ಪಂಚವಕ್ತ್ರಾಃ ಸ್ಮೃತಾಃ ಸರ್ವೇ ದಶದೋರ್ದಂಡಭೂಷಿತಾಃ ॥೬೮॥

ಖಡ್ಗಖೇಟಧನುರ್ಬಾಣಕಮಂಡಲ್ವಕ್ಷಧಾರಿಣಃ ।
ವರಾಭಯೋಪೇತಕರಾಃ ಶೂಲಪಂಕಜಪಾಣಯಃ ॥೬೯॥

---

ಪರಮಾತ್ಮನು. ಅಲ್ಲಿ ಹೇಳಿರುವಂತೆ ಎಂಟು ಕಲೆಗಳಿಂದ ಅಲಂಕೃತನಾಗಿರುವವನು. ಅಭಿಚಾರಕರೂಪವಾದ ಪ್ರಯೋಜನವನ್ನು ಕೊಡುತ್ತಾ ಅಂಜನಪರ್ವತಕ್ಕೆ ಸದೃಶವಾದ ಕಾಂತಿಯುಳ್ಳವನಾಗಿರುವನು. ಅಘೋರರೂಪವಾದ ರುದ್ರಮೂರ್ತಿಯು ಪುರುಷರ ಸಮಸ್ತ ಪಾಪಗಳನ್ನೂ ನಾಶಮಾಡುವುದು. ಸಾಮವೇದಜನ್ಯವಾದ ಮಂತ್ರಸ್ವರೂಪವೇ ಆ ಮೂರ್ತಿಯು. ಅದು ಹದಿಮೂರು ಕಲೆಗಳಿಂದ ಯುಕ್ತವಾದುದು. ॥೬೪-೬೫॥

ವಾಮದೇವನಾಮಕವಾದ ಶಿವನ ಮುಖವು ಹವಳದ ಕಾಂತಿಯುಳ್ಳದಾಗಿ ಜಲತತ್ವವೆನಿಸಿಕೊಂಡಿದೆ. ಅದು ವಿಷ್ಣುರೂಪಕ್ಕೆ ಆಶ್ರಯಕೊಡತಕ್ಕುದು. ಯಜುರ್ವೇದದಲ್ಲಿ ತೋರಿಬರುವ ಮಂತ್ರವೇ ಇದರ ಸ್ವರೂಪವು. ಎಂಟು ಕಲೆಗಳಿಂದ ಯುಕ್ತವಾಗಿ ಶಾಂತಿಪ್ರದವೆನಿಸಿಕೊಂಡಿದೆ. ಈ ಸದ್ಯೋಜಾತಮಂತ್ರವು ಬ್ರಹ್ಮಸ್ವರೂಪವಾದುದು. ತತ್ಪುರುಷಮಂತ್ರವು ಚಂದ್ರಬಿಂಬಸಮಾನಕಾಂತಿಯುಕ್ತವಾಗಿ ಋಗ್ವೇದಸ್ವರೂಪವುಳ್ಳದು. ಮತ್ತು ತೇಜಸ್ತತ್ವಪ್ರಧಾನವಾದುದು. ಇದು ಹದಿನೈದು ಕಲೆಗಳಿಂದ ಯುಕ್ತವಾಗಿ ಮುಖ್ಯಮಂತ್ರಸ್ವರೂಪಿಯಾಗಿರುವುದು. ॥೬೬-೬೭॥

ಪರಶಿವನ ಸ್ವರೂಪವು ಐದುಮುಖಗಳಿಂದಲೂ ಹತ್ತು ದಂಡಾಕಾರವಾದ ತೋಳ್ಗಳಿಂದಲೂ ಅಲಂಕೃತವಾಗಿ, ಆ ತೋಳುಗಳಲ್ಲಿ ಕತ್ತಿ, ಗುರಾಣಿ, ಬಿಲ್ಲು, ಬಾಣ, ಕಮಂಡಲು, ಅಕ್ಷಮಾಲಿಕಾ, ವರದಮುದ್ರೆ, ಅಭಯಮುದ್ರೆ, ಶೂಲ,

ಅಘೋರೋ ಘೋರ ಏತೇಷು ತದನ್ಯೇ ಸೌಮ್ಯವಿಗ್ರಹಾಃ ।
ಏವಂ ಧ್ಯಾತ್ವಾ ಸ ದೇಶಸ್ಯ ಪಂಚಬ್ರಹ್ಮಾತ್ಮತಾಂ ವಿಭೋಃ ॥೭೦॥

ತತ್ತದ್ಬ್ರಹ್ಮಕಲಾಭೇದೈರ್ವಿಚಿಂತ್ಯಾಂಗಾನಿ ಕಲ್ಪಯೇತ್ ॥೭೧॥

॥ ಶ್ರೀ ಸ್ಕಂದ ಉವಾಚ ॥

ಬುದ್ಧ್ಯಾಽಭಿಧ್ಯಾಯ ರುಧ್ವಾ ವಿಷಮವಿಷಯಜಾಗಾಧಬೋಧೇ ಪ್ರಮುಗ್ಧಂ
ದುಗ್ಧಸ್ರಾಯಮದಿಗ್ಧಸರ್ವವಿಷಯಾಕಾರೌಘದಗ್ಧಾಘಕಂ ।
ಧ್ಯಾಯೀ ತತ್ಕ್ಷಣಮೇವ ಶಿಕ್ಷಣಚಣಂ ತ್ರ್ಯಕ್ಷಂ ಮಹೋಕ್ಷಸ್ಥಿತಂ
ಸರ್ವಾಸಾರವಿಚಕ್ಷಣೇಕ್ಷಣಮುಮೇ ವಿಕ್ಷೀಣಚಿತ್ತಾಕ್ಷಕಃ ॥೭೨॥

ವಾರಂ ವಾರಮಪಾರಸಾರಕರುಣೋ ವಾರಾಶಿಭಾರಾಶಿಹೃ-
ದ್ವೋಽೀರಾಶೀ ವಿಷಯಾನುಭೂಷಿತಭವೋ ಭಾವೋಽಪ್ಯಭಾವೋಜ್ಝಿತಃ ।

---

ಕಮಲ ಇವುಗಳನ್ನು ಧರಿಸಿರುವುದು. ಈ ಐದು ಮೂರ್ತಿಗಳಲ್ಲಿ ಅಘೋರ ಮೂರ್ತಿಯು ಭಯಂಕರವಾದದ್ದು; ಉಳಿದ ತತ್ಪುರುಷ, ಸದ್ಯೋಜಾತ, ವಾಮ ದೇವ ಮತ್ತು ಈಶಾನಮೂರ್ತಿಗಳು ಸೌಮ್ಯಾಕೃತಿಗಳು. ಈ ರೀತಿಯಾಗಿ ಯಾವಾಗಲೂ ಮಹೇಶನ ಪಂಚಬ್ರಹ್ಮಸ್ವರೂಪವನ್ನು ತಿಳಿದು ಧ್ಯಾನಮಾಡಿ, ಆಯಾ ಬ್ರಹ್ಮಾಕೃತಿಗಳಿಗೆ ಹೇಳಿದ ಕಲಾಭೇದಗಳಿಂದ ಅಂಗಗಳನ್ನು ಕಲ್ಪಿಸಬೇಕು. ॥೬೮-೬೯-೭೦-೭೧॥

ವಿಷಮವಾಗಿರುವ ಸ್ರಕ್ಚಂದನವನಿತಾವಿಷಯಜನ್ಯವಾದ ಅಗಾಧವಾದ ಅಜ್ಞಾನದಲ್ಲಿ ಮುಗ್ಧವಾಗಿರುವ ಮನಸ್ಸನ್ನು ಶಿವವಿಷಯಕವಾದ ಸುಜ್ಞಾನದಿಂದ ತಡೆದು, ಕ್ಷೀರದಂತೆ ಸ್ವಚ್ಛನಾಗಿ, ಸಕಲ ವಿಷಯದುಃಖಗಳಿಂದಲೂ ಲೇಪಿತನಲ್ಲ ದವನಾಗಿ ಸಮಸ್ತ ಪಾಪಗಳನ್ನೂ ಸುಟ್ಟು ಭಸ್ಮಮಾಡುವ ಶಿಕ್ಷಣನಿಪುಣನೂ ಮುಕ್ಕಣ್ಣನೂ ಮದವೃಷಭವನ್ನೇರಿರುವನೂ, ಸಕಲ ರೂಪಗ್ರಹಣಚತುರವಾದ ಕಣ್ಣುಳ್ಳವನೂ ಆದ ಮಹೇಶ್ವರನನ್ನು ಬುದ್ಧಿಪೂರ್ವಕವಾಗಿ ಧ್ಯಾನಮಾಡುವ ಭಕ್ತನು ಮನ್ಮಥಾಂತಕನಾದ ಶಿವನ ಸ್ವರೂಪವನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ. ॥೭೨॥

ಪರಮೇಶ್ವರನು ಅಪರಿಮಿತವಾದ ಕರುಣಾಸಮುದ್ರನು. ಮಹಾಸಮುದ್ರ ಗಳಿಂದ ಪರಿವೃತವಾದ ಅಖಂಡಬ್ರಹ್ಮಾಂಡವನ್ನೇ ಶಿರಸ್ಸಿನಮೇಲೆ ಹೊಂದಿರುವ

ಯೋಽಷಾರ್ಧಾಕೃತಿಕಾಮುಕಾಯದಹನಃ ಸಂಮೋಹಿನಾಂ ಮೋಹಿನೋ
ಹೇಯಾನಾಮಪಿ ಹಾಯಿನಾಮುಗಸುತೇ ಭೂಮ್ನೈಕಸೀಮಾ ಶಿವಃ ॥೭೩॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಶಿವಮೂರ್ತಿಭೇದಧ್ಯಾನಂ
ನಾಮ ಅಷ್ಟಚತ್ವಾರಿಂಶೋಽಧ್ಯಾಯಃ

---

ಆದಿಶೇಷನನ್ನೇ ಅಲಂಕಾರವಸ್ತುವನ್ನಾಗಿ ಮಾಡಿಕೊಂಡಿರುವವನು. ಭವಸಾಗರದಿಂದ ದಾಟಿಸುವವನಾದರೂ ಅಭಾವಕ್ಕೆ ಸಿಕ್ಕಿದವನಲ್ಲ. ಸರ್ವದಾ ಸಚ್ಚಿದಾನಂದರೂಪದಲ್ಲಿರುವ ಸ್ಥಿರಾತ್ಮಕನು. ತನ್ನ ಪತ್ನಿಯಾದ ಪಾರ್ವತಿಗೆ ಅರ್ಧದೇಹವನ್ನು ದಯಪಾಲಿಸಿರುವವನು. ಅಜ್ಞಾನಿಗಳಿಗೂ ನಾಸ್ತಿಕರಿಗೂ ಜ್ಞಾನಪ್ರದನೆನಿಸಿ ಆಕರ್ಷಕನಾಗಿರುವವನು. ಪ್ರಪಂಚದಲ್ಲಿ ಅಪವಿತ್ರ ಮತ್ತು ಅಶುದ್ಧಗಳೆನಿಸಿಕೊಂಡಿರುವ ಸಕಲ ವಸ್ತುಜಾಲವನ್ನೂ ಪರಿಶುದ್ಧಗೊಳಿಸುವ ಮಹಾತ್ಮನು. ಇಂತಹ ಪರಮಾತ್ಮನನ್ನು ಎಲ್ಲರೂ ಭಕ್ತಿಯಿಂದ ಧ್ಯಾನಿಸುತ್ತಿರಬೇಕು. ॥೭೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ಏಕೋನಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಈಶಾನಃ ಸರ್ವವಿದ್ಯಾನಾಮಿತ್ಯೇಷಾ ಶಂಖಪಾಂಡರಾ ।
ಧೂರ್ಜಟೇರೂರ್ಧ್ವಮೂರ್ಧಾ ಸಾ ಶಶಿನಾ ಸಹಿತಾ ಕಲಾ ॥೧॥

ಈಶ್ವರಃ ಸರ್ವಭೂತಾನಾಮಿತ್ಯೇಷಾ ಕುಂದಸನ್ನಿಭಾ ।
ಶರ್ವಸ್ಯ ಪೂರ್ವಮೂರ್ಧಾಽಸೌ ಶಕ್ತ್ಯಾ ಯುಕ್ತಾಂಗದಾಖ್ಯಯಾ॥೨॥

ಬ್ರಹ್ಮಾಧಿಪತಿರಿತ್ಯಗ್ರೇ ಬ್ರಹ್ಮಣೋಽಧಿಪತಿಃ ಸದಾ ।
ಬ್ರಹ್ಮೇತ್ಯೇಷಾ ಶಶಾಂಕಾಂಕಾ ಸೈಷಾ ಮೂರ್ಧಾಸ್ಯ ದಕ್ಷಿಣಾ ॥೩॥

---

## ನಲವತ್ತೊಂಬತ್ತನೆಯ ಅಧ್ಯಾಯ

ಓ ಜೈಗೀಷವ್ಯಮುನಿಯೆ, 'ಈಶಾನಃ ಸರ್ವವಿದ್ಯಾನಾಂ' ಎಂಬ ಮಂತ್ರ ಕಲೆಯು ಶಂಖದಂತೆ ಬಿಳಿಯಬಣ್ಣವುಳ್ಳದ್ದಾಗಿ ಶಿವನ ಮೇಲ್ಮುಖದ ಚಂದ್ರಕಲಾ ಯುಕ್ತವಾದ ಕಲೆಯೆಂದು ತಿಳಿಯಬೇಕು. 'ಈಶ್ವರಃ ಸರ್ವಭೂತಾನಾಂ' ಎಂಬ ಮಂತ್ರಕಲೆಯು ಮಲ್ಲಿಗೆಯ ಬಣ್ಣವುಳ್ಳದ್ದಾಗಿ ಅಂಗದಸಂಜ್ಞಕವಾದ ಶಕ್ತಿಯಿಂದ ಯುಕ್ತವಾಗಿ ಶಿವನ ಪೂರ್ವದಿಕ್ಕಿನ ತಲೆಯೆನಿಸಿಕೊಂಡಿರುವುದು. ॥೧-೨॥

'ಬ್ರಹ್ಮಾಧಿಪತಿಃ ಬ್ರಹ್ಮಣೋಽಧಿಪತಿಃ' ಎಂಬುದು ಚಂದ್ರಾಂಕಿತವಾದ ಕಲೆಯೆನಿಸಿ, ಶಿವನ ದಕ್ಷಿಣದ ತಲೆಯಾಗಿಯೂ, '. ಬ್ರಹ್ಮಾ ಶಿವೋಮೇಅಸ್ತು' ಎಂಬ ಕಲೆಯು ಶುದ್ಧಸ್ಫಟಿಕದಂತೆ ಬೆಳ್ಳಗೆ ಹೊಳೆಯುತ್ತಾ ಮೆಣಸಿನಕಾಯಿನ ರಸದಂತೆ

ಶಿವೋ ನೋಽಸ್ತ್ವಿತಿ ಕಲಾ ಶುದ್ಧಸ್ಫಟಿಕಭಾಸ್ವರಾ ।
ಮಹೇಶಸ್ಯೋತ್ತರಾ ಮೂರ್ಧಾ ಮರೀಚಿರಸವೀಚಿಕಾ ॥೪॥

ಸದಾಶಿವೋಮಿತಿ ಕಲಾ ಗೋಕ್ಷೀರಧವಲಾಕೃತಿಃ ।
ಶಿವಸ್ಯ ಪಶ್ಚಿಮೋ ಮೂರ್ಧಾ ಜ್ವಾಲಿನೀ ನೀಲನೋಜ್ವಲಾ ॥೫॥

ಕಲಾ ತತ್ಪುರುಷಾಯೇತಿ ಪೂರ್ವಾ ವಿದ್ಮಹ ಇತ್ಯಸೌ ।
ಶಾಂತಿಯುಕ್ತಾ ಜಪಾವರ್ಣಾ ಪೂರ್ವವಕ್ತ್ರಂ ಪುರದ್ವಿಷಃ ॥೬॥

ಮಹಾದೇವಾಯ ಪೂರ್ವಾಯ ಧೀಮಹೀತಿ ಕಲಾಶ್ರುತಾ ।
ಸಾ ವಿದ್ಯಾ ಸಹಿತಾ ಕೃಷ್ಣಾ ದಕ್ಷಿಣಾವಕ್ತ್ರಮೀಶಿತುಃ ॥೭॥

ಕಲಾಪ್ರತಿಷ್ಠಾಸಹಿತಾ ತಂನೋ ರುದ್ರ ಇತೀರಿತಾ ।
ವಕ್ತ್ರಮುತ್ತರ ಈಶಸ್ಯ ವರ್ಣೇನ ಸ್ಫಟಿಕೋಪಮಂ ॥೮॥

ಪ್ರಚೋದಯಾದಿತಿ ಕಲಾ ಪ್ರತಪ್ತಕನಕೋಪಮಾ ।
ಶಿವಸ್ಯ ಪಶ್ಚಿಮಂ ವಕ್ತ್ರಂ ನಿವೃತ್ತ್ಯಾ ನಿತ್ಯಸಂಹಿತಂ ॥೯॥

---

ಬೆಳಗುತ್ತಾ ಇರುವ ಮಹೇಶ್ವರನ ಉತ್ತರದ ತಲೆಯು; 'ಸದಾಶಿವೋಂ' ಎಂಬ ಕಲೆಯು ಹಸುವಿನ ಹಾಲಿನಂತೆ ಶುಭ್ರವಾದ ಆಕಾರವುಳ್ಳದ್ದಾಗಿ ಜ್ವಾಲೆಯನ್ನು ಉಜ್ವಲವಾಗಿ ತೋರ್ಪಡಿಸುವ ಶಿವನ ಪಶ್ಚಿಮದ ತಲೆಯೆನಿಸಿದೆ. ॥೩-೪-೫॥

'ತತ್ಪುರುಷಾಯ ವಿದ್ಮಹೇ' ಎಂಬ ಕಲೆಯು ಶಾಂತಿಯುಕ್ತವಾಗಿ ದಾಸವಾಳದ ಪುಷ್ಪವರ್ಣವುಳ್ಳದ್ದಾಗಿ ಶಿವನ ಪೂರ್ವಮುಖವೆನಿಸಿದೆ. 'ಮಹಾದೇವಾಯ ಧೀಮಹಿ' ಎಂಬ ಪ್ರಸಿದ್ಧವಾದ ಕಲಾವಿದ್ಯೆಯು ಕಪ್ಪುಬಣ್ಣಯುಕ್ತವಾಗಿ ಈಶ್ವರನ ದಕ್ಷಿಣದಿಕ್ಕಿನ ಮುಖವೆನಿಸಿರುವುದು. ॥೬-೭॥

ಪ್ರತಿಷ್ಠಾಯುಕ್ತವಾದ ಕಲೆಯು 'ಶಂನೋರುದ್ರ' ಎಂದು ಹೇಳಲ್ಪಟ್ಟಿದೆ. ಸ್ಫಟಿಕಸದೃಶವಾದ ಬಣ್ಣವುಳ್ಳ ಇದು ಈಶ್ವರನ ಉತ್ತರಮುಖವು; ಕಾದ ಚಿನ್ನದ ಬಣ್ಣವುಳ್ಳ 'ಪ್ರಚೋದಯಾತ್' ಎಂಬ ಕಲೆಯು ನಿವೃತ್ತಿರೂಪವಾದ ನಿತ್ಯಸಂಹಿತಾಯುಕ್ತವಾದ ಶಿವನ ಪಶ್ಚಿಮಮುಖವು; 'ಅಘೋರೇಭ್ಯಃ' ಎಂಬ ಕಲೆಯು ನೀಲವರ್ಣಯುಕ್ತವಾಗಿ ಶಿವನ ಹೃದಯಾಂತರಾಳಸ್ವರೂಪವಾಗಿರುವುದು.

ಅಘೋರೇಭ್ಯಃ ಕಲಾ ನೀಲಹೃದಯಾಂತಮಯಾ ಯುತಾ ।
ಅಥ ಘೋರೇಭ್ಯ ಇತ್ಯೇಷಾ ರಕ್ತಾಮೋಘಾ ಸಖೀಗಣಾ ॥೧೦॥

ಪೀತಾ ಘೋರಾ ಕಲಾಸ್ಕಂಧೋ ದಕ್ಷಿಣಃ ಕ್ಷುಧಯಾ ಯುತಃ ।
ವಾಮಾ ನಿದ್ರಾಯುತಾ ಘೋರತರೇಭ್ಯ ಇತಿ ಕೀರಭಾಃ ॥೧೧॥

ನೀಲಾ ಮೃತ್ಯುಯುತಾ ನಾಭಿಃ ಸರ್ವತಃ ಶರ್ವರೂಪಿಣೀ ।
ಕುಕ್ಷಿಃ ಸರ್ವೇಭ್ಯ ಇತ್ಯೇಷಾ ಕಲಾ ಸಿಂಧುರಸುಂದರಾ ॥೧೨॥

ರಜತಾಸಹಿತಾ ಯಾತಿ ಮೂಲಾಧಾರಾ ಧರಾತ್ಮತಾಂ ।
ಲಿಂಗಮೌಳಿಯುತಾ ಪೀತಾ ಜ್ಯೇಷ್ಠಾಯನಮ ಇತ್ಯಸೌ ॥೧೩॥

ಸದ್ಯೋರುಸ್ಥವಿರಾನೀಲಾ ಸ್ಯಾದ್ರುದ್ರಾಯ ನಮಃ ಕಲಾ ।
ಪೀತಾಸವಾಲ್ಪವಾಮೋರುಃ ಕಾಲಾಯ ನಮ ಇತ್ಯಸೌ ॥೧೪॥

---

'ಅಥ ಘೋರೇಭ್ಯ' ಎಂಬ ಈ ಕಲೆಯು ರಕ್ತವರ್ಣವಿಶಿಷ್ಟವಾಗಿ ಅಮೋಘವಾದ ಪರಶಿವನ ಕಿಂಕರಗಣವೆನಿಸಿರುವುದು. ॥೮-೯-೧೦॥

'ಘೋರ' ಎಂಬ ಕಲೆಯು ಹೊಂಬಣ್ಣವಿಶಿಷ್ಟವಾಗಿ ಕ್ಷುಧಾವಿಶಿಷ್ಟವಾದ ಬಲಭುಜವಾಗಿರುವುದು. ಎಡಭುಜವು 'ಘೋರತರೇಭ್ಯಃ' ಎಂಬ ಕಲಾರೂಪಿಯೂ ಸುಂದರವೂ ನಿದ್ರಾಯುಕ್ತವೂ, ಗಿಣಿಯ ಬಣ್ಣವುಳ್ಳದ್ದೂ ಎನಿಸಿರುವುದು. ಶರ್ವರೂಪ ವಾದಕಲೆಯು ನೀಲವರ್ಣವುಳ್ಳದ್ದಾಗಿಯೂ ಮೃತ್ಯುಯುಕ್ತವೂ ಎಲ್ಲಾಕಡೆಗಳಲ್ಲೂ ಶಿವರೂಪಿಯೂ ಆಗಿ ಶಿವನ ನಾಭಿಯೆನಿಸಿದೆ. 'ಸರ್ವೇಭ್ಯಃ' ಎಂಬ ಈ ಕಲೆಯು ಚಂದ್ರನಂತೆ ಸುಂದರವಾಗಿ ಶಿವನ ಹೊಟ್ಟೆಯಾಗಿರುವುದು. 'ಜ್ಯೇಷ್ಠಾಯ ನಮಃ' ಎಂಬಕಲೆಯು ಬೆಳ್ಳಿಯಿಂದ ಯುಕ್ತವಾಗಿ ಮೂಲಾಧಾರವಾಗಿಯೂ ಭೂಮಿಯ ಸ್ವರೂಪವಿಶಿಷ್ಟವಾಗಿಯೂ ಇದ್ದು ಲಿಂಗಮೌಳಿಯುಕ್ತವೂ ಪೀತವರ್ಣವುಳ್ಳದ್ದೂ ಆಗಿರುವುದು. ॥೧೧-೧೨-೧೩॥

'ರುದ್ರಾಯ ನಮಃ' ಎಂಬ ಕಲೆಯು ನೀಲವರ್ಣಯುಕ್ತವೂ ದಪ್ಪವೂ ಆಗಿ ಶಿವನ ಬಲದೊಡೆಯೆನಿಸಿದೆ. 'ಕಾಲಾಯ ನಮಃ' ಎಂಬ ಕಲೆಯು ಪೀತ ವರ್ಣಯುಕ್ತವಾಗಿ ಅಲ್ಪಗಾತ್ರವೂ ಉಳ್ಳದ್ದಾಗಿ ಎಡದೊಡೆಯಾಗಿದೆ. 'ಕಾಲಾ' ಎಂಬ ಕಲೆಯು ಶುಕ್ಲವರ್ಣವಿಶಿಷ್ಟವಾಗಿ, ದಕ್ಷಿಣದಿಗ್ಭಾಗದ ಕಾಲಕಲೆಯೆನಿಸಿದೆ.

ಶುಕ್ಲಾ ಕಾಮುಕಲಾಕಾಲಾ ಸಹಿತಾಂಜನದಕ್ಷಿಣಾ ।
ಕಾಲಾ ವಿಕರಣಾಯಾಥ ನಮಃ ಶ್ಯಾಮಾಸಮಂ ಯಮಾಃ ॥೧೫॥

ಸ ಕ್ರಿಯಾ ದಕ್ಷಿಣಾ ಜಂಘಾ ನೀಲಾಬಲಕಲಾ ವಿಭೋಃ ।
ವಾಮಾ ವಿಕರಣಾಯಾಥ ಬುದ್ಧಿಸಿದ್ಧಿಯುತಾರುಣಾ ॥೧೬॥

ವಿದ್ಯುದ್ವರ್ಣಾಬಲಕಲಾ ಸವ್ಯಸ್ಫಿಕ್ಕಾರ್ಯಯಾ ಯುತಾ ।
ವಾಮಃ ಪ್ರಮಥನಾಯಾಥ ನಮೋ ಧಾತ್ರೀಯುತಾಸಿತಾ ॥೧೭॥

ಬಲಾಕಾಮಾಯುತಾ ಸೌಮ್ಯಾ ಬಲಪ್ರಮಥಿನೀ ಕಲಾ ।
ಮನೋನ್ಮನೀಯುತಾಂ ಧ್ಯಾಯೇದ್ವಾಮಪಾರ್ಶ್ವಂ ಪಿನಾಕಿನಃ ॥೧೮॥

ಸದ್ಯೋಜಾತಂ ಪ್ರಪದ್ಯಾಮೀತ್ಯೇಷಾ ಬಾಲಾರ್ಕಸನ್ನಿಭಾ ।
ಕಲಾ ಸಿದ್ಧಿಸಮಾಯುಕ್ತಾ ಧೂರ್ಜಟೇರ್ದಕ್ಷಿಣಂ ಪದಂ ॥೧೯॥

---

ಶ್ಯಾಮಲವರ್ಣದಿಂದ ರಂಜಿಸುತ್ತಾ ಕಲವಿಕರಣೀ ಎಂಬ ಕಲೆಯು ಪರಶಿವನ ಮಂಡಿಯಾಗಿದೆ. ॥೧೪-೧೫॥

ಬಲಾ, ಎಂಬ ಕಲೆಯು ನೀಲವರ್ಣವಿಶಿಷ್ಟವಾಗಿ, ಕ್ರಿಯಾವತ್ತಾದ ಬಲ ಮೊಳಕಾಲಾಗಿರುವುದು. ಬಲವಿಕರಣಾ ಎಂಬ ಕಲೆಯು ಅರುಣವರ್ಣವಿಶಿಷ್ಟವಾಗಿ ಶಂಕರನ ಬುದ್ಧಿರೂಪವಾಗಿದೆ. ಅಬಲಾಕಲಾ ಎಂಬುದು ಮಿಂಚಿನಂತೆಹೊಳೆಯುತ್ತಾ ಬಲಹಿಮ್ಮಡಿಯಾಗಿರುವುದು. ಪ್ರಮಥನರೂಪಕಲೆಯು ನೆಲ್ಲಿಕಾಯಿಬಣ್ಣದಿಂದ ರಂಜಿಸುತ್ತಾ ಎಡಕಾಲಿನ ಹಿಮ್ಮಡಿಯೆನಿಸಿದೆ. ಬಲಪ್ರಮಥಿನೀರೂಪವಾದ ಕಲೆಯು ಬಲ, ಕಾಮ, ಇವುಗಳ ರೂಪದಲ್ಲಿದ್ದು ಸೌಮ್ಯಗುಣವಿಶಿಷ್ಟವಾಗಿದೆ. ಇಂತಹ ಸಕಲಕಲಾವಿಶಿಷ್ಟನೂ, ಮಂತ್ರದೇಹಿಯೂ ಆದ ಪರಶಿವನು ಸರ್ವದಾ ಮನೋನ್ಮನೀದೇವಿಯನ್ನು ಎಡಭಾಗದಲ್ಲಿ ಹೊಂದಿ ಪ್ರಕಾಶಿಸುತ್ತಿರುವನೆಂದು ತಿಳಿದು ಸರ್ವದಾ ಆ ಭಾವನೆಯಿಂದಲೇ ಧ್ಯಾನಿಸುತ್ತಿರಬೇಕು. ॥೧೬-೧೭-೧೮॥

'ಸದ್ಯೋಜಾತಂ ಪ್ರಪದ್ಯಾಮಿ' ಎಂಬ ಈ ಬಾಲಸೂರ್ಯನಸಮಾನ ಕಾಂತಿಯುಳ್ಳ ಕಲೆಯು ಸಿದ್ಧಿಯುಕ್ತವಾಗಿ ಶಿವನ ಬಲಗಾಲೆನಿಸಿರುವುದು. 'ಸದ್ಯೋಜಾತಾಯ ವೈ ನಮಃ' ಎಂಬ ಕಲೆಯು ಕಪ್ಪುಬಣ್ಣದಿಂದ ವಿರಾಜಿಸುತ್ತಾ ಬುದ್ಧಿ

ಸದ್ಯೋಜಾತಾಯ ವೈ ಪೂರ್ವಾ ನಮ ಇತ್ಯಸಿತಾ ಕಲಾ ।
ಬುದ್ಧಿಶಕ್ತೇಃ ಸಹಚರೀ ನಾಮ ಗೌರೀಪತೇಃ ಪದಂ ॥೨೦॥

ನೀಲಾಭವೇತ್ಕಲಾಯುಕ್ತಾ ಸಹಿತೋ ದಕ್ಷಿಣಃ ಕರಃ ।
ನೀಲಾಭವೇತ್ಕಲಾಸಾತು ವಾಮೋ ಲಕ್ಷ್ಮೀಯುತಃ ಕರಃ ॥೨೧॥

ಮೇಧಾಸಹಚರೀ ಸೀತಾ ಸಾಪಿಚಾತಿಭವೇಕಲಾ ।
ಭವೋದ್ಭವೋಮಿತಿ ಕಲಾ ಸಾ ಕಾಂತಿರರುಣಾ ಶಿರಃ ॥೨೨॥

ನೀಲಾ ಭವಕಲಾ ಬಾಹುರ್ದಕ್ಷಿಣಃ ಸ್ವಧಯಾ ಯುತಃ ।
ಉದ್ಯದರ್ಕಕರಾಭಾಸಾಮುದ್ಭವಾಯ ನಮಃ ಕಲಾ ॥೨೩॥

ಧೃತಶಕ್ತಿಯುತಾಂ ಧ್ಯಾಯೇದ್ವಾಮಬಾಹುಂ ಜಗತ್ಪತೇಃ ।
ಅಷ್ಟತ್ರಿಂಶತ್ಕಲಾ ದೇವಾಸ್ತ್ರಿನೇತ್ರಾಶ್ಚ ಚತುರ್ಭುಜಾಃ ॥೨೪॥

---

ರೂಪವಾದ ಮತ್ತು ಶಕ್ತಿಯುಕ್ತವಾದ ಆ ಗೌರೀರಮಣನ ಎಡಪಾದವಾಗಿರುವುದು. ||೧೯-೨೦||

ಭವರೂಪವಾದ ಕಲೆಯಿಂದ ಯುಕ್ತನಾಗಿ, ನೀಲವರ್ಣದಿಂದ ರಂಜಿತ ವಾದುದೇ ಪರಶಿವನ ಬಲಗೈ. ಅದೇ ರೀತಿಯ ಅಭವಕಲೆಯಿಂದ ನೀಲವರ್ಣ ವಿಶಿಷ್ಟವಾಗಿರುವುದು ಲಕ್ಷ್ಮೀಪ್ರದವಾದ ಈಶ್ವರನ ಎಡಗೈ. ಅತಿ ಭವಕಲೆಯೆಂಬು ವುದೇ ಶಂಕರನಿಗೆ ಮೇಧಾರೂಪದಲ್ಲಿ ವಿರಾಜಿಸುವುದು. ಭವೋದ್ಭವರೂಪವಾದ ಕಲೆಯು ಅರುಣಕಾಂತಿವಿಶಿಷ್ಟವಾಗಿ ಪರಶಿವನ ಶಿರೋರೂಪದಲ್ಲಿರುವುದು. ಮಹಾ ದೇವನ ದಕ್ಷಿಣಬಾಹುವೂ ಸಹ ಭವಕಲಾರೂಪನಾಗಿ ನೀಲವರ್ಣವಿಶಿಷ್ಟವಾಗಿ ಸ್ವಧಾದೇವಿಯ (ಅಗ್ನಿಪತ್ನೀ) ರೂಪದಲ್ಲಿರುವುದು. 'ಭವೋದ್ಭವಾಯ ನಮಃ' ಎಂಬ ಮಂತ್ರಕಲೆಯು ಉದಯಕಾಲದ ಬಾಲಸೂರ್ಯನ ಕಾಂತಿಯಂತೆ ಮನೋಹರ ವಾಗಿ, ಮಹೇಶ್ವರನ ದೇಹಕಾಂತಿಯಾಗಿ ಪ್ರಕಾಶಿಸುವುದು. ಈ ರೀತಿ ಮಹೇಶ್ವರನ ದೇಹವು ಕೇವಲ ಕಲಾರೂಪವಾದದ್ದೆಂದೇ ತಿಳಿಯಬೇಕು. ||೨೧-೨೨-೨೩||

ವಿಶೇಷ ಶಕ್ತಿಯನ್ನು ಧರಿಸಿ ಸರ್ವಶಕ್ತ್ಯಾತ್ಮಕವಾಗಿರುವ ಜಗದೊಡೆಯನ ಎಡಗೈಯನ್ನೂ ಧ್ಯಾನಮಾಡಬೇಕು. ಹೀಗೆ ಮೂವತ್ತೆಂಟು ಕಲೆಗಳಿಂದ ಯುಕ್ತ ವಾಗಿ ಸರ್ವದೇವತಾಮಯವೆನಿಸಿ ಮೂರುಕಣ್ಣು, ನಾಲ್ಕು ತೋಳ್ಗಳು, ವರದ

ವರಾಭಯಪರಶ್ವೇಣವಿಲಸತ್ಕರಪಂಕಜಾಃ ।
ತತ್ತದ್ಬ್ರಹ್ಮಸಮಾಕಾರವರ್ಣಾಯುಧಭೃತೋಽಥವಾ ॥೨೫॥

ಏತೇಷಾಂ ವಾಮಭಾಗೇ ತು ವಿಚಿಂತ್ಯಾಃ ಶಕ್ತಯಸ್ತ್ರಿಯಾಃ ।
ಪಾಶಾಂಕುಶಾಭಯವರದ್ಯೋತಮಾನಕರಾಂಬುಜಾಃ ॥೨೬॥

ಶ್ರೀಕಂಠಪ್ರಮುಖಾನ್ರುದ್ರಾನ್ವರ್ಣರೂಪಾಂತ್ಸ ಶಕ್ತಿಕಾನ್ ।
ಪ್ರಭೋರವಯವಾಂ ಧ್ಯಾಯೇದ್ವಾಯೂಕ್ತನ್ಯಾಯವರ್ತ್ಮನಾ ॥೨೭॥

ಸ್ಮರೇತ್ಸಶಕ್ತಿಕಾನ್ರುದ್ರಾನರ್ಧನಾರೀಶ್ವರಾಕೃತೀನ್ ।
ಸಿಂಧೂರಕಾಂಚನಪ್ರಖ್ಯಾನ್ವಾಮದಕ್ಷಿಣಪಾರ್ಶ್ವಗಾನ್ ॥೨೮॥

ಪಾಶಾಂಕುಶಾಕ್ಷವಲಯಶೂಲಮುದ್ರಾವಿರಾಜಿತಾನ್ ।
ಪ್ರಸನ್ನವಕ್ತ್ರಕಮಲಾನ್ನಿಶ್ವಾಂಛಿತದಾಯಕಾನ್ ॥೨೯॥

---

ಮತ್ತು ಅಭಯಮುದ್ರೆಗಳು, ಪರಶು ಮತ್ತು ಜಿಂಕೆ ಇವುಗಳನ್ನು ಧರಿಸಿರುವ ನಾಲ್ಕು ಹಸ್ತಗಳು, ಇವುಗಳಿಂದ ಶೋಭಿಸುವ ಸದ್ಯೋಜಾತಾದಿ ಪರಮೇಶ್ವರನ ಪಂಚಮುಖಗಳು, ಆಯಾ ಬ್ರಹ್ಮಾಕೃತಿ ಸದೃಶವಾದ ಬಣ್ಣ ಮತ್ತು ಆಯುಧಗಳಿಂದ ಸರ್ವದಾ ತೇಜೋಮಯಗಳಾಗಿ ಪ್ರಕಾಶಿಸುತ್ತಿರುವುವು. ॥೨೪-೨೫॥

ಈ ಪಂಚಮುಖಗಳ ಎಡಭಾಗದಲ್ಲಿ ಹಿಂದೆ ಹೇಳಿದ ಸಕಲ ಶಕ್ತಿದೇವತೆಗಳನ್ನೂ ಧ್ಯಾನಿಸಬೇಕು. ಅವು ಪಾಶ, ಅಂಕುಶ, ಅಭಯ ಮತ್ತು ವರದ ಮುದ್ರೆಗಳನ್ನು ತಮ್ಮ ಕೈಯ್ಯಲ್ಲಿ ಹಿಡಿದಿರುವುವು. ಇಂತಹ ಶಕ್ತಿ ದೇವತೆಗಳನ್ನೂ ಧ್ಯಾನಿಸಬೇಕು. ಶ್ರೀಕಂಠನೇ ಮೊದಲಾದ ರುದ್ರದೇವತೆಗಳನ್ನೂ ಆಯಾ ವರ್ಣ, ರೂಪ ಮತ್ತು ಶಕ್ತಿಗಳನ್ನೂ ಹೊಂದಿರುವ ಪ್ರಭುವಿನ ಅವಯವಗಳನ್ನೂ ಪ್ರಾಣಾಯಾಮ ಪುರಸ್ಸರ ಮಾರ್ಗದಂತೆ ಧ್ಯಾನಮಾಡಬೇಕು. ॥೨೬-೨೭॥

ಶಕ್ತಿಯುಕ್ತರೂ, ಅರ್ಧನಾರೀಶ್ವರಾಕೃತಿಯುಳ್ಳವರೂ, ಚಂದ್ರ ಮತ್ತು ಚಿನ್ನದ ಬಣ್ಣವುಳ್ಳವರೂ, ಪರಶಿವನ ಎಡಬಲಭಾಗಗಳಲ್ಲಿರುವವರೂ, ಪಾಶ, ಅಂಕುಶ, ಅಕ್ಷಮಾಲೆ, ಮುದ್ರೆ ಇವುಗಳಿಂದಲಂಕೃತರೂ, ನಿರ್ಮಲವಾದ ಮುಖಕಮಲವುಳ್ಳವರೂ, ಪ್ರಪಂಚಕ್ಕೆ ಬೇಕಾದ ಇಷ್ಟಾರ್ಥಗಳನ್ನು ಕೊಡುವವರೂ ಆದ ರುದ್ರಗಣಗಳನ್ನು ಸ್ಮರಣೆಮಾಡಬೇಕು. ಮಹೇಶ್ವರನ ಪಾದಕಮಲಧ್ಯಾನವು ಸರ್ವ

ಕಾಮಿಕಂ ಪಾದಕಮಲಂ ಯೋಗಜಂ ಗುಲ್ಫಯೋರ್ಯುಗಂ ।
ಚಿಂತ್ಯಂ ಪಾದಾಂಗುಲೀರೂಪಂ ಕಾರಣಂ ಪ್ರಸೃತಾದ್ವಯಂ ॥೩೦॥

ಅಜಿತಂ ಜಾನುನೀಯುಗ್ಮಂ ದೀಪ್ತಮೂರುದ್ವಯಂ ವಿಭೋಃ ।
ಗುಹ್ಯಂ ಬೀಜಾತ್ಮಕಂ ಸೂಕ್ಷ್ಮಂ ಸಹಸಂ ತು ಕಟೀತಟಂ ॥೩೧॥

ಪೃಷ್ಠಭಾಗೋಂಽಶುಮಾನಸ್ಯ ನಾಭಿಃ ಶ್ರೀಸುಪ್ರಭೇದಕಂ ।
ವಿಜಯಂ ಜಠರಂ ಪ್ರಾಹುರ್ನಿಶ್ವಾಸಂ ಹೃದಯಾತ್ಮಕಂ ॥೩೨॥

ಸ್ವಾಯಂಭುವಂ ಸ್ತನದ್ವಂದ್ವಮನಲಂ ಲೋಚನತ್ರಯಂ ।
ವೀರಾಗಮಃ ಕಂಠದೇಶಃ ರೌರವಂ ಶ್ರವಣದ್ವಯಂ ॥೩೩॥

ಮಕುಟಂ ಮುಕುಟಂ ಶಂಭೋರ್ಬಾಹವೋ ವಿಮಲಾಗಮಾಃ ।
ಚಂದ್ರಜ್ಞಾನಂ ಮನಃ ಶಂಭೋರ್ಬಿಂಬಂ ವದನಪಂಕಜಂ ॥೩೪॥

---

ಕಾಮುಫಲಪ್ರದವಾದದ್ದು, ಎರಡು ಮಂಡಿಗಳೂ ರಾಜಯೋಗಾದಿ ಮಹಾಫಲಗಳನ್ನು ಕೊಡತಕ್ಕವುಗಳು. ಪರಮೇಶ್ವರನ ಕಾಲುಬೆರಳುಗಳು ಐಹಿಕಾಮುಷ್ಮಿಕರೂಪಗಳಾದ ಎರಡು ಫಲಗಳನ್ನೂ ಒದಗಿಸಬಲ್ಲುವು. ಹೀಗೆ ಮಹೇಶ್ವರನ ಒಂದೊಂದು ಅವಯವವೂ ಒಂದೊಂದು ರೀತಿಯ ವಿಶೇಷಫಲವನ್ನು ಕೊಡತಕ್ಕುದೆಂದು ತಿಳಿಯಬೇಕು. ॥೨೮-೨೯-೩೦॥

ಮಹಾದೇವನ ಎರಡು ಮೊಳಕಾಲ್ಗಳೂ ಅಜಿತವೆನಿಸುವುವು; ಪ್ರಭುವಿನ ಎರಡುತೊಡೆಗಳೂ ದೀಪ್ತವೆನಿಸುವುವು; ಗುಹ್ಯಪ್ರದೇಶವು, ಪ್ರಪಂಚಕ್ಕೆ ಸೂಕ್ಷ್ಮವಾದ ಬೀಜರೂಪವೆನಿಸಿದೆ; ಸೊಂಟಭಾಗವು ಸಾಹಸಪ್ರದವೆನಿಸುವುದು. ಈ ಮಹೇಶನ ಹಿಂಭಾಗವು ಸೂರ್ಯಕಾಂತಿಯನ್ನೂ, ನಾಭಿಯು ಲಕ್ಷ್ಮಿಯ ದಿವ್ಯಪ್ರಭೆಯನ್ನು ಸೋಲಿಸುವುದು; ಜಠರವನ್ನು ವಿಜಯುವೆನ್ನುವರು; ನಿಶ್ವಾಸವು ಹೃದಯರೂಪವಾಗಿರುವುದು. ಸ್ತನಗಳೆರಡೂ ಸ್ವಾಯಂಭುವ ಮನುರೂಪಗಳು; ಬೆಂಕಿಯೇ ಮೂರುಕಣ್ಣುಗಳು; ಕೊರಳಪ್ರದೇಶವು ವೀರಾಗಮವೆನಿಸುವುದು; ಕಿವಿಗಳೆರಡೂ ರೌರವವೆನಿಸುವುವು; ॥೩೧-೩೨-೩೩॥

ಶಂಭುವಿನ ಕಿರೀಟವೇ ಮಕುಟವೆನಿಸುವುದು; ಬಾಹುಗಳು ಪರಿಶುದ್ಧವಾದ ಆಗಮಗಳು; ಚಂದ್ರಜ್ಞಾನಾಗಮವೇ ಶಿವನಮನಸ್ಸು; ಬಿಂಬವೇ ಮುಖ

ಜಿಹ್ವಾ ಪ್ರೋದ್ಗೀತಮೀಶಸ್ಯ ಲಲಿತಂ ಗಂಡಯೋರ್ಯುಗಂ।
ಸಿದ್ಧಂ ಲಲಾಟಫಲಕಂ ಸಂತಾನಂ ಕುಂಡಲದ್ವಯಂ ॥೩೫॥

ಯಜ್ಞೋಪವೀತಂ ಶರ್ವೋಕ್ತಂ ಹಾರಸ್ರಕ್ಪಾರಮೇಶ್ವರಂ।
ಕಿರಣಂ ರತ್ನಭೂಷಾಸ್ಯ ವಾತುಲಂ ವಸನಾತ್ಮಕಂ ॥೩೬॥

ಏವಂ ತಂತ್ರಾತ್ಮಕಂ ರೂಪಂ ಈಶ್ವರಸ್ಯ ವಿಚಿಂತಯೇತ್।
ಶಿವಜ್ಞಾನಪ್ರದಂ ಪುಂಸಾಂ ಶಿವಧರ್ಮಪ್ರವರ್ತಕಂ ॥೩೭॥

ಪ್ರಣವಸ್ಯ ಚ ಮಾತ್ರಾಭಿರ್ವರ್ಣೈಃ ಪಂಚಾಕ್ಷರಸ್ಯ ಚ।
ವದನಾಂಸೋಕ್ಷ್ಣ ವಿಕಲಂ ಕಲ್ಪಯೇದಂಬಿಕಾಪತೇಃ ॥೩೮॥

---

ಕಮಲವು; ಈಶ್ವರನ ನಾಲಿಗೆಯೇ ಗೀತೆಯು, ಎರಡು ಗಂಡಸ್ಥಳಗಳೂ ಲಲಿತವೆನಿಸುವವು; ಹಲಗೆಯಂತಿರುವ ಹಣೆಯು ಸಿದ್ಧಸ್ಥಳವಾಗಿರುವುದು; ಕುಂಡಲಗಳೆರಡೂ ಸಂತಾನರೂಪವಾಗಿರುವುವು; ॥೩೪-೩೫॥

ಶಿವನಿಗೆ ಉಚಿತವಾದ ಯಜ್ಞೋಪವೀತವೇ ಪರಮೇಶ್ವರನ ಹಾರವು; ರತ್ನದೊಡವೆಗಳೇ ಕಿರಣಗಳು; ವಾತುಲವೇ (ಆಗಮವೇ) ವಸ್ತ್ರರೂಪವಾಗಿದೆ; ಈರೀತಿ ಈಶ್ವರನ ತಂತ್ರರೂಪವಾದ ಆಕಾರವನ್ನು ಸದಾ ಧ್ಯಾನಮಾಡಬೇಕು. ಇದು ಪುರುಷರಿಗೆ ಶಿವಜ್ಞಾನವನ್ನುಂಟುಮಾಡುವುದಲ್ಲದೇ ಶಿವಧರ್ಮಾಚರಣೆಯಲ್ಲಿ ಪ್ರವರ್ತಿಸುವಂತೆಯೂ ಮಾಡುತ್ತದೆ. ॥೩೬-೩೭॥

ಪ್ರಣವವೆನಿಸಿದ ಓಂಕಾರ ಮತ್ತು ಶಿವಪಂಚಾಕ್ಷರಗಳಲ್ಲಿರುವ ಮಾತ್ರೆಗಳು ಮತ್ತು ವರ್ಣಗಳಿಂದ ಅಂಬಿಕಾರಮಣನ ಅವಯವಗಳನ್ನು ಕಲ್ಪನೆಮಾಡಿಕೊಳ್ಳಬೇಕು. ಕಲಾತ್ಮಕವಾದ ಪರಶಿವನ ಧ್ಯಾನವೂ ಈ ಕ್ರಮದಲ್ಲಿ ಗೋಚರಿಸುವುದು. ಆಕಾಶದಲ್ಲಿ ಮಿಂಚಿನಸಮೂಹದಂತೆ ಶಿವಸಾದಾಖ್ಯವಾದ ತೇಜಸ್ಸು ವಿಶುದ್ಧವಾಗಿ ಎಲ್ಲೆಲ್ಲೂವ್ಯಾಪಿಸಿರುವುದು. ಎಲ್ಲಾಕಡೆಯಲ್ಲಿಯೂ ಹರಡಿರುವ ಜ್ಯೋತೀರೂಪವಾದ ಶೈವತೇಜಸ್ಸು ಸರ್ವದಾ ಊರ್ಧ್ವಗಾಮಿಯಾಗಿರುವುದೆಂದು ತಿಳಿಯಬೇಕು. ॥೩೮-೩೯॥

ವಿಶುದ್ಧಂ ಶಿವಸಾದಾಖ್ಯಂ ವಿದ್ಯುದ್ವೃಂದನಿಭಾಂಬರೇ ।
ವಿಶ್ವತಃ ಸ್ಫುರಿತಂ ಜ್ಯೋತಿರ್ವಿಂದ್ಯಾದೂರ್ಧ್ವಮುಖಂ ವಿಭೋಃ ॥೪೯॥

ಅಮೂರ್ತಮಥ ಸಾದಾಖ್ಯಂ ಮೂಲಸ್ತಂಭ ಇತಿ ಶ್ರುತಂ ।
ಜ್ಯೋತಿಸ್ತಂಭಮಯಂ ಲಿಂಗಂ ಸ್ಮರೇದಸ್ಯೋತ್ತರಂ ಮುಖಂ ॥೫೦॥

ಜ್ಯೋತಿರ್ಲಿಂಗೈಕಭಾಗೋರ್ಧ್ವಮೇಕವಕ್ತ್ರಂ ತ್ರಿಲೋಚನಂ ।
ಮೂರ್ತಿಃ ಸಾದಾಖ್ಯಮಿತ್ಯುಕ್ತಂ ಧ್ಯಾಯೇತ್ಪಶ್ಚಿಮಮಾನನಂ ॥೫೧॥

ಶೂಲಂ ಚ ಪರಶುಂ ವಜ್ರಮಭೀತಿಂ ದಕ್ಷಿಣೈಃ ಕರೈಃ ।
ಪಾಶಂ ವಹ್ನಿಂ ಚ ಘಂಟಾಂ ಚ ವರಂ ವಾಮೈಃ ಕರೈರಪಿ ॥೫೨॥

ದಧಾನಂ ಕರ್ತೃಸಾದಾಖ್ಯಂ ಪುರಾರೇಃ ಪೂರ್ವಮಾನನಂ ।
ಬ್ರಹ್ಮಪಂಚಸ್ಯೂರ್ಧ್ವಪೂರ್ವದಕ್ಷಿಣೋತ್ತರಪಶ್ಚಿಮಾನ್ ॥೫೩॥
ವಕ್ತ್ರಪದ್ಮಂ ವಿಭೋರ್ಧ್ಯಾಯೇದೀಶಾನಪ್ರಭೃತಿಂ ಕ್ರಮಾತ್ ।

ಸರ್ವಜ್ಞತಾತೃಪ್ತಿರನಾದಿಬೋಧಂ
ಸ್ವತಂತ್ರತಾನಿತ್ಯಮಲುಪ್ತಶಕ್ತಿಃ ।

---

ಶಿವಸಾದವೆಂಬುದು ಮೂರ್ತಪದಾರ್ಥವಲ್ಲ, ಆದರೂ ಇದು ಮೂಲಸ್ತಂಭವೆಂದು ಪ್ರಸಿದ್ಧವಾಗಿದೆ. ಈ ಶಿವನ ಜ್ಯೋತಿಸ್ತಂಭರೂಪವಾದ ಶಿವಲಿಂಗವು ಉತ್ತರಮುಖವಾಗಿರುವುದು. ಇದು ಕೇವಲ ಜ್ಯೋತಿಯೆಂದೇ ಧ್ಯಾನಮಾಡಬೇಕು. ಈ ಜ್ಯೋತಿರ್ಲಿಂಗದ ಒಂದು ಭಾಗದ ಮೇಲೆ ಒಂದು ಮುಖ, ಮೂರು ಕಣ್ಣುಳ್ಳ ಮೂರ್ತಿಗೆ ಸಾದ ಎಂಬುದಾಗಿ ಹೇಳಲ್ಪಟ್ಟಿದೆ. ॥೫೦-೫೧॥

ಬಲಗೈಯಲ್ಲಿ ಶೂಲ, ಕೊಡಲಿ, ವಜ್ರಾಯುಧ, ಮತ್ತು ಅಭಯಗಳನ್ನೂ ಎಡಗೈಗಳಲ್ಲಿ ಪಾಶ, ವಹ್ನಿ, ಘಂಟೆ ಮತ್ತು ವರದ ಚಿಹ್ನೆಗಳನ್ನೂ ಧರಿಸಿ ಕರ್ತೃಸಾದವೆಂದು ಪ್ರಖ್ಯಾತವಾದ ಮಹೇಶ್ವರನ ಪೂರ್ವಮುಖವನ್ನು ಧ್ಯಾನಮಾಡಬೇಕು. ಪಂಚಬ್ರಹ್ಮರೂಪಿಯಾದ ಶಿವನ ಶಿರಸ್ಸುಗಳು ಊರ್ಧ್ವಭಾಗ ಪೂರ್ವ, ದಕ್ಷಿಣ, ಉತ್ತರ ಮತ್ತು ಪಶ್ಚಿಮ ದಿಕ್ಕುಗಳಿಗೆ ಅಭಿಮುಖವಾಗಿರುವುವು. ಆದರೆ ಆ ಮುಖಕಮಲಗಳನ್ನು ಈಶಾನವದನದಿಂದ ಮೊದಲಾಗಿ ಧ್ಯಾನಮಾಡಬೇಕು. ॥೫೨-೫೩॥

ಶಿವನ ತತ್ತ್ವವನ್ನರಿತ ಪಂಡಿತರು ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧತ್ವ, ಸ್ವತಂತ್ರತ್ವ, ನಿತ್ಯವೂ ಲೋಪಹೊಂದದ ಶಕ್ತಿವಿಶಿಷ್ಟತ್ವ ಮತ್ತು

ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ
ಷಡಾಹುರಂಗಾನಿ ಮಹೇಶ್ವರಸ್ಯ ॥೪೪॥

ಹೃದಯಂ ಹೃದಯೇ ಶುಭ್ರಂ ಶಿರಃ ಶಿರಸಿ ಪಿಂಗಲಂ ।
ಶಿಖಾಂ ಶಿಖಾಸ್ಪದೇ ರಕ್ತಾಂ ಕವಚಂ ಪಾರ್ಶ್ವಯೋಃ ಸ್ಥಿತಂ ॥೪೫॥

ನೇತ್ರೇಷು ಶ್ಯಾಮಲಂ ರಕ್ತಂ ಕರೇಽಸ್ತ್ರಮಸಿತಂ ಸ್ಮರೇತ್ ।
ಚತುರ್ಭುಜಾಸ್ತ್ರಿನೇತ್ರಾಶ್ಚ ಜಟಾಮುಕುಟಮಂಡಿತಾಃ ॥೪೬॥

ವರಾಭಯೇ ಕಪಾಲಂ ಚ ಶೂಲಂ ಚ ದಧತಃ ಕರೈಃ ।
ಅಂಗದೇವಾ ಸ್ಮೃತಾಃ ಸೌಮ್ಯಾಃ ನೇತ್ರಾಸ್ತ್ರೋರುಗ್ರಹೇ ಸದಾ ॥೪೭॥

ತ್ರಿಶೂಲಂ ತ್ರಿಗುಣಂ ಪ್ರಾಹುಃ ಪರಶುಃ ಸರ್ವನಿಷ್ಠಿತಃ ।
ಖಡ್ಗಪ್ರವಣತೋ ವಜ್ರಂ ಶಂಭೋಃ ಶಕ್ತಿರಭೇದ್ಯತಾ ॥೪೮॥

---

ಅನಂತಶಕ್ತಿವಿಶಿಷ್ಟತ್ವಗಳೆಂಬುದಾಗಿ ಮಹೇಶ್ವರನಿಗೆ ಆರು ವಿಧಗಳಾದ ಅಂಗಗಳನ್ನು ಹೇಳುತ್ತಾರೆ. ॥೪೪॥

ಹೃದಯದಲ್ಲಿ ಶುಭ್ರವಾದ ಹೃದಯು, ತಲೆಯಲ್ಲಿ ಹೊಂಬಣ್ಣದ ಶಿರಸ್ಸು, ತಲೆಗೂದಲಲ್ಲಿ ಕೆಂಪುಬಣ್ಣ, ಪಕ್ಕಗಳಲ್ಲಿ ಕವಚ, ಕಣ್ಣುಗಳಲ್ಲಿ ಕಪ್ಪು ಮತ್ತು ಕೆಂಪುಬಣ್ಣ, ಕೈಯಲ್ಲಿ ಶುಭ್ರವಾದ ಅಸ್ತ್ರ ಇವುಗಳನ್ನು ಸ್ಮರಣೆಮಾಡಬೇಕು. ಎಲ್ಲ ಮೂರ್ತಿಗಳೂ ನಾಲ್ಕುತೋಳು, ಮೂರುಕಣ್ಣು, ಜಡೆ ಮತ್ತು ಕಿರೀಟಗಳಿಂದ ಅಲಂಕೃತವಾಗಿರುವರು. ॥೪೫-೪೬॥

ಈ ಪಂಚಮೂರ್ತಿಗಳ ಕೈಯಲ್ಲಿ ಕಂಡುಬರುವ ವರದಮುದ್ರೆ, ಅಭಯ ಮುದ್ರೆ, ಕಪಾಲ ಮತ್ತು ಶೂಲ, ತೋಳುಬಳೆ ಇವು ಸೌಮ್ಯಗುಣವಿಶಿಷ್ಟವಾದವು ಗಳು. ಆದ್ದರಿಂದಲೇ ಈ ಅಂಗದೇವತೆಗಳು ಸೌಮ್ಯವೆನಿಸಿರುವುವು. ನೇತ್ರಗಳಾದರೋ ಉಗ್ರರೂಪಗಳಾದ ಶಕ್ತಿಪ್ರಚೋದಕಗಳು. ಒಂದೊಂದು ನೇತ್ರವೂ ಒಂದೊಂದು ಅಸ್ತ್ರದಂತೆ ತೋರತಕ್ಕವುಗಳು. ತ್ರಿಶೂಲವು ಸತ್ವರಜಸ್ತಮೋರೂಪವಾದ ಮೂರುಗುಣವಿಶಿಷ್ಟವಾದುದೆಂದು ಹೇಳುವರು. ಪರಶುವು (ಕೊಡಲಿಯು) ಸತ್ವಗುಣವಿಶಿಷ್ಟವಾಗಿದೆ. ಖಡ್ಗಯುದ್ಧದಿಂದ ತೋರಿಬರುವ ಶಕ್ತಿಯಾದರೋ,

ವಹ್ನಿಃ ಸಂಹಾರಿಣೀ ಶಕ್ತಿಶ್ಚಕ್ರಂ ನಾಗೋಽಪ್ಯಥ ಸೃತಾ ।
ಮೂಲಮಾಯಾಽಕರ್ಮಪಾಶೋ ಘಂಟಾನಾದಸ್ವರೂಪಿಣೀ ॥೪೯॥

ಅಭಯೋ ಮಾಲಿನೀ ಶಕ್ತಿರ್ವಿವರ್ಣಂ ಚಾಂಕುಶಂ ವಿದುಃ ।
ಏವಂ ದಶಭುಜಶ್ಚಿಂತ್ಯೋ ಲಿಂಗೈರ್ದಶಭಿರಾಯುಧೈಃ ॥೫೦॥

ಜಪಕಾಲೇ ತು ಮಂತ್ರಸ್ಯ ಧ್ಯೇಯೋ ದೇವಶ್ಚತುರ್ಭುಜಃ ।
ವರಾಭಯಪರಶ್ವೇಣಲಸತ್ಕರಸರೋರುಹಃ ॥೫೧॥

ವಕ್ತ್ರೇಷ್ವೀಶಾನವಕ್ತ್ರಂ ಯದೂರ್ಧ್ವಾಶಾಭಿಮುಖಂ ಸದಾ ।
ಪೂಜಾಕಾಲೇಷು ತತ್ಪೂಜಾದ್ವಾರಾಭಿಸುಖತಾಂ ವ್ರಜೇತ್ ॥೫೨॥

ಪುರುಷಾಘೋರಜಾತಾಖ್ಯ ವಾಮದೇವಾನನಾನಿ ತು ।
ದ್ವಾರಭೇದಾನ್ನಭಿದ್ಯಂತೇ ಸ್ವಸ್ವಸ್ಥಾನವ್ಯವಸ್ಥಯಾ ॥೫೩॥

---

ಯಾರಿಂದಲೂ ಭೇದಿಸಲಾಗದಂತಹ ಸಾಮರ್ಥ್ಯವುಳ್ಳದು. ಇಂತಹ ಶಕ್ತಿಯನ್ನೇ ಶೈವಶಕ್ತಿಯೆನ್ನುವರು. ||೪೭-೪೮||

ಪರಶಿವನ ಪಂಚಮೂರ್ತಿಗಳಲ್ಲಿ ಹತ್ತುವಿಧಗಳಾದ ಆಯುಧಗಳು ಕಂಡು ಬರುವುವು. ಅವು ಕ್ರಮವಾಗಿ ಹೀಗಿವೆ. ಅಗ್ನಿ, ಲೋಕವನ್ನು ಸಂಹಾರಗೊಳಿಸುವ ಶಕ್ತಿ, ಚಕ್ರ, ನಾಗಪಾಶ, ಸೆಳೆಯುವ ಚಾವಟಿ, ಜಗತ್ತಿಗೆ ಮೂಲಭೂತವಾದ ಕರ್ಮಪಾಶ, ಗಂಟೆಯಧ್ವನಿ, ಅಭಯಮುದ್ರೆ, ಮಾಲಾರೂಪವಾದ ಶಕ್ತಿ, ಅಂಕುಶ ಈ ಹತ್ತು ಆಯುಧಗಳೂ ಮುದ್ರೆಗಳೂ ಮಹಾತ್ಮನ ಕೈಯ್ಯಲ್ಲಿ ಕಂಡುಬರುವುವು. ||೪೯-೫೦||

ವರದ, ಅಭಯ, ಕೊಡಲಿ ಮತ್ತು ಜಿಂಕೆಗಳಿಂದ ಶೋಭಿಸುವ ಪಾಣಿ ಕಮಲಗಳುಳ್ಳ ಚತುರ್ಭುಜನಾದ ಮಹೇಶನನ್ನು ಜಪಕಾಲದಲ್ಲಿ ಹಿಂದೆ ಹೇಳಿದ ಕ್ರಮದಿಂದ ಧ್ಯಾನಮಾಡಬೇಕು. ಮೇಲ್ಮುಖವಾಗಿರುವ ಈಶಾನನಾಮಕಮುಖವು ಎಲ್ಲಾ ಮುಖಗಳಲ್ಲಿಯೂ ಶ್ರೇಷ್ಠವಾಗಿರುವುದರಿಂದ ಎಲ್ಲವನ್ನೂ ಪೂಜೆಮಾಡುವಾಗ ಮೊದಲು ಇದರ ಪೂಜಾಮೂಲಕವಾಗಿ ಮಾನವನು ಸುಖವನ್ನೈದುವನು. ||೫೧-೫೨||

ತತ್ಪುರುಷ, ಅಘೋರ, ಸದ್ಯೋಜಾತ ಮತ್ತು ವಾಮದೇವರೂಪವಾದ ಮುಖಗಳು ತಮ್ಮ ತಮ್ಮ ಸ್ಥಾನವ್ಯವಸ್ಥೆಯಿಂದ, ದ್ವಾರಭೇದಗಳಿಂದ ಭಿನ್ನಭಿನ್ನ

ಅಥವಾ ಮಂಡಲೇ ದ್ವಾರದಿಗಾದಿಪರಿತಃ ಕ್ರಮಾತ್ ।
ಚತ್ವಾರ್ಯೇತಾನಿ ವಕ್ತ್ರಾಣಿ ಪ್ರಾದಕ್ಷಿಣ್ಯೇನ ಪ್ರಕಲ್ಪಯೇತ್ ॥೫೪॥

ಏವಂ ಸದಾಶಿವಂ ಧ್ಯಾತ್ವಾ ನಿಶ್ಚಲೇನಾಂತರಾತ್ಮನಾ ।
ಮಂತ್ರನ್ಯಾಸಾದಿಕಂ ಚಾಪಿ ಕೃತ್ವಾ ತಸ್ಯಾಂತನೌ ಯಥಾ ॥೫೫॥

ಮೂರ್ತಿತ್ವೇನೈವ ಸಂಕಲ್ಪ್ಯ ಶಿವಸ್ಯ ಪರಮಾತ್ಮನಃ ।
ಅಭ್ಯರ್ಚ್ಯ ಗಂಧಪುಷ್ಪಾದ್ಯೈರ್ಮನಸೈವೋಪಪಾದಿತೈಃ ॥೫೬॥

ತಸ್ಯಾಂ ಮೂರ್ತೌ ಮೂರ್ತಿಮಂತಂ ಶಿವಂ ಸದಸತಃ ಪರಂ ।
ಪ್ರಾಣಸ್ಥಾನಂ ಮಹೇಶಸ್ಯ ಚಿಂತಯೇದಂಬಿಕಾಪತೇಃ ॥೫೭॥

ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ತಥಾನ್ಯೇ ಚ ಸುರಾಸುರಾಃ ।
ತಪೋಭಿರುಗ್ರೈರದ್ಯಾಪಿ ಯಸ್ಯ ದರ್ಶನಕಾಂಕ್ಷಿಣಃ ॥೫೮॥

---

ವಾಗುವುದಿಲ್ಲ. ಅಥವಾ ಮಂಡಲಾಕಾರದಲ್ಲಿ ರಚಿಸುವಾಗ ಈ ನಾಲ್ಕು ಮುಖಗಳನ್ನೂ ದ್ವಾರ, ದಿಕ್ಕು ಇವೇ ಮೊದಲಾದ ಕ್ರಮದಿಂದ ಬೇರೆಬೇರೆಯಾಗಿ ಪ್ರದಕ್ಷಿಣಾಕಾರವಾಗಿ ಕಲ್ಪಿಸಬೇಕು. ॥೫೩-೫೪॥

ಹೀಗೆ ದೃಢಮನಸ್ಸಿನಿಂದ ಸದಾಶಿವನನ್ನು ಧ್ಯಾನಮಾಡಿ ಮಂಡಲಾಕಾರವಾಗಿ ರಚಿಸಿದ್ದ ತನ್ನ ಇಷ್ಟದೈವವೆನಿಸಿದ ಶಂಕರನ ದೇಹದಲ್ಲಿ ಮಂತ್ರ, ನ್ಯಾಸ ಮುಂತಾದವುಗಳನ್ನು ಮಾಡಿ; ಶಿವಪರಮಾತ್ಮನನ್ನು ಮೂರ್ತಿಮತ್ತಾಗಿ ಕಲ್ಪನೆ ಮಾಡಿಕೊಂಡು, ಮನಸ್ಸಿನಲ್ಲಿಯೇ ದೊರೆತ ಗಂಧ, ಹೂ ಮುಂತಾದವುಗಳಿಂದ ಪೂಜಿಮಾಡಿ, ಅದೇ ಮೂರ್ತಿಯಲ್ಲಿ ಸತ್ ಮತ್ತು ಅಸತ್‌ಪದಾರ್ಥಗಳನ್ನು ಅತಿಕ್ರಮಿಸಿ ಶ್ರೇಷ್ಠನೆನಿಸಿರುವ ಮೂರ್ತಿವಿಶಿಷ್ಟನಾದ ಶಿವನನ್ನು ನೆನೆದು ಅಂಬಿಕಾರಮಣನಾದ ಮಹೇಶನ ಪ್ರಾಣಸ್ಥಾನವನ್ನು ಧ್ಯಾನಮಾಡಬೇಕು. ಅಂದರೆ ಆ ಮಂಡಲದಲ್ಲಿ ಈಶ್ವರನ ಪ್ರಾಣಪ್ರತಿಷ್ಠೆಮಾಡಬೇಕು. ॥೫೫-೫೬-೫೭॥

'ಬ್ರಹ್ಮ, ವಿಷ್ಣು, ರುದ್ರ' ಮತ್ತು ಇತರ ದೇವದಾನವರು ಸಹ ಉಗ್ರವಾದ ತಪಸ್ಸಿನ ಮೂಲಕ ಇಂದಿಗೂ ಯಾವ ಮಹೇಶನ ದರ್ಶನವನ್ನು ಬಯಸುತ್ತಿರುವರೋ, ಯಾವ ಈ ದೇವನಿಂದ ಬ್ರಹ್ಮ, ವಿಷ್ಣು, ಇಂದ್ರರೇ ಮೊದಲಾದ ಸಕಲ

ಯಸ್ಮಾತ್ಸರ್ವಮಿದಂ ಬ್ರಹ್ಮ ವಿಷ್ಣುರುದ್ರೇಂದ್ರಪೂರ್ವಕಂ ।
ಸಹ ಭೂತೇಂದ್ರಿಯಗ್ರಾಮೈಃ ಪ್ರಥಮಂ ಸಂಪ್ರಸೂಯತೇ ॥೫೯॥

ಕಾರಣಾನಾಂ ಚ ಯೋ ಧ್ಯಾತಾ ಧ್ಯೇಯಃ ಪರಮಕಾರಣಂ ।
ನ ಸಂಪ್ರಸೂಯತೇಽನ್ಯಸ್ಮಾತ್ಕದಾಚನ ಕುತಶ್ಚನ ॥೬೦॥

ಸರ್ವೈಶ್ವರ್ಯೇಣ ಸಂಪೂರ್ಣೋ ನಾಮ್ನಾ ಸರ್ವೇಶ್ವರಃ ಸ್ವಯಂ ।
ಸರ್ವೈರ್ಮುಮುಕ್ಷುಭಿರ್ಧ್ಯೇಯೋ ಶಂಭುರಾಕಾಶಮಧ್ಯಗಃ ॥೬೧॥

ಸರ್ವೋಪರಿ ಕೃತಾವಾಸಃ ಸರ್ವಾವಾಸಶ್ಚ ಶಾಶ್ವತಃ ।
ಷಡ್ವಿಧಾಧ್ವಮಯಸ್ಯಾಸ್ಯ ಸರ್ವಸ್ಯ ಜಗತಃ ಪತಿಃ ॥೬೨॥

ಉತ್ತರೋತ್ತರಭೂತಾನಾಂ ಉತ್ತರಶ್ಚ ನಿರುತ್ತರಃ ।
ಅನಂತಮಹಿಮಾಂಭೋಧಿರಪರಿಚ್ಛಿನ್ನವೈಭವಃ ॥೬೩॥

---

ಪ್ರಪಂಚವೂ ಇಂದ್ರಿಯಸಮೂಹದೊಡನೆ ಜನಿಸುವುದೋ, ಹಾಗೆಯೇ ಯಾವನ ಅಪ್ಪಣೆಯಂತೆ ಸಕಲ ಪ್ರಪಂಚವೂ ನಡೆಯುತ್ತಿರುವುದೋ ಅಂತಹ ಮಹೇಶ್ವರನನ್ನು ಧ್ಯಾನಿಸಬೇಕು. ॥೫೮-೫೯॥

ಪ್ರಪಂಚದ ಸಕಲ ಸೃಷ್ಟಿಗೂ ಮೂಲಕಾರಣನೂ, ಧ್ಯಾನಮಾಡುವವನೂ, ಧ್ಯಾನಾರ್ಹನೂ, ಪರಮಕಾರಣನೂ ಆಗಿ ಮತ್ತಾರಿಂದಲೂ ಯಾರು ಎಂದಿಗೂ ಜನ್ಮತಾಳದವನೋ, ಸಕಲೈಶ್ವರ್ಯಭರಿತನಾಗಿ ಸರ್ವೇಶ್ವರನಾಮದಿಂದ ಪ್ರಖ್ಯಾತನಾದ ಆಕಾಶಮಧ್ಯದಲ್ಲಿರುವ ಅಂತಹ ಶಂಭುವು ಮೋಕ್ಷಾಪೇಕ್ಷಿಗಳಾದ ಸಕಲರಿಂದಲೂ ಧ್ಯಾನಾರ್ಹನು. ಅಂತಹ ಪರಶಿವನ ಧ್ಯಾನದಿಂದಲೇ ನಿಜವಾದ ಮುಕ್ತಿ ದೊರೆಯುವುದು. ॥೬೦-೬೧॥

ಮಹಿಮೆ, ಪೌರುಷ, ಆತ್ಮಶಕ್ತಿ ಇವುಗಳಲ್ಲಿ ಎಲ್ಲರಿಗಿಂತಲೂ ಮೇಲ್ಮಟ್ಟದಲ್ಲಿ ವಾಸಮಾಡುವವನಾಗಿ, ಎಲ್ಲೆಲ್ಲೂ ವ್ಯಾಪಿಸಿ ಎಲ್ಲರಿಗೂ ವಾಸಭೂಮಿಯಾಗಿ ಶಾಶ್ವತನಾಗಿರುವವನು, ಪರಶಿವನು. ಹಿಂದೆ ಹೇಳಿದಂತೆ ಷಡಧ್ವಗಳಿಗೆ ಆಶ್ರಯವಿತ್ತಿರುವ ಈ ಶಿವನು ಸಕಲ ಜಗತ್ತುಗಳಿಗೂ ಒಡೆಯನು. ಮುಂದೆ ಮುಂದೆ ಜನಿಸುವ ಪ್ರಾಣಿಗಳಿಗೆಲ್ಲಾ ಉತ್ತರರೂಪನಾದರೂ ತನಗೆ ಉತ್ತರಪದಾರ್ಥವಿಲ್ಲದವನು. ಅಪರಿಮಿತವಾದ ಪ್ರಭಾವಗಳಿಗೆ ಸಮುದ್ರಪ್ರಾಯನಾದರೂ ಸ್ವಲ್ಪವೂ ಕಡಿಮೆಯಾಗದ

ಅಶೇಷವಿಷಯಾವೋಘಶುದ್ಧಬುದ್ಧಿವಿಜೃಂಭಣಃ ।
ಆತ್ಮಶಕ್ತ್ಯಮೃತಾಸ್ವಾದಪ್ರಮೋದರಸಲಾಲಸಃ ॥೬೪॥

ಅನಂತಾನಂದಸಂದೋಹಮಕರಂದಮಧುವ್ರತಃ ।
ಅಶೇಷಜಗದಂಡಾನಾಂ ಪಿಂಡೀಕರಣಪಂಡಿತಃ ॥೬೫॥

ಔದಾರ್ಯವೀರ್ಯಗಾಂಭೀರ್ಯಮಾಧುರ್ಯಮಕರಾಲಯಃ ।
ಅತುಲಃ ಸರ್ವಭೂತಾನಾಂ ರಾಜರಾಜೋ ಮಹೇಶ್ವರಃ ॥೬೬॥

ಅಪ್ರಾಕೃತಶರೀರಂ ತಂ ಅತಿಮನ್ಮಥರೂಪಿಣಂ ।
ಘೃತರೀತಿಘನೀಭೂತಂ ಸಚ್ಚಿದಾನಂದವಿಗ್ರಹಂ ॥೬೭॥

ಸರ್ವಲಕ್ಷಣಸಂಪನ್ನಂ ಸರ್ವಾವಯವಶೋಭಿತಂ ।
ಸರ್ವಾತಿಶಯಸಂಯುಕ್ತಂ ಸರ್ವಾಭರಣಭೂಷಿತಂ ॥೬೮॥

---

ವೈಭವವುಳ್ಳವನು. ಸಕಲ ವಿಷಯವಾಸನೆಯಲ್ಲಿಯೂ ತೊಡಗಿದ ಬುದ್ಧಿಯನ್ನು ಶುದ್ಧಗೊಳಿಸಿ ವಿಜೃಂಭಿಸುತ್ತಿರುವವನು, ಆತ್ಮಶಕ್ತಿಯೆಂಬ ಅಮೃತವನ್ನು ಪಾನ ಮಾಡುವುದರಲ್ಲಿ ಸಂತೋಷದಿಂದ ರಸಿಕನೆನಿಸಿರುವವನು. ॥೬೨-೬೩-೬೪॥

ಅನಂತವೆನಿಸಿ ಶಾಶ್ವತವಾಗಿರುವ ಆನಂದಸಮೂಹವೆಂಬ ಮಕರಂದವನ್ನು ಪಾನಮಾಡುವುದರಲ್ಲಿ ಭ್ರಮರದಂತಿರುವವನೂ, ಸಕಲ ಜಗತ್ತನ್ನೂ ಪಿಂಡೀಕರಿಸು ವುದರಲ್ಲಿ (ಒಟ್ಟುಗೂಡಿಸುವುದರಲ್ಲಿ) ಪಂಡಿತನೂ, ಔದಾರ್ಯ, ವೀರ್ಯ, ಗಾಂಭೀರ್ಯ, ಮಾಧುರ್ಯಗಳಿಗೆ ಸಮುದ್ರದಂತೆ ಆಶ್ರಯನೂ, ಸಕಲ ಪ್ರಾಣಿಗಳಿಗೂ ರಾಜಾಧಿರಾಜ ನೆನಿಸಿದವನೂ ಆದ ಮಹೇಶ್ವರನು ಸಾಮ್ಯರಹಿತನೆಂದು ಅರಿಯಬೇಕು. ಸರ್ವೇಶ್ವ ರನೇ ಅವನೆಂಬ ಭಾವನೆಯಿಂದ ವರ್ತಿಸಬೇಕು. ॥೬೫-೬೬॥

ಅಪ್ರಾಕೃತಶರೀರವುಳ್ಳವನೂ, ಸೌಂದರ್ಯದಲ್ಲಿ ಮನ್ಮಥರೂಪವನ್ನು ಅತಿಕ್ರಮಿಸಿ ದವನೂ, ತುಪ್ಪದಂತೆ ಘನರೂಪನೂ, ಸಚ್ಚಿದಾನಂದರೂಪಿಯೂ, ಸಕಲ ಲಕ್ಷಣ ಯುಕ್ತನೂ, ಸಮಸ್ತ ಅವಯವಗಳಿಂದಲೂ ಅಲಂಕೃತನೂ, ಎಲ್ಲರಿಗಿಂತಲೂ ಅತಿಶಯವಿಶಿಷ್ಟನೂ, ಸಕಲಾಭರಣಮಂಡಿತನೂ ಆಗಿರುವ ಪರಮೇಶ್ವರನನ್ನು ಎಲ್ಲರೂ ಭಕ್ತಿಪರವಶರಾಗಿ ಧ್ಯಾನಿಸಬೇಕು. ॥೬೭-೬೮॥

ಸಂರಕ್ತಪಾಣಿಚರಣಂ ಕುಂದಮಂದಸ್ಮಿತಾನನಂ ।
ಶುದ್ಧಸ್ಫಟಿಕಸಂಕಾಶಂ ಫುಲ್ಲಪದ್ಮತ್ರಿಲೋಚನಂ ॥೧೯॥

ಚತುರ್ಭುಜಮುದಾರಾಂಗಂ ಚಾರುಚಂದ್ರಕಲಾಧರಂ ।
ವರದಾಭಯಹಸ್ತಂ ಚ ಮೃಗಟಂಕಧರಂ ಹರಂ ॥೨೦॥

ಸರ್ವಕಲ್ಯಾಣನಿಲಯಂ ಚಾರುನೀಲಗಲಾಂತರಂ ।
ಸರ್ವೋಪಮಾನರಹಿತಂ ಸರ್ವಾತ್ಮಾನಂ ವಿಚಿಂತಯೇತ್ ॥೨೧॥

ತತಃ ಸಂಚಿಂತಯೇತ್ತಸ್ಯ ವಾಮಭಾಗೇ ಮಹೇಶ್ವರೀಂ ।
ಪ್ರಫುಲ್ಲೋತ್ಪಲಪತ್ರಾಭವಿಸ್ತೀರ್ಣಾಯತಲೋಚನಾಂ ॥೨೨॥

ಪೂರ್ಣಚಂದ್ರಾಭವದನಾಂ ನೀಲಕುಂಚಿತಮೂರ್ಧಜಾಂ ।
ನೀಲೋತ್ಪಲದಳಪ್ರಖ್ಯಾಂ ಚಂದ್ರಾರ್ಧಕೃತಶೇಖರಾಂ ॥೨೩॥

---

ಲೋಕರಕ್ಷಕನಾದ ಪರಮೇಶ್ವರನು ಕೆಂಪಾದ ಕೈಕಾಲ್ಗಳುಳ್ಳವನು. ಮಲ್ಲಿಗೆಯಂತೆ ಶುಭ್ರವಾದ ಮುಗುಳುನಗೆಯುಳ್ಳ ಸುಂದರಮುಖವುಳ್ಳವನು, ಸ್ವಚ್ಛವಾದ ಪಟಿಕದಂತಿರುವವನು, ಅರಳಿದ ಕಮಲದಂತಿರುವ ಮೂರು ಕಣ್ಣುಗಳುಳ್ಳವನು, ನಾಲ್ಕು ತೋಳ್ಗಳುಳ್ಳವನು, ಉದಾರವಾದ ದೇಹವುಳ್ಳವನು, ಮನೋಹರವಾದ ಚಂದ್ರಕಲೆಯನ್ನು ಧರಿಸಿರುವವನು, ವರದ ಮತ್ತು ಅಭಯಪ್ರದವಾದ ಪ್ರಾಣಿಗಳುಳ್ಳವನು, ಜಿಂಕೆ ಮತ್ತು ಟಂಕಗಳನ್ನು ಧರಿಸಿರುವವನು, ಭಕ್ತರ ಪಾಪಗಳನ್ನು ನಾಶಮಾಡುವವನು, ಸಕಲ ಮಂಗಳಗಳಿಗೂ ಆವಾಸಭೂಮಿಯು, ಸುಂದರವಾದ ನೀಲಕಂಠವುಳ್ಳವನು, ಸಕಲ ಉಪಮಾನಗಳಿಂದಲೂ ಬಾಹ್ಯನಾದವನು, ಸರ್ವಾತ್ಮಕನು, ಇಂತಹ ಪರಶಿವನನ್ನು ಸದಾ ಮನನಮಾಡಬೇಕು. ಧ್ಯಾನಕಾಲದಲ್ಲಿ ಇಂತಹ ಗುಣಗಳನ್ನು ಪರಮಶಿವನಲ್ಲಿ ಆರೋಪಿಸಿಕೊಳ್ಳಬೇಕು. ॥೧೯-೨೦-೨೧॥

ಅನಂತರ ಆ ಮಹಾದೇವನ ಎಡಭಾಗದಲ್ಲಿ ಮಹೇಶ್ವರಿಯನ್ನಿಂತು ಧ್ಯಾನಮಾಡಬೇಕು.—ಅರಳಿದ ನೈದಿಲೆಯ ದಳದಂತೆ ಕಾಂತಿಯುಕ್ತವೂ ವಿಶಾಲವೂ ಆದ ದೊಡ್ಡ ಕಣ್ಣುಗಳುಳ್ಳವಳೂ, ಪೂರ್ಣಚಂದ್ರಸದೃಶಕಾಂತಿವಿಶಿಷ್ಟಮುಖವುಳ್ಳವಳೂ ನೀಲವಾದ ಗುಂಗುರುಗುಂಗುರಾದ ಕೂದಲುಳ್ಳವಳೂ, ಕನ್ನೈದಿಲೆಯ ದಳದಂತೆ ಕಾಂತಿಯುಳ್ಳವಳೂ, ಅರ್ಧಚಂದ್ರಾಲಂಕೃತಕೇಶವುಳ್ಳವಳೂ, ಸುಂದರವಾಗಿ ದುಂಡಾಗಿ

ಅತಿವೃತ್ತಘನೋತ್ತುಂಗ ಪೀನೋನ್ನತಪಯೋಧರಾಂ ।
ತನುಮಧ್ಯಾಂ ಪೃಥುಶ್ರೋಣೀಂ ಪೀತಸೂಕ್ಷ್ಮೋತ್ತರಾಂಬರಾಂ॥೭೪॥

ಸರ್ವಾಭರಣಸಂಪನ್ನಾಂ ಲಲಾಟತಿಲಕೋಜ್ಜ್ವಲಾಂ ।
ವಿಚಿತ್ರಪುಷ್ಪಸಂಕೀರ್ಣಕೇಶಪಾಶೋಪಶೋಭಿತಾಂ ॥೭೫॥

ಸರ್ವಾತೀತಗುಣಾಕಾರಾಂ ಕಿಂಚಿಲ್ಲಜ್ಜಾನತಾನನಾಂ ।
ಕಾವ್ಯಾಕಾರಸ್ಫುರದ್ರಾಜಲಲನ್ಮುಕ್ತಾಫಲಾಂಚಿತಾಂ ॥೭೬॥

ಹೈಮಾರವಿಂದವಿಲಸದ್ಧಾನಾಂ ದಕ್ಷಿಣೇ ಕರೇ ।
ದಂಡವಚ್ಚಾಪರಂ ಹಸ್ತಂ ತಸ್ಯಾಸೀನಾಸಹಾಸನಾಂ ॥೭೭॥

ಪಾಶವಿಚ್ಛೇದಕಾಂ ಸಾಕ್ಷಾತ್ಸಚ್ಚಿದಾನಂದರೂಪಿಣೀಂ ।
ಸದಾಶಿವೇಶ್ವರಹರಶ್ರೀಶದ್ರುಹಿಣಮಾತರಂ ॥೭೮॥

ಸಮಸ್ತಗೌರೀವಾಣ್ಯಾದಿಲಕ್ಷ್ಮ್ಯಾದಿಪರಿಸೇವಿತಾಂ ।
ಏವಂ ದೇವಂ ಚ ದೇವೀಂ ಚ ಧ್ಯಾತ್ವಾ ತರುಣವಿಗ್ರಹಾ ॥೭೯॥

---

ದೃಢವಾದ ದೊಡ್ಡ ಕುಚಗಳುಳ್ಳವಳೂ, ಕೃಶವಾದ ಸೊಂಟವುಳ್ಳವಳೂ, ದಪ್ಪನಾದ ನಿತಂಬಭಾಗವುಳ್ಳವಳೂ, ಹೊಂಬಣ್ಣದ ಸೂಕ್ಷ್ಮ ಉತ್ತರೀಯವನ್ನು ಧರಿಸಿರುವವಳೂ ಆದ ಪಾರ್ವತಿಯನ್ನು ಮನಸಾ ಧ್ಯಾನಿಸಬೇಕು. ॥೭೩-೭೩-೭೪॥

ಸಮಸ್ತ ಭೂಷಣಯುಕ್ತಳೂ, ಹಣೆಯಲ್ಲಿ ಉಜ್ಜ್ವಲವಾದ ತಿಲಕವುಳ್ಳವಳೂ, ಬಣ್ಣಬಣ್ಣದ ಹೂಗಳಿಂದಲಂಕೃತಕೇಶಪಾಶವಿರಾಜಿತಳೂ, ಸಕಲ ಗುಣಗಳನ್ನೂ ಅತಿಕ್ರಮಿಸಿದ ಆಕೃತಿಯುಳ್ಳವಳೂ, ಮಂದಹಾಸದಿಂದ ಬಾಗಿದ ಮುಖವುಳ್ಳವಳೂ, ಕಾವ್ಯಾಕೃತಿಯಂತೆ ಸ್ಫುರಿಸುತ್ತಿರುವ ಚಂದ್ರನಿಂದ ಅಲಂಕೃತಳಾಗಿ ಜೋಲುಬಿದ್ದಿರುವ ಮುತ್ತಿನಹಾರದಿಂದ ಶೋಭಿತಳೂ, ದಂಡಸದೃಶವಾದ ಮತ್ತೊಂದು ಕೈಯನ್ನು ಮೇಲೆತ್ತಿ ಕಮಲಾಸನಮಾಡಿಕೊಂಡು ಕುಳಿತಿರುವವಳೂ, ॥೭೫-೭೬-೭೭॥

ಜನನಮರಣರೂಪವಾದ ಸಾಂಸಾರಿಕ ಪಾಶವನ್ನು ಕಡಿದುಹಾಕುವವಳೂ, ಸಾಕ್ಷಾತ್ಸಚ್ಚಿದಾನಂದವಿಗ್ರಹಳೂ, ಸದಾಶಿವ, ಈಶ್ವರ, ಹರ, ಶ್ರೀಶ, ಬ್ರಹ್ಮ ಇವರ ಜನನಿಯೂ, ಸಕಲ ಗೌರೀ, ಪಾರ್ವತಿ, ಲಕ್ಷ್ಮೀ ಮುಂತಾದವರಿಂದ ಸೇವಿತಳೂ

ಸರ್ವೋಪಚಾರವದ್ಭಕ್ತ್ಯಾ ಭಾವಪುಷ್ಪೈಃ ಸಮರ್ಚಯೇತ್ ॥೮೦॥

ಏವಂ ಧ್ಯಾತ್ವಾ ಕ್ಷಣಮಹೋಽಗ್ನಿಷ್ಟೋಮಾಯುತಂ ಫಲಂ ।
ಉಮಾಸಹಾಯಂ ವಿಶ್ವೇಶಂ ಧ್ಯಾತ್ವಾ ಪ್ರಾಪ್ನೋತಿ ಮಾನವಃ ॥೮೧॥

॥ ಶ್ರೀಸ್ಕಂದ ಉವಾಚ ॥

ಶಂಭುಶ್ಚಿದಾಕಾಶಗಕೋಶಕಾಶೋ
ಧ್ಯೇಯಶ್ಚಿದಾನಂದಘನೋಽವ್ಯಯಾತ್ಮಾ ।
ಶಾಖಾಶಿಖಾಭಿರ್ಗದಿತೋ ಹರಾಜ-
ಮುಕುಂದಶಕ್ರಾದಿಸುರಪ್ರಸೂತಿಃ ॥೮೨॥

ಹೇಯಾದಿದುಃಖಮುಪಹಾಯ ಭವೋರುಮಾಯಾ
ನಿರ್ವಾಪಕಾಯ ಹೃದಿ ವೈ ಚಿರಭಾವುಕಾಯ ।
ಕೈವಲ್ಯವಲ್ಲೀಗತವೈಭವೋ ಯಃ
ಧ್ಯೇಯೋ ವಿಮುಕ್ತಿಪರಮೈಃ ಸ ಉಮಾಸಹಾಯಃ ॥೮೩॥

---

ಆದ ಮಹಾದೇವಿಯನ್ನು, ಅಂತಹ ದೇವಿಯದೇಹದಿಂದ ಯುಕ್ತನಾದ ಉಮಾ ಮಹೇಶ್ವರ ದೇವನನ್ನೂ ಮನಸಾ ಧ್ಯಾನಮಾಡಿ ಸಕಲ ಉಪಚಾರಗಳಿಂದಲೂ, ಭಕ್ತಿಪೂರ್ವಕವಾಗಿ ಭಾವರೂಪಕುಸುಮಗಳಿಂದಲೂ ಪೂಜಿಸಬೇಕು. ॥೭೮-೭೯-೮೦॥

ಈ ರೀತಿ ಉಮಾಸಹಚರನಾದ ವಿಶ್ವೇಶ್ವರನನ್ನು ಒಂದುಕ್ಷಣಕಾಲ ಧ್ಯಾನ ಮಾಡಿದ ಮಾನವನು ಹತ್ತುಸಾವಿರ ಅಗ್ನಿಷ್ಟೋಮಯಾಗಗಳ ಫಲವನ್ನು ಏಕಕಾಲ ದಲ್ಲಿ ಅನಾಯಾಸವಾಗಿ ಪಡೆಯುವನು. ॥೮೧॥

ಓ ಜೈಗೀಷವ್ಯನೇ, ಚಿದ್ರೂಪವಾದ ಆಕಾಶಗತನಾಗಿ ಕೋಶದಂತೆ ಬೆಳಗು ತ್ತಿರುವ ಜ್ಞಾನರೂಪನಾಗಿ ಆನಂದಸ್ವರೂಪನೆನಿಸಿ ಮೇಘಾಕೃತಿಯಾಗಿ ಅಚ್ಯುತ ನಾಗಿರುವ ಶಂಭುವು, ವೇದಾಂತಗಳಲ್ಲಿ ಪ್ರಖ್ಯಾತನಾಗಿ ರುದ್ರ, ಬ್ರಹ್ಮ, ವಿಷ್ಣು, ಇಂದ್ರ ಮುಂತಾದ ದೇವತೆಗಳ ಜನಕನಾಗಿರುವನು ಎಂಬುದಾಗಿ ಚಿಂತಿಸುತ್ತಾ ಇಂತಹ ಶಂಭುವನ್ನು ಧ್ಯಾನಮಾಡಬೇಕು. ॥೮೨॥

ಜೀವನ ಪ್ರಪಂಚದಲ್ಲಿ ಆಗಾಗ ಸಂಭವಿಸುವ ತ್ಯಾಜ್ಯವಾದ ದುಃಖಾದಿಗಳನ್ನು ಕಳೆದು, ಈ ಸಂಸಾರವೆಂಬ ದೊಡ್ಡ ಮಾಯೆಯನ್ನು ದಾಟುವುದಕ್ಕೋಸ್ಕರವೂ

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಉಮಾಮಹೇಶ್ವರ ಧ್ಯಾನಪ್ರಕಾರನಿರೂಪಣಂ ನಾಮೈಕೋನ ಪಂಚಾಶೋಽಧ್ಯಾಯಃ

---

ಮನಸ್ಸಿನಲ್ಲಿ ಲಭಿಸಬಹುದಾದ ಆದಂದವನ್ನು ಅನುಭವಿಸುವುದಕ್ಕೂ ಮೋಕ್ಷ ಸ್ವರೂಪವಾಗಿ ಒಂದು ಲತೆಯ ವೈಭವಪ್ರಾಪ್ತಿಗಾಗಿಯೂ, ಮೋಕ್ಷಾಪೇಕ್ಷೆಯುಳ್ಳವರು ಆ ಉಮಾರಮಣನಾದ ಶಂಕರನನ್ನು ಧ್ಯಾನಮಾಡಬೇಕೆಂದು ಜೈಗೀಷವ್ಯನಿಗೆ ಸ್ಕಂದನು ನಿರೂಪಿಸಿದನು. ॥೮೩॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ಉಮಾಮಹೇಶ್ವರರ ಧ್ಯಾನಪ್ರಕಾರನಿರೂಪಣೆಯೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಪಂಚಾಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಧ್ಯಾನಮೇತತ್ತವೋಕ್ತಂ ಮೇ ಮಹಾದೇವಸ್ಯ ಮುಕ್ತಯೇ ।
ಉಮಾಸಹಾಯಂ ವಿಶ್ವೇಶಂ ಧ್ಯಾತ್ವಾ ಮುಕ್ತೋ ಭವೇದ್ದ್ವಿಜಃ ॥೧॥

ಶ್ರುತಿಪ್ರಕಾಶಿತೇಯಂ ತೇ ಮೂರ್ತಿಃ ಪರತರೇಶಿತುಃ ।
ಕೈವಲ್ಯಶ್ರುತಿನಿರ್ದಿಷ್ಟಾ ಸಾಕ್ಷಾನ್ಮೋಕ್ಷಪ್ರದಾಯಿನೀ ॥೨॥

ಬ್ರಾಹ್ಮಣಕ್ಷತ್ರಿಯವಿಶಾಮಾಶ್ರಮಾಣಾಂ ಚ ಸರ್ವದಾ ।
ಸಂನ್ಯಾಸಿಭಿರ್ವಿಶೇಷೇಣ ಹೃದಿ ನ್ಯಸ್ಯೈವ ಕೇವಲಾ ॥೩॥

---

## ಐವತ್ತನೆಯ ಅಧ್ಯಾಯ

ಓ ಜೈಗೀಷವ್ಯನೆ, ಮಹಾದೇವನ ಈ ಧ್ಯಾನವು ಭಕ್ತರ ಮುಕ್ತಿಸಾಧನೆಗೋಸ್ಕರ ನನ್ನಿಂದ ಈಗ ನಿನಗೆ ಹೇಳಲ್ಪಟ್ಟಿದೆ. ಉಮಾರಮಣನಾದ ವಿಶ್ವೇಶ್ವರನನ್ನು ವಿಧಿವತ್ತಾಗಿ ಧ್ಯಾನಮಾಡುವುದರಿಂದಲೇ ಬ್ರಾಹ್ಮಣನು ಮುಕ್ತನಾಗುವನು. ನಿನಗೆ ಈಗ ನಾನು ಹೇಳಿದುದು ಅತ್ಯಂತ ಪವಿತ್ರವಾದ ಪರಮೇಶನ ವೇದಪ್ರತಿಪಾದ್ಯವಾದ ಮೂರ್ತಿಯೆಂದು ತಿಳಿ; ಇದು ಕೇವಲ ಕೈವಲ್ಯಶ್ರುತ್ಯುಕ್ತವಾಗಿ ಸಾಕ್ಷಾನ್ಮೋಕ್ಷವನ್ನುಂಟುಮಾಡುವುದೆನಿಸಿದೆ. ॥೧-೨॥

ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ಮೂರು ವರ್ಣದವರಿಗೂ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮ

ಭಸ್ಮದೀಪ್ತತ್ರಿಪುಂಡ್ರಾಂಕೈಃ ಸದಾರುದ್ರಾಕ್ಷಧಾರಿಭಿಃ ।
ರುದ್ರಸೂಕ್ತಜಪಾಸಕ್ತೈಃ ಸದಾ ಪಂಚಾಕ್ಷರಾದರೈಃ ॥೪॥

ಧ್ಯೇಯೋ ಹೃತ್ಪಂಕಜೋತ್ಫುಲ್ಲಕರ್ಣಿಕಾಯಾಂ ವಿಮುಕ್ತಯೇ ।
ಕ್ಷಣಮೇಕಂ ಕ್ರತೂನಾಂ ಚ ಚತುಃಸಪ್ತತಿಜಂ ಫಲಂ ॥೫॥

ಪ್ರಾಪ್ನೋತಿ ಮನುಜಃ ಸದ್ಯೋ ಇತ್ಯಾಹ ಶ್ರುತಿರೇವ ಹಿ ।
ಧ್ಯಾನಮೇವ ಪರಾ ಪೂಜಾ ನಾನ್ಯಾ ಪೂಜಾ ಮಹೇಶಿತುಃ ॥೬॥

ಜ್ಞಾನಧ್ಯಾನಾಭಿಯುಕ್ತಸ್ಯ ಶಿವಃ ಶೀಘ್ರಂ ವಿಮೋಕ್ಷಕಃ ।
ಭವೋರುಪಾಶಬಂಧೇಭ್ಯೋ ರಹಸ್ಯಂ ತೇ ಮಯೋದಿತಂ ॥೭॥

---

ದವರಿಗೂ ಈ ಸ್ತೋತ್ರವು ಉಪಾದೇಯವಾದದ್ದು. ಸಂನ್ಯಾಸಿಗಳು ವಿಶೇಷವಾಗಿ ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಭಸ್ಮತ್ರಿಪುಂಡ್ರಗಳಿಂದ ಶೋಭಿಸುತ್ತಾ ಯಾವಾಗಲೂ ರುದ್ರಾಕ್ಷಗಳನ್ನು ಧರಿಸಿ, ರುದ್ರಸೂಕ್ತಗಳನ್ನು ಪಾರಾಯಣ ಮಾಡುತ್ತಾ ಅನವರತವೂ ಪಂಚಾಕ್ಷರಮಂತ್ರಜಪನಿರತರಾಗಿ ಅರಳಿದ ಹೃದಯಕಮಲದ ಕರ್ಣಿಕೆಯಲ್ಲಿ ಮೋಕ್ಷಪ್ರಾಪ್ತಿಗಾಗಿ ಈ ಶಿವಮೂರ್ತಿಯನ್ನು ಸರ್ವದಾ ಧ್ಯಾನ ಮಾಡಬೇಕು. ॥೩-೪॥

ಒಂದು ಕ್ಷಣಕಾಲ ಧ್ಯಾನಮಾಡುವುದರಿಂದಲೇ ಎಪ್ಪತ್ತುನಾಲ್ಕು ಯಾಗಗಳಿಂದುಂಟಾಗುವ ಫಲವನ್ನು ಮಾನವನು ಕೂಡಲೇ ಪಡೆಯುತ್ತಾನೆಂದು ಶ್ರುತಿಯೇ ಹೇಳಿರುವುದು. ಮಹೇಶ್ವರನಿಗೆ ಧ್ಯಾನವೇ ಶ್ರೇಷ್ಠವಾದ ಪೂಜೆಯು; ಇತರ ಪೂಜೆಗಳು ಅಷ್ಟು ಮುಖ್ಯವಲ್ಲ; ಜ್ಞಾನಪೂರ್ವಕವಾಗಿ ಧ್ಯಾನನಿರತನಾದವನಿಗೆ ಶಿವನು ಜಾಗ್ರತೆ ಮೋಕ್ಷವೀಯುವನು. ಜ್ಞಾನಸಹಿತವಾದ ಧ್ಯಾನಕ್ಕೆ ಪರಶಿವನು ಒಲಿಯುವಂತೆ ಕೇವಲ ಪೂಜೆಗೆ ಎಂದೂ ಒಲಿಯಲಾರನು. ॥೫-೬॥

ಅಯ್ಯ ಜೈಗೀಷವ್ಯನೆ, ಸಂಸಾರವೆಂಬ ಘೋರವಾದ ಪಾಶಬಂಧಮುಕ್ತಿಗೋಸ್ಕರ ನಿನಗೆ ಈ ಶಿವರಹಸ್ಯವು ನನ್ನಿಂದ ಹೇಳಲ್ಪಟ್ಟಿದೆ. ಸಮಸ್ತ ಪಾಪಗಳಿಗೂ ಶಂಭುವಿನ ಧ್ಯಾನವೇ ನಿವಾರಣೋಪಾಯವು; ಇತರ ಅಧಿಕಾರಭೇದಗಳಲ್ಲಿ ಸ್ಥಾನವೇ ಮೊದಲಾದ ವ್ಯತ್ಯಾಸಗಳಿಂದ ಪೂಜೆಯೇರ್ಪಟ್ಟಿದೆ. ಅಯ್ಯ ಮುನಿಯೆ, ಈ

ಸರ್ವೇಷಾಮಪಿ ಪಾಪಾನಾಂ ಧ್ಯಾನಂ ಶಂಭೋರ್ವಿನಿಷ್ಕೃತಿಃ ।
ಅನ್ಯಾಧಿಕಾರಿಭೇದೇಷು ಪೂಜಾಸ್ಥಾನಾದಿಭೇದತಃ ॥೮॥

ಶಿವೋದಿತೋಽಯಂ ಚ ವಿಧಿಃ ಶೃಣು ಧ್ಯಾಯಾಂತಿಮಂ ಮುನೇ ।
ದೇವ್ಯೈ ದೇವೇನ ಕಥಿತಂ ಸರ್ವಸಂಶಯನಾಶನಂ ॥೯॥

॥ ಈಶ್ವರ ಉವಾಚ ॥

ಅರ್ಕೇಂದುಬಿಂಬೇಷ್ವನಲೇ ಚ ಲಿಂಗೇ
ಹೃದ್ಯುತ್ತಮಾಂಗೇ ಮಮ ದೇವಿ ಪೂಜನಂ ।
ಪ್ರಶಸ್ತಮಾಹುರ್ನಿಗಮಾಗಮಾಃ ಶಿವೇ
ತತ್ಪೂಜನಂ ಸಫಲಮೇವ ಭವೇದ್ಭವಾನಿ ॥೧೦॥

ಪುಣ್ಯಾನ್ಯತುಲ್ಯಗಣಿತಾನಿ ಭವೇದ್ಧಿ ತಸ್ಯ (?)
ಪ್ರಾತರ್ದರ್ಶನಮೀಶ್ವರಸ್ಯಾಘಹರಂ ನೈಶಂ ವಿನಶ್ಯೇದಘಂ ।
ಮಧ್ಯಾಹ್ನೇ ಹಯಮೇಧಪುಣ್ಯಫಲದಂ ಸಾಯಂತನೇ ಜನ್ಮಹೃತ್

---

ವಿಧಿಯು ಶಿವನಿಂದ ಹೇಳಲ್ಪಟ್ಟಿರುವುದು ; ಸಕಲ ಸಂಶಯವನ್ನೂ ಹೋಗಲಾಡಿಸುವ ಮಹೇಶ್ವರನಿಂದ ದೇವಿಗೆ ಹೇಳಲ್ಪಟ್ಟ ರಹಸ್ಯವುಳ್ಳ ಈ ಅಧ್ಯಾಯದ ಕೊನೆಯ ಭಾಗವನ್ನು ಕೇಳು ಎಂದು ಹೇಳುತ್ತಾ ಸ್ಕಂದನು ಜೈಗೀಷವ್ಯನಿಗೆ ಹೀಗೆಂದನು. ॥೭-೮-೯॥

ಸೂರ್ಯ ಮತ್ತು ಚಂದ್ರಬಿಂಬಗಳಲ್ಲಿ, ಅಗ್ನಿ, ಶಿವಲಿಂಗ ಮತ್ತು ಉತ್ತಮಾವಯವವಾದ ಹೃದಯ, ಇವುಗಳಲ್ಲಿ ನನ್ನನ್ನುದ್ದೇಶಿಸಿ ಮಾಡುವ ನನ್ನ ಪೂಜೆಯು ಪ್ರಶಸ್ತವಾದುದೆಂದು ವೇದ ಮತ್ತು ಆಗಮಗಳು ಸಾರುತ್ತಿರುವುವು. ಪಾರ್ವತಿ, ಆದ್ದರಿಂದ ಇಂತಹ ಪೂಜೆಯು ಸಫಲವೇ ಆಗುವುದೆಂದು ತಿಳಿ. ॥೧೦॥

ಅಂತಹ ಪೂಜಕನಿಗೆ ಅಗಣಿತವಾದ ಪುಣ್ಯಪ್ರಾಪ್ತಿಯುಂಟಾಗುವುದು. ಪ್ರಾತಃಕಾಲದ ಶಿವದರ್ಶನವು ಹಿಂದಿನ ರಾತ್ರಿಸಮಯದಲ್ಲಿ ಸಂಪಾದಿಸಿದ ಸಮಸ್ತ ಪಾಪರಾಶಿಯನ್ನೂ ನಿವಾರಿಸಬಲ್ಲುದು. ಮಧ್ಯಾಹ್ನಕಾಲದ ದರ್ಶನವು ಅಶ್ವಮೇಧ ಯಾಗದ ಫಲವನ್ನುಂಟುಮಾಡುವುದು. ಸಾಯಂಕಾಲದಲ್ಲಿ ಶಿವದರ್ಶನ ಮಾಡಿದರೆ

ತಸ್ಮಾರ್ಧೇಂದುಕಲಾವತಂಸಭಜನಂ ಸಂಪೂಜನಂ ಲೋಕನಂ
ಧನ್ಯಾನಾಂ ಕಿಲ ಜಾಯತೇ ತ್ರಿಭುವನೇ ಪಾಪೌಘತಾಪೌಘಹೃತ್ ॥೧೧॥

ಅರ್ವಾಗ್ದಾಮಲಕಾತ್ಸ್ವತೋ ಲಘುತರಂ ಲಿಂಗಂ ನ ಶಸ್ತಂ ಶಿವೇ
ಸರ್ವದ್ರವ್ಯಭವಂ ಹಿ ಸೂಕ್ಷ್ಮಮಪಿ ತದ್ರತ್ನೋದ್ಭವಂ ಶಸ್ಯತೇ ।
ನೈತತ್ಸ್ಫಾಟಿಕ ಧಾತುಮಾರಕತಕೇ ಸತ್ರಾತಕೋತ್ತುಂಗಿತೇ
ಲಿಂಗೇ ನೈವ ಹಿ ದೋಷಭಾಗಕಲನಂ ತುಂಗಂ ಹಿ ಶಸ್ಯೇತ ಮೇ ॥೧೨॥

ಸೂಕ್ಷ್ಮೇ ಸ್ಫಾಟಿಕಜೇ ತಥಾ ಮರಕತೇ ಸದ್ವಿದ್ರುಮೈಃ ಕೀಲಿತೇ
ತ್ರಾಸಸ್ತ್ರಾಸಕರೋ ಭವೇತ ಗಿರಿಜೇ ತುಂಗಂ ನ ಲಿಂಗಂ ತ್ವಘಂ ।
ಮೃತ್ಸ್ನಾ ಚಾಪಿ ಚತುಷ್ಟಯಾಂಗುಲಿಹಿತಂ ಅರ್ವಾಕ್ತತೋ ದೋಷಕೃ
ತ್ಪಾಷಾಣಪ್ರಭವಂ ಗೃಹೇಷು ನಿಹಿತಂ ಹಂತ್ಯೇವ ಪುಣ್ಯಂ ಕೃತಂ ॥೧೩॥

---

ಪುನರ್ಜನ್ಮವೇ ಉಂಟಾಗುವುದಿಲ್ಲ. ದೇವಿ, ಪಾಪರಾಶಿಗಳನ್ನು ನಾಶಮಾಡುವ ಅರ್ಧಚಂದ್ರಶಿರೋಭೂಷಣನಾದ ಆ ಶಿವನ ಪೂಜೆ ಮತ್ತು ದರ್ಶನಗಳು ಮೂರು ಲೋಕಗಳಲ್ಲಿಯೂ ಕೇವಲ ಧನ್ಯರಿಗೆ ಮಾತ್ರ ದೊರೆಯುವುವು. ॥೧೧॥

ಪಾರ್ವತಿಯೆ, ನೆಲ್ಲಿಯಕಾಯಿಗಿಂತಲೂ ಸಣ್ಣಗಿರುವ ಶಿವಲಿಂಗವು ಪೂಜೆಗೆ ಪ್ರಶಸ್ತವಾದುದಲ್ಲ. ಸಕಲ ದ್ರವ್ಯಜನ್ಯವಾದ ಸೂಕ್ಷ್ಮಲಿಂಗವಾವುದೂ ಪ್ರಶಸ್ತವೆನಿಸುವುದಿಲ್ಲ. ಆದರೆ ರತ್ನದಿಂದ ಮಾಡಿದ ಸಣ್ಣಲಿಂಗವು ಮಾತ್ರ ಪೂಜೆಗೆ ಯೋಗ್ಯವೆನಿಸುತ್ತದೆ. ಇದೇ ಸೂಕ್ಷ್ಮಲಿಂಗವು ಸ್ಫಟಿಕ, ಮರಕತಗಳಿಂದ ಮಾಡಲ್ಪಟ್ಟರೆ ಭಯಪ್ರದವಾಗುವುದು. ಯಾವುದೇ ಆಗಲಿ ದೊಡ್ಡದಾಗಿ ಎತ್ತರವಾಗಿದ್ದರೆ ದೋಷಕ್ಕೆ ಗುರಿಯಾಗುವುದಿಲ್ಲ. ಆದ್ದರಿಂದ ಯಾವಾಗಲೂ ಎತ್ತರವಾದ ಶಿವಲಿಂಗವೇ ನನ್ನ ಪೂಜೆಗೆ ಪ್ರಶಸ್ತವಾದುದೆಂದು ತಿಳಿ. ॥೧೨॥

ಪಾರ್ವತಿಯೇ ಕೇಳು, ಸ್ಫಟಿಕ, ಮರಕತ ಮತ್ತು ಹವಳಗಳಿಂದ ಮಾಡಿದ ಸೂಕ್ಷ್ಮಲಿಂಗವು ಭಯಪ್ರದವಾಗುವುದು. ಅವುಗಳಲ್ಲಿ ರಚಿತವಾದ ಲಿಂಗವು ದೊಡ್ಡದಾಗಿರುವುದಾದರೆ ಯಾವ ವಿಧವಾದ ದೋಷವನ್ನೂ ಉಂಟುಮಾಡಲಾರದು. ಮಣ್ಣಿನಿಂದ ನಿರ್ಮಿತವಾದ ಲಿಂಗವು ನಾಲ್ಕು ಅಂಗುಲ ಪ್ರಮಾಣದಲ್ಲಿಯಾದರೂ ಇರಲೇಬೇಕು. ಅದಕ್ಕಿಂತ ಚಿಕ್ಕ ಆಕೃತಿಯುಳ್ಳ ಲಿಂಗವು ದೋಷಪ್ರದವೆನಿಸುವುದು ;

ಧಾತುಭ್ಯೋಽಪ್ಯಧಿಕಂ ಸುರತ್ನನವಕೈಃ ಕ್ಲುಪ್ತಂ ತತಃ ಪಾರ್ಥಿವಂ
ತಸ್ಮಾದಪ್ಯಯುತಂ ಫಲಾರ್ಥಿಜನಕಂ ಸ್ಯಾದ್ಬಾಣಲಿಂಗಂ ರಸಂ ।
ಶಂಭೋರುತ್ತಮವೀರ್ಯಜಾನ್ನಹಿ ಪರಂ ಲಿಂಗಂ ತಥಾ ವೈ ಚರೇ
ಸ್ಥೈರ್ಯಂ ದೈವತವಾರ್ಷಮಾನುಷಕೃತಂ ಸ್ವಾಯಂಭುವಸ್ಯಾಫಲಂ ॥೧೪॥

ಪಾರ್ಥಪ್ರಹಾರಾಂಕಿತ ಹೇಮಬಿಂದು
ಚಿಹ್ನಂ ಭವೇನ್ನಾರ್ಮದಲಿಂಗಮೀಶೇ ।
ತ್ರಿಪಂಚವಾರಂ ತುಲಯಾ ನ ಸಾಮ್ಯಂ
ಪ್ರಯಾತಿ ತದ್ಬಾಣಭವಂ ಪ್ರಶಸ್ತಂ ॥೧೫॥

---

ಶಿಲೆಯಿಂದ ರಚಿತವಾದ ಶಿವಲಿಂಗಗಳನ್ನು ಮನೆಯಲ್ಲಿಡಬಾರದು. ಅದು ಯಜಮಾನನು ಮಾಡಿದ ಪುಣ್ಯಗಳನ್ನೆಲ್ಲಾ ನಾಶಮಾಡುವುದು. ॥೧೩॥

ನವರತ್ನ ಖಚಿತಲಿಂಗವು ಲೋಹದ ಲಿಂಗಗಳಿಗಿಂತಲೂ ಉತ್ತಮವು. ಅದಕ್ಕಿಂತಲೂ ಪಾರ್ಥಿವಲಿಂಗವು ಶ್ರೇಷ್ಠವಾದುದು. ಅದಕ್ಕಿಂತಲೂ ಬಾಣಲಿಂಗವು ಹತ್ತುಸಾವಿರ ಪಾಲು ಅಧಿಕಫಲಜನಕವು. ಎಲ್ಲಕ್ಕಿಂತಲೂ ಪಾದರಸದ ಲಿಂಗವು ಅತ್ಯುತ್ತಮವು. ದೇವಿ, ಶಂಭುವಿನ ಉತ್ತಮವೀರ್ಯವೆನಿಸಿದ ಪಾದರಸದ ಲಿಂಗಗಳಿಗಿಂತ ಉತ್ತಮವಾದ ಶಿವಲಿಂಗವೇ ಬೇರೊಂದಿಲ್ಲವೆಂದು ತಿಳಿ. ಇವು ಚರಲಿಂಗಗಳ ವಿಷಯವಾಯಿತು. ಇನ್ನು ಸ್ಥಿರಲಿಂಗಗಳಲ್ಲಿ ದೇವಕೃತ, ಋಷಿಕೃತ ಮತ್ತು ಮನುಜಕೃತಗಳೆಂದು ಮೂರುವಿಧವಾಗಿರುವುವು. ಸ್ವಾಯಂಭುವ ಲಿಂಗವು(ತಾನಾಗಿ ಉದ್ಭವಿಸಿದ ಶಿವಲಿಂಗವು) ಎಲ್ಲಕ್ಕಿಂತಲೂ ಹೆಚ್ಚು ಫಲಕಾರಿಯಾದುದು. ॥೧೪॥

ಪಾಶುಪತಾಸ್ತ್ರವನ್ನು ಸಂಪಾದಿಸಲು ಹೊರಟ ಅರ್ಜುನನ ಬಾಣದ ಏಟಿನಿಂದ ಗುರುತಾದ ಚಿನ್ನದ ಬಣ್ಣದ ಚಿಹ್ನೆಯು ಈಶ್ವರನ ಲಿಂಗಗಳಲ್ಲಿ ನಾರ್ಮದ ಲಿಂಗದಲ್ಲಿ ಮಾತ್ರ ಕಂಡುಬರುವುದು. ಅದಕ್ಕೆ ಬೇರೆ ಯಾವ ಲಿಂಗದ ಸಾಮ್ಯವನ್ನೂ ಕೊಡಲು ಸಾಧ್ಯವಿಲ್ಲ; ಅದರಲ್ಲಿರುವ ಮಹಿಮೆಗಿಂತ, ಮೂರು ಅಥವಾ ಐದು ಭಾಗದ ಮಹಿಮೆಯುಳ್ಳ ಶಿವಲಿಂಗವು ಬೇರೊಂದು ದೊರೆಯಲಾರದು. ಅದನ್ನೇ ಬಾಣಲಿಂಗವೆನ್ನುವರು. ॥೧೫॥

ಶ್ವೇತಂ ಮುಕ್ತಿದಮಂಬಿಕೇಽಸಿತಮಹೋ ಪುಣ್ಯಾಭಿವೃದ್ಧ್ಯರ್ಚನೇ
ರಕ್ತಂ ನಾರ್ಮದಲಿಂಗಮಪ್ಯಘಹರಂ ದಾರಿದ್ರ್ಯದಂ ಪೂಜನಾತ್ ।
ಪ್ರಾದೇಶಾದಧಿಕಂ ಚರಾರ್ಚನವಿಧೌ ನೈತಚ್ಚ ತತ್ಸ್ಥಾವರಂ ॥೧೬॥

ಸಪೀಠಾಪೀಠಂ ವಾ ಭವತು ಗಿರಿಜೇ ನಾರ್ಮದಭವಂ
ಪ್ರಶಸ್ತಂ ಹಸ್ತಾಭ್ಯಾಂ ಸ್ಪೃಶತಿ ಯದಿ ಮುಕ್ತೇರುಭಯತಃ ।
ತಥೈವಾರ್ಚ್ಯಂ ಬಿಲ್ವೈರ್ಯದಿ ಪರಮಮುಕ್ತಿಂ ಕಿಲ ಲಭೇ
ದ್ಗೃಹೇ ಸಂಸ್ಥಂ ಕ್ಷೇತ್ರಂ ಪ್ರಭವತಿ ತತಃ ಕ್ರೋಶಮಗಜೇ ॥೧೭॥

ಚರಾಚರಂ ವಾ ವಿಪಿನೇ ನಗೇವಾ
ಸ್ಥಿತಂ ಚ ಲಿಂಗಂ ಯದಿ ಪೂಜ್ಯದೃಷ್ಟ್ಯಾ ।
ತದ್ಬಾಣಲಿಂಗಂ ಪರಪೂಜ್ಯದೃಷ್ಟಂ
ತತ್ಸ್ಥಾವರಾರ್ಚೇಕ್ಷಣಪುಣ್ಯಭಾಕ್ಸ್ಯಾತ್ ॥೧೮॥

---

ಅಂಬಿಕೆ, ಬಾಣಲಿಂಗಗಳಲ್ಲಿ ಬಿಳಿಯಲಿಂಗವು ಮುಕ್ತಿಪ್ರದವು ; ಕಪ್ಪುಬಣ್ಣದ ಶಿವಲಿಂಗವನ್ನು ಪೂಜಿಸುವುದರಲ್ಲಿ ಪುಣ್ಯವು ಅಭಿವೃದ್ಧಿಯಾಗುವುದು. ಆದರೆ ಕೆಂಪುವರ್ಣದ ನಾರ್ಮದ ಲಿಂಗವನ್ನು ಪೂಜೆಮಾಡುವುದರಿಂದ ಪಾಪನಾಶವಾದರೂ ಬಡತನವು ಹೆಚ್ಚಾಗಿ ವೃದ್ಧಿಯಾಗುವುದು. ದೇವಿ, ಒಂದು ಚೋಟಿಗಿಂತಲೂ ಹೆಚ್ಚು ಪ್ರಮಾಣದಲ್ಲಿ ರಚಿತವಾದ ಶಿವಲಿಂಗವು ಚರಲಿಂಗಾರ್ಚನವಿಧಿಯಲ್ಲಿ ಫಲದಾಯಕವಾಗುವುದಿಲ್ಲ. ಆದರೆ ಸ್ಥಾವರಲಿಂಗಾರ್ಚನಾ ವಿಧಿಯಲ್ಲಿ ಮಾತ್ರ ಈ ಪ್ರಮಾಣವು ಫಲದಾಯಕವಾಗುವುದೆಂದು ಭಾವಿಸಬೇಕು. ॥೧೬॥

ಪರ್ವತರಾಜಕುಮಾರಿಯೇ, ಪೀಠವಿರಲಿ, ಇಲ್ಲದಿರಲಿ, ಪ್ರಶಸ್ತವಾದ ನಾರ್ಮದ ಲಿಂಗವನ್ನು ಭಕ್ತಿಯಿಂದ ಯಾವನು ತನ್ನ ಎರಡು ಕೈಗಳಿಂದಲೂ ಮುಟ್ಟುವನೋ ಅವನು ಇಹಪರಗಳಲ್ಲಿ ಭುಕ್ತಿಮುಕ್ತಿಗಳನ್ನು ಪಡೆಯುವನು. ಹಾಗೆಯೇ ಅದನ್ನು ಬಿಲ್ವದಳಗಳಿಂದ ಪೂಜೆಮಾಡುವುದಾದರೆ ಶಾಶ್ವತವಾದ ಪರಮಮುಕ್ತಿಯನ್ನು ಪಡೆಯುವನು. ಒಂದು ಮನೆಯಲ್ಲಿ ಈ ನಾರ್ಮದಲಿಂಗವಿರುವುದಾದರೆ ಅದರ ಸುತ್ತಲೂ ಇರುವ ಒಂದು ಹರಿದಾರಿ ಪ್ರದೇಶವು ಶಿವಕ್ಷೇತ್ರವೆನಿಸುವುದು. ॥೧೭॥

ಚರ ಅಥವಾ ಸ್ಥಿರವೆನಿಸಿದ ಶಿವಲಿಂಗಗಳು ಅರಣ್ಯ ಅಥವಾ ಬೆಟ್ಟದಲ್ಲಿದ್ದರೂ, ಅದನ್ನು ಪೂಜ್ಯದೃಷ್ಟಿಯಿಂದಲೇ ನೋಡಬೇಕು. ಆಲಿಂಗವಿರುವ ಪ್ರದೇಶವೇ

ಯದ್ದತ್ತಂ ನಿಯಮಾರ್ಚನಾಯ ಗುರುಣಾ ಲಿಂಗಂ ಪ್ರಪೂಜ್ಯಂ ಸದಾ
ರತ್ನಸ್ಫಾಟಿಕಧಾತುಬಾಣಕಲಿತಂ ತಲ್ಲಿಂಗಭಂಗೇ ಶಿವೇ ।
ಪ್ರಾಣಾನಪ್ಯಸಮೀಕ್ಷ್ಯ ಯಸ್ತ್ಯಜತಿ ಸಃ ಸ್ಯಾದ್ಭಕ್ತವರ್ಯೋಽಂಬಿಕೇ
ತಸ್ಯಾಹಂ ವಿತರಾಮಿ ಮುಕ್ತಿಮಧಿಕಾಂ ತತ್ತುಲ್ಯಮರ್ಚ್ಯೇತ ವಾ ॥೧೯॥

ಈಶಾರ್ಚನಾವಿರಹಿತಂ ಯದಿ ಭಕ್ಷ್ಯಭೋಜ್ಯ
ಮನ್ನಂ ಫಲಂ ಕೀಟಕಸಂಮಿತಂ ಭವೇತ್ ।
ತ್ಯಕ್ತ್ವಾ ನರೋದನ್ಸತು ಪಂಚವತ್ಸರಂ
ಪ್ರತಪ್ತಶೈಲೇ ನಿವಸೇಚ್ಛಿವಾರ್ಚನಾಂ ॥೨೦॥

---

ಶಿವಕ್ಷೇತ್ರವೆನಿಸುವುದು. ಮತ್ತೊಬ್ಬರಿಂದ ಪೂಜಿಸಲ್ಪಟ್ಟು ದರ್ಶನಮಾಡಲ್ಪಟ್ಟಿರುವ ಬಾಣಲಿಂಗವನ್ನು ಸಾಮಾನ್ಯಮಾನವನು ದರ್ಶನಮಾಡುವುದರಿಂದ ಸ್ಥಾವರಲಿಂಗದ ಪೂಜಾ ಮತ್ತು ದರ್ಶನಜನ್ಯವಾದ ಪುಣ್ಯಫಲವನ್ನು ಹೊಂದಬಹುದು. ॥೧೮॥

ರತ್ನ, ಸ್ಫಟಿಕ, ಲೋಹ ಅಥವಾ ಬಾಣಲಿಂಗಗಳಲ್ಲಿ ಗುರುವು ಯಾವುದನ್ನು ನಿಯಮದಿಂದ ಪೂಜಿಸಲು ಅನುಗ್ರಹಿಸಿಕೊಡುವನೋ ಅದನ್ನೇ ಯಾವಾಗಲೂ ಭಕ್ತಿಯಿಂದ ಪೂಜೆಮಾಡಬೇಕು. ಪಾರ್ವತಿಯೇ, ಒಂದುವೇಳೆ ಆ ಲಿಂಗವು ಭಿನ್ನವಾದರೆ ತನ್ನ ಪ್ರಾಣವನ್ನೇ ಅದಕ್ಕಾಗಿ ತ್ಯಾಗಮಾಡಬಹುದು. ಹಾಗೆ ತನ್ನ ಪ್ರಾಣಕ್ಕಿಂತಲೂ ಹೆಚ್ಚಿನ ಭಕ್ತಿಯನ್ನು ಶಿವಲಿಂಗದಲ್ಲಿ ಇಟ್ಟಿರುವವನೇ ನಿಜವಾದ ನನ್ನ ಭಕ್ತವರ್ಯನೆನಿಸುವನು. ಅವನಿಗೇ ನಾನು ಅತ್ಯುತ್ತಮವಾದ ಮೋಕ್ಷವನ್ನು ಕರುಣಿಸುವೆನು. ಒಂದುವೇಳೆ ಅಂತಹ ಲಿಂಗವು ಮತ್ತೊಂದು ದೊರೆಯದಿದ್ದರೆ ಅವನು ಬಾಣಲಿಂಗ ಸದೃಶವಾದ ಮತ್ತೊಂದು ಲಿಂಗವನ್ನಾದರೂ ಪೂಜೆಮಾಡಬೇಕು. ॥೧೯॥

ಶಿವಲಿಂಗಕ್ಕೆ ಪೂಜೆ ಮತ್ತು ನೈವೇದ್ಯಗಳನ್ನು ಸಮರ್ಪಿಸದೆ, ಭಕ್ಷ್ಯ, ಭೋಜ್ಯ, ಅನ್ನ, ಹಣ್ಣು ಮುಂತಾದವುಗಳನ್ನು ತಿನ್ನುವವನು ಕ್ರಿಮಿಕೀಟಾದಿಗಳ ಜನ್ಮವನ್ನು ತಾಳುವನು. ಅಂತಹ ಶಿವಪೂಜಾವಿಮುಖನು ಐದುವರ್ಷಕಾಲ ಕಾದ ಬಂಡೆಯ ಮೇಲೆ ನಿಂತು ಶಿವಪೂಜೆಮಾಡಬೇಕು. ಒಂದು ದಿನದಲ್ಲಿ ಶಿವಪೂಜಾ ತ್ಯಾಗಮಾಡುವುದರಿಂದ ಅಷ್ಟು ಹೆಚ್ಚಿನ ಪಾಪವು ಲಭಿಸುವುದು. ॥೨೦॥

ನಿಯಮಾಚ್ಛಿವಲಿಂಗಮರ್ಚಯ
ನ್ಮರಣೇ ವಾಪಿ ತ್ಯಜನ್ಸ ಏವ ಪಾಪೀ ।
ಯದಿ ಸಂತ್ಯಜ್ಯ ಪ್ರಮಾದತೋ ಹರಾರ್ಚ್ಯಾಂ
ಸ ಹಿ ಕುರ್ಯಾಚ್ಚ ಉಪೋಷ್ಯ ಭಕ್ತಿಯುಕ್ತಃ ॥೨೧॥

ನ ಪ್ರಾಣಲಿಂಗನಿಯಮಃ ಕಲಿಜದ್ವಿಜಾನಾಂ
ಶಸ್ತಃ ಪ್ರಶಸ್ತಮಗಜೇ ಕಿಲ ಹಸ್ತಬದ್ಧಂ ।
ಲಿಂಗಂ ಗಲೇ ಚ ಹೃದಯೇ ಕಿಲ ತಾಂತ್ರಿಕಾಣಾಂ
ದೇವಸ್ಯಧಾರಣವಿಧಿಂ ಪ್ರವದಂತಿ ವೇದಾಃ ॥೨೨॥

ನಾಯಂ ವೈದಿಕಸಮ್ಮತೋ ವಿಧಿರಯಂ
ಲಿಂಗಾರ್ಚನಂ ಕೇವಲಂ ।
ಭಸ್ಮಾಕ್ಷಾದಿವಿಧಾರಣಂ ಚ ನಿಯತಂ-
ತ್ಯಾಜ್ಯಂ ನ ಚೈತದ್ದ್ವಿಜೈಃ ॥೨೩॥

---

ನಿಯಮವಾಗಿ ಶಿವಲಿಂಗಪೂಜೆಯನ್ನು ನಿತ್ಯವೂ ಮಾಡುತ್ತಾ ಮರಣಕಾಲದಲ್ಲಿ ತ್ಯಜಿಸುವವನೂ ಪಾಪಿಯೆನಿಸುವನು. ಒಂದುವೇಳೆ ಅಜ್ಞಾನದಿಂದ (ಪ್ರಮಾದದಿಂದ) ಶಿವಪೂಜೆಯನ್ನು ಎಂದಾದರೂ ಬಿಟ್ಟಿದ್ದಪಕ್ಷದಲ್ಲಿ ಮತ್ತೆ ಅವನೇ ಭಕ್ತಿವಿಶಿಷ್ಟನಾಗಿ ಒಂದುದಿನ ಉಪವಾಸವಿದ್ದು ಮತ್ತೆ ಪೂಜೆಮಾಡಬಹುದು. ॥೨೧॥

ಪಾರ್ವತಿಯೇ, ಕಲಿಯುಗದ ದ್ವಿಜರಿಗೆ ಪ್ರಾಣಲಿಂಗಪೂಜಾನಿಯಮವೇನೂ ಇಲ್ಲ. ಕೈಯ್ಯಲ್ಲಿ ರಚಿಸಿದ ಶಿವಲಿಂಗವೇ ಅವರಿಗೆ ಪ್ರಶಸ್ತವೆಂದು ಹೇಳಲ್ಪಟ್ಟಿದೆ. ತಾಂತ್ರಿಕರಿಗೆ ಮಾತ್ರ ಕೊರಳು ಮತ್ತು ಹೃದಯದಲ್ಲಿ ಮಹಾದೇವನ ಲಿಂಗಧಾರಣವಿಧಿಯನ್ನು ವೇದಗಳು ಒಂದೊಂದು ಪ್ರಕರಣದಲ್ಲಿ ಹೇಳುವುವು. ॥೨೨॥

ಪಾರ್ವತಿಯೇ, ಆದರೆ ಕಂಠ ಮತ್ತು ಹೃದಯದಲ್ಲಿ ಶಿವಲಿಂಗಧಾರಣೆ ಮಾಡುವುದು ವೈದಿಕಸಂಮತವಾದ ವಿಧಿಯಲ್ಲ. ತಪ್ಪದೆ ಶಿವಲಿಂಗಾರ್ಚನೆ ಮಾಡುವುದೇ ವೇದದ ಒಂದು ಕಟ್ಟಪ್ಪಣೆ. ಭಸ್ಮಧಾರಣೆ, ರುದ್ರಾಕ್ಷಧಾರಣೆಗಳು ಮಾತ್ರ ನಿಯತವಾದವುಗಳು; ಬ್ರಾಹ್ಮಣರು ಇದನ್ನು ಎಂದೂ ಬಿಡಬಾರದು.

ಸರ್ವೇಂದ್ರಿಯಾದಿರಹಿತೋ ಯದಿಪುತ್ರಕೃತ್ಯಂ ।
ತಸ್ಯಾರ್ಚನಂ ಭವತಿ ಶೈಲಸುತೇ ತ್ರಿಸತ್ಯಂ ॥೨೪॥

ತುಂಗಂ ಯಾವಚ್ಚ ಲಿಂಗಂ ಪರಿಣತಿರಪಿ ಸಾ ತಾವತೀ ಯೋನಿರುಕ್ತಾ
ಶಸ್ತಾ ವಿಸ್ತೀರ್ಣವೃತ್ತಾ ಭವತಿ ಗಿರಿಸುತೇ ಗೋಮುಖೀ ಪೀಠತೋರ್ಧ್ವಾ ।
ಪೀಠಂ ಚಾಪಿ ಚತುಷ್ಕವೃತ್ತಕಲಿತಂ ತಲ್ಲಿಂಗಮಾನಾಂಗುಲಂ
ವ್ಯಾಯಾಮೋಚ್ಛ್ರಿತವೃತ್ತಮಧ್ಯರಹಿತಂ ನ್ಯೂನಾಧಿಕಂ ದೋಷಕೃತ್ ॥೨೫॥

ನೇದಂ ಮಾನಂ ಮನೋಜ್ಞಂ ಭವತಿ ಗಿರಿಸುತೇ ಲಿಂಗಮಾನೇ ಸ್ವಯಂಭೌ
ದೇವರ್ಷೇಽಪಿ ವದಂತಿ ಮಾನುಷವಿಧೌ ತತ್ಸ್ಥಾವರೇ ವಾ ಚರೇ ।
ರತ್ನೇ ಧಾತುವಿನಿರ್ಮಿತೇ ಸ್ಫಟಿಕಜೇ ಸ್ಯಾನ್ಮೃತ್ತಿಕಾಕಲ್ಪಿತೇ
ಸೂತ್ರೀಪಂಚಕಮೇತದೇವಕಲಿತಂ ಸ್ಯಾದ್ಭೋಗಮೋಕ್ಷಪ್ರದಂ ॥೨೬॥

---

ತಂದೆಯು ಕೇವಲ ವೃದ್ಧನಾಗಿ ಇಂದ್ರಿಯಪಾಟವವಿಲ್ಲದಿರುವಾಗ ತಂದೆಗಾಗಿ ಮಗನೇ ಶಿವಲಿಂಗಾರ್ಚನೆ ಮಾಡುವುದಾದರೆ ಆಗ ಆ ಪೂಜೆಯು ತಂದೆಯಿಂದ ಮಾಡಲ್ಪಟ್ಟಂತೆಯೇ ಆಗುವುದು. ಇದರಿಂದ ತಂದೆ ಮಕ್ಕಳಿಬ್ಬರಿಗೂ ಆ ಪೂಜಾ ಫಲವು ಲಭಿಸಿದಂತಾಗುವುದು. ॥೨೩-೨೪॥

ಸ್ಥಾವರವಾದ ಶಿವಲಿಂಗವನ್ನು ಪ್ರತಿಷ್ಠೆಮಾಡುವಾಗ, ಶಿವಲಿಂಗವು ಎಷ್ಟು ಎತ್ತರವಾಗಿ ಮೇಲೆ ಕಾಣುವುದೋ, ಪಾಣಿಬಟ್ಟಲಿನಲ್ಲಿರುವ ಯೋನಿಯೂ ಅಷ್ಟು ಆಳವುಳ್ಳದ್ದಾಗಿರಬೇಕು. ಪಾಣಿಬಟ್ಟಲಿನ ಸುತ್ತಪ್ರದೇಶವು ಹೆಚ್ಚು ಅಗಲವುಳ್ಳದ್ದಾಗಿ, ಪೂರ್ಣಪೀಠವು ಗೋಮುಖದ ಆಕಾರದಲ್ಲಿ ಕಾಣುತ್ತಿರಬೇಕು. ಪಾಣಿಬಟ್ಟಲಿನ ಮಧ್ಯಭಾಗದಲ್ಲಿ ಶಿವಲಿಂಗವಿದ್ದು, ಅದರ ಎತ್ತರವೆಷ್ಟಿರುವುದೋ, ಅಷ್ಟೇ ಆಳತೆಯ ಪ್ರದೇಶವು ಸುತ್ತಲೂ ಆ ಪಾಣಿಬಟ್ಟಲಿನಲ್ಲಿರಬೇಕು. ಆ ಆಳತೆಯಲ್ಲಿ ಹೆಚ್ಚು ಅಥವಾ ಕಮ್ಮಿಯಿರಬಾರದು. ಆರೀತಿ ನ್ಯೂನಾಧಿಕತೆ ಕಂಡುಬರುವುದಾದರೆ ಆ ಶಿವಲಿಂಗವೇ ದೋಷಯುಕ್ತವಾಗುವುದು. ॥೨೫॥

ಗಿರಿರಾಜಕುಮಾರಿಯೇ, ಹಿಂದೆ ಹೇಳಿದ ಶಿವಲಿಂಗ ಮತ್ತು ಪಾಣಿಬಟ್ಟಲಿನ ಪ್ರಮಾಣವು ಸ್ವಯಮುಃದ್ಭವಲಿಂಗ ಅಥವಾ ದೇವ ಮತ್ತು ಋಷಿಗಳಿಂದ ಕಲ್ಪಿತವಾದ ಲಿಂಗಗಳಿಗಲ್ಲ. ಮಾನವರಚಿತವಾದ ಚರ ಅಥವಾ ಸ್ಥಿರಲಿಂಗಗಳಿಗೆ ಮಾತ್ರ ಮೇಲೆ

ನ್ಯೂನಾಧಿಕಂ ಭವತಿ ದೋಷಕರಂ ಹಿ ಲಿಂಗ-
ಮಾಯುಃ ಪ್ರಜಾಧನಪಶೂನ್ಪ್ರವಿನಾಶಯೇತ್ತು ।
ತಸ್ಮಾತ್ಸಮಾಂಗುಲಮಿಧಂ ಪ್ರವಿಚಾರ್ಯ ಕುರ್ಯಾ-
ಲ್ಲಿಂಗಂ ಮನೋಜ್ಞಮಗಜೇ ವಿಧಿರೇಷ ಶುದ್ಧಃ ॥೨೭॥

ಶಂಭೋರ್ಲಿಂಗೇ ಸ್ವಯಂಭೌ ಋಷಿಸುರನಿಹಿತೇ ಬಾಣಲಿಂಗೇ ಚರೇವಾ
ರತ್ನಸ್ಫಾಟಿಕಧಾತುಸಂಭವಮಹಾಲಿಂಗೇ ಮೃದಾಪಾರದೇ ।
ಧ್ಯಾತ್ವಾ ವಾ ಹೃದಯಾಂಬುಜೇ ದ್ವಿಜವರಶ್ಚಂಡೇಶನಿರ್ಮಾಲ್ಯಭಾ-
ಜ್ಯೋಭೋಯಾದಿತರೇಷು ವೈದಿಕಚರಸ್ತಂ ನ ಸ್ಪೃಶೇದ್ದೂಷಕಂ ॥೨೮॥

---

ಹೇಳಿದ ನಿಯಮವುಂಟು. ರತ್ನ, ಲೋಹ, ಸ್ಫಟಿಕ ಮತ್ತು ಮಣ್ಣಿನ ಲಿಂಗಗಳಲ್ಲಿ ಪಂಚಸೂತ್ರಾತ್ಮಕವಾದ ಪ್ರಮಾಣವೇ ಮುಖ್ಯವಾದದ್ದು. ಹಾಗೆ ಪ್ರಮಾಣ ಸಿದ್ಧವಾದ ಶಿವಲಿಂಗವು ಭೋಗ ಮತ್ತು ಮೋಕ್ಷಗಳನ್ನುಂಟುಮಾಡುವುದು. ॥೨೬॥

ದೇವಿ, ಈ ಲಿಂಗಪ್ರಮಾಣದಲ್ಲಿ ಹೆಚ್ಚುಕಡಿಮೆಯಾದರೆ ದೋಷಕರವು. ಇದು ಆಯುಸ್ಸು, ಪ್ರಜೆ, ಹಣ, ಪಶು ಮುಂತಾದ ಸುಖಗಳನ್ನು ನಾಶಮಾಡುವುದು. ಆದ್ದರಿಂದ ಸಮಾನವಾದ ಅಂಗುಲವನ್ನು ಚೆನ್ನಾಗಿ ವಿಚಾರಮಾಡಿ ಮನೋಹರವಾದ ಲಿಂಗವನ್ನು ರಚಿಸಬೇಕು. ದೇವಿ, ಈರೀತಿ ಲಿಂಗಪ್ರಮಾಣವಿಧಿಯು ಹೇಳಲ್ಪಟ್ಟಿರುವುದು. ॥೨೭॥

ಸ್ವಯಮುದ್ಭವ, ಋಷಿ ಮತ್ತು ದೇವಕೃತವಾದಲಿಂಗಗಳು, ಬಾಣಲಿಂಗ, ಚರ, ಅಥವಾ ಸ್ಥಿರಲಿಂಗಗಳು, ರತ್ನ, ಸ್ಫಟಿಕ ಲೋಹಗಳಲ್ಲಿಮಾಡಿದ ದೊಡ್ಡಲಿಂಗಗಳು, ಪಾರ್ಥಿವ ಮತ್ತು ಪಾದರಸದಲಿಂಗ, ಈ ಲಿಂಗಗಳ ಆರಾಧನೆಯಲ್ಲಿಯೂ ಹೃದಯಕಮಲದಲ್ಲಿ ಪರಶಿವನನ್ನು ಧ್ಯಾನಮಾಡಿಯೂ ಚಂಡೇಶ್ವರನಿಗೆ ನಿರ್ಮಾಲ್ಯವನ್ನು ಸಮರ್ಪಿಸದೆ ತಾವು ಮೊದಲು ಸ್ವೀಕರಿಸಬಾರದು. ಇತರ ಲಿಂಗಾರ್ಚನೆಯಲ್ಲಿ ವೈದಿಕಾಚರಣೆಯುಳ್ಳವನು ದೋಷವಿಶಿಷ್ಟವಾದ ಆ ನಿರ್ಮಾಲ್ಯವನ್ನು ಮುಟ್ಟಬಾರದು. ॥೨೮॥

ಏತೇಷಾಮುಘಹಾರಿ ನಿರ್ಮಲತರಂ ನಿರ್ಮಾಲ್ಯಮುಷ್ಯದ್ರಿಜೇ
ಚಂಡೇಶಾಧಿಕೃತಿರ್ನ ತತ್ರ ಕಲಿತಾ ತದ್ಗ್ರಾಹ್ಯಮೇವ ದ್ವಿಜೈಃ ।
ತಂತ್ರೇಷ್ವಾಗಮಯಂತ್ರಮಂತ್ರಸಹಿತೇ ಸ್ತ್ರೀಶೂದ್ರಸಂಪೂಜಿತೇ
ನ ಗ್ರಾಹ್ಯಂ ಕಿಲ ಚಂಡಭಾಕ್ತಮಗಜೇ ತದ್ವೈದಿಕೈಃ ಕೇವಲಂ ॥೨೯॥

ಬಾಣಸ್ಫಾಟಿಕಧಾತುಲಿಂಗನಿವಹೇ ಪುಣ್ಯೇ ರಸೇಂದ್ರೋದ್ಭವೇ
ಸ್ವಾಯಂಭೌ ಹೃದಯಾಬ್ಜಕೋಶ ಕಲಿತೇ ದತ್ತಂ ಪುರಸ್ತಾದ್ಧಿಯತ್ ।
ನೈವೇದ್ಯಂ ಚ ವರಾನ್ನಭಕ್ಷ್ಯ ಫಲಜಂ ಗ್ರಾಹ್ಯಂ ತಥಾ ವೈದಿಕೈಃ ॥೩೦॥

ಅನ್ಯತ್ರ ಪ್ರೋಕ್ಷ್ಯಾಳ್ಯಮೇಷಾಂ ಫಲರಸಗಣಜಂ ತ್ಯಾಜ್ಯಮನ್ನಂ ತಥಾನ್ಯೇ
ಶಾವೇ ಚಾಪಿ ಚ ಸೂತಕೇಽಪಿ ಗಿರಿಜೇ ಮಲ್ಲಿಂಗಸಂಗೋಜ್ಝಿತಃ ।
ದೂರಾದ್ಬಿಲ್ವದಳಂ ತ್ಯಜಂತಿ ಸುಧಿಯೋ ನಿತ್ಯಾರ್ಚನಾ ತೇ ನ ಹಿ
ಸ್ಯಾದೇವಂ ನಿಯಮೋಽಪ್ಯಜಾಯತ ಶಿವಸ್ತೇನೈವ ಸಂತುಷ್ಯತಿ . ॥೩೧॥

---

ಚಂಡೇಶ್ವರನ ಅಧಿಕಾರವು ಯಾವಯಾವ ಶಿವಲಿಂಗಾರಾಧನೆಯಲ್ಲಿ ಇರುವುದಿಲ್ಲವೋ ಅಂತಹಸ್ಥಳಗಳಲ್ಲಿ ಇತರ ಚರ ಅಥವಾ ಸ್ಥಿರಲಿಂಗಗಳ ಪರಿಶುದ್ಧವೆನಿಸಿದ ನಿರ್ಮಾಲ್ಯವನ್ನು ದ್ವಿಜರು ತೆಗೆದುಕೊಳ್ಳಬಹುದು. ಯಾವಶಿವಲಿಂಗಾರಾಧನೆಯು ತಂತ್ರ, ಆಗಮ, ಯಂತ್ರ, ಮಂತ್ರಯುಕ್ತವಾಗಿ ನಡೆದಿರುವುದೋ ಮತ್ತು ಎಲ್ಲ ಸ್ತ್ರೀ ಅಥವಾ ಶೂದ್ರರಿಂದ ಪೂಜಿಸಲ್ಪಟ್ಟಿರುವುದೋ ಅಂತಹಕಡೆಗಳಲ್ಲಿ ಚಂಡಿಕೇಶ್ವರನ ನಿರ್ಮಾಲ್ಯವನ್ನು ಕೇವಲ ವೈದಿಕರು ಗ್ರಹಣಮಾಡಬಾರದು. ॥೨೯॥

ಬಾಣಲಿಂಗ, ಸ್ಫಟಿಕಲಿಂಗ, ಲೋಹಗಳ ಲಿಂಗಸಮೂಹ, ಪುಣ್ಯಕರವಾದ ಪಾದರಸದಲಿಂಗ, ಸ್ವಯಮುದ್ಭವಿಸಿದಲಿಂಗ ಇವುಗಳ ಪೂಜೆಯಲ್ಲಿಯೂ, ಹೃದಯ ಕಮಲಕುಟ್ಮಲದಲ್ಲಿ ನೆಲಸಿದ ಶಿವನ ಆರಾಧನೆಯಲ್ಲಿಯೂ, ನಿವೇದಿಸಿದ ಶ್ರೇಷ್ಠವಾದ ಅನ್ನ, ಭಕ್ಷ್ಯಭೋಜ್ಯಗಳು, ಹಣ್ಣುಹಂಪಲು ಮುಂತಾದವುಗಳನ್ನು ವೈದಿಕರು ಧಾರಾಳವಾಗಿ ಸ್ವೀಕರಿಸಬಹುದು. ಅಲ್ಲಿ ಚಂಡೀಶ್ವರನು ನಿರ್ಮಾಲ್ಯಕ್ಕೆ ಸ್ವಯಂ ಭಾಗಿಯಾಗಲಾರನು. ॥೩೦॥

ಮೇಲೆಹೇಳಿದ ಶಿವಲಿಂಗಗಳಲ್ಲದೆ ಇತರ ಶಿವಾಲಯದಲ್ಲಿ ನಿವೇದಿತವಾದ ನಿರ್ಮಾಲ್ಯಶೇಷವನ್ನು ಅಷ್ಟಾಗಿ ಸ್ವೀಕರಿಸಬಾರದು. ಒಂದುವೇಳೆ ತೆಗೆದುಕೊಳ್ಳುವುದಾದರೆ ಅದನ್ನು ತೊಳೆದು ಸ್ವೀಕರಿಸಬೇಕು. ಮೃತ ಮತ್ತು ಜಾತಾಶೌಚ

ನ ಗ್ರಾಹ್ಯಂ ಜಲಮನ್ನಭೋಜ್ಯಮಪಿ ನೋ ವಿಪ್ರೈಃ ಶಿವಾರ್ಚಾಂ ವಿನಾ
ತ್ಯಕ್ತ್ವಾ ಚಾಂತ್ಯಜಯೋನಿಮೇತಿ ನರಕೇ ಸಂಘುಕ್ಷಿತೋಽಸೌ ಮೃತಃ ।
ಯಸ್ತ್ವೇಕಾಹಮಪಿ ಪ್ರದೋಷಸಮಯೇ ಸ್ವಂ ಸ್ನಾಪಯಿತ್ವಾಶಿವಂ
ಪೂಜಾಂ ಚಾಪಿ ವಿಧಾಯ ತದ್ದ್ವಿಗುಣಿತಾಂ ತತ್ಪಾಪಮುಕ್ತೋ ಭವೇತ್ ॥೩೨॥

ಸ್ತ್ರೀಶೂದ್ರಾರ್ಚನಮೇತದೇವ ಗಿರಿಜೇ ಮೃದ್ಧಾತುಲಿಂಗೇ ಸದಾ
ಬಿಲ್ವಾದ್ಯೈಃ ಸತತಂ ನಮೋಽಂತನಿಹಿತೈಃ ಪಂಚಾಕ್ಷರೈಃ ಕೇವಲಂ ।
ಅನ್ಯೇ ಸಂಕರಜಾತಯೋಽಪ್ಯಗಸುತೇ ಮಲ್ಲಿಂಗಲೋಕೋತ್ಸವೇ
ಮದ್ಧಾಮ್ನಾದಿವಿಲೋಕನೇನ ನಿಲಯಂ ತೇ ಪ್ರಾಪ್ನುವಂತೇ ಮಮ ॥೩೩॥

---

ಸಮಯಗಳಲ್ಲಿ ಶಿವಲಿಂಗದ ಸಾಕ್ಷಾತ್ ಸಂಬಂಧವನ್ನು ಬಿಟ್ಟು ದೂರದಿಂದಲೇ ಬಿಲ್ವದಳಗಳಿಂದ ಶಂಕರನನ್ನು ಆರಾಧಿಸಬೇಕು. ಯಾರು ಹೀಗೆ ಮನಸಾ ಧ್ಯಾನ ಮಾಡುವರೋ ಅವರು ಶಿವನ ನಿತ್ಯಪೂಜೆಮಾಡಿದಂತೆಯೇ ಆಗುವುದು. ಆದರಿಂದ ನಿಯಮವೂ ಪಾಲಿಸಲ್ಪಟ್ಟದ್ದಾಗಿ ಶಿವನೂ ಸಂತುಷ್ಟನಾಗುವನು. ಅಂತಹವರಿಗೆ ಶಿವಪೂಜಾಲೋಪಪ್ರಾಯಶ್ಚಿತ್ತವು ಒದಗುವುದಿಲ್ಲ. ॥೩೧॥

ನಿಷ್ಠರಾದ ಬ್ರಾಹ್ಮಣರು ಶಿವಪೂಜೆಮಾಡದೆ ಒಂದು ದಿನವೂ ಅನ್ನ, ನೀರು, ಭಕ್ಷ್ಯಭೋಜ್ಯಾದಿಗಳನ್ನು ತೆಗೆದುಕೊಳ್ಳಬಾರದು. ಒಂದುವೇಳೆ ಹಾಗೆ ಪೂಜೆಯನ್ನು ತ್ಯಜಿಸಿ ಊಟಮಾಡುವವನು ಚಂಡಲಜನ್ಮದವನೆನಿಸಿ ಮೃತನಾದನಂತರ ನರಕದಲ್ಲಿ ಬಿದ್ದು ನರಳುವನು. ಪ್ರದೋಷಕಾಲದಲ್ಲಿ ಒಂದುದಿನವಾದರೂ ಶಿವಲಿಂಗಾಭಿಷೇಕಾರ್ಚನಾದಿಗಳನ್ನು ನಡೆಸಿ ಶಿವಪ್ರೀತಿಯನ್ನು ಸಂಪಾದಿಸಿದವನು ಇದಕ್ಕೆರಡರಷ್ಟು ಪಾಪವಿದ್ದರೂ ಆಪಾತಕಗಳಿಂದ ಅನಾಯಾಸವಾಗಿ ಮುಕ್ತನಾಗುವನು. ॥೩೨॥

ಪರ್ವತರಾಜಪುತ್ರಿಯೇ ಕೇಳು, ಲೋಕದಲ್ಲಿ ಹೆಂಗಸರು ಮತ್ತು ಶೂದ್ರರಿಗೆ ಮಣ್ಣು ಮತ್ತು ಲೋಹಗಳಿಂದ ರಚಿತವಾದ ಶಿವಲಿಂಗಗಳಲ್ಲಿಯೇ ಯಾವಾಗಲೂ ಬಿಲ್ವದಳಾದಿಗಳಿಂದ ಪೂಜೆಯು ವಿಹಿತವಾಗಿದೆ. ಇವರು ಯಾವಾಗಲೂ 'ಶಿವಾಯ ನಮಃ' ಎಂಬ ನಮಶ್ಶಬ್ದಾಂತವಾದ ಪಂಚಾಕ್ಷರಮಂತ್ರಗಳಿಂದಲೇ ಪೂಜೆಮಾಡಬೇಕು. ಇತರ ಸಂಕರಜಾತಿಯವರಾದರೋ ನನ್ನ ಶಿವಲಿಂಗದರ್ಶನ, ಉತ್ಸವಾವಲೋಕನ ಮತ್ತು ಕ್ಷೇತ್ರಸಂದರ್ಶನಗಳಿಂದಲೇ ನನ್ನ ಲೋಕವನ್ನು ಪಡೆಯುವರು. ಅವರಿಗೆ ಅದೇ ನಿತ್ಯಪೂಜಾಫಲವನ್ನು ಒದಗಿಸಿಕೊಡುವುದು. ॥೩೩॥

ಚ ಕ್ರಾಂಕಗ್ರಾವಸಾವರ್ತ್ಯಾರ್ಚನಮುಗತನಯೇ ಏಕಪೀಠೇ ಸ್ಥಿರಂ ಮೇ
ತಸ್ಯೈವಾಶುಚಿಪೂಜನಂ ಕಿಲ ಭವೇತ್ಪಾಪೌಘದಂ ಕೇವಲಂ ।
ಏಕಂ ಮೇ ಶಿವಲಿಂಗಮೇವ ನಿಯತಂ ಸಂಪೂಜ್ಯ ಮುಕ್ತೋ ಭವೇ-
ದ್ಬಿಲ್ವೈಃಕೋಮಲಪಲ್ಲವೈರಹರಹೋ ಭಸ್ಮಾಕ್ಷಧೃಕ್ಛಾಂಕರಃ ॥೩೪॥

ಭಸ್ಮತ್ರಿಪುಂಡ್ರರಹಿತೋ ಮಮ ಲಿಂಗಪೂಜಾಂ
ಕೃತ್ವಾಪ್ಯಘೋರನರಕಂ ಸ ಶಿವೇ ಪ್ರಯಾತಿ ।
ರುದ್ರಾಕ್ಷಭೂಷಣವಿವರ್ಜಿತಸರ್ವಕಾಯ-
ಸ್ತತ್ಪೂಜನಂ ಮಮ ಶಿವೇ ಪ್ರಿಯಕೃನ್ನ ಚೈವ ॥೩೫॥

ಯಸ್ತೂರ್ಧ್ವಪುಂಡ್ರಕಲಿತಾಧಮಫಾಲದೇಶಃ
ಸಂಪೂಜಯನ್ಮಮ ವರಂ ಶಿವಲಿಂಗಮೀಶೇ ।
ಸೋಽಂಧಂತಮೋ ಹಿ ನರಕಂ ಪ್ರಸಭಂ ಪ್ರಯಾತಿ
ತತ್ಪೂಜನಂ ಸುಕೃತಮಪ್ಯಕೃತಂ ಸದಾಸ್ಯಾತ್ ॥೩೬॥

---

ಎಲೌ ಪಾರ್ವತಿಯೆ, ಒಂದೇ ಪೀಠದಲ್ಲಿ ಚಕ್ರಚಿಹ್ನಿತವಾದ ಸಾಲಗ್ರಾಮವನ್ನು ಇರಿಸಿ ನನ್ನ ಲಿಂಗದೊಡನೆ ಪೂಜೆಮಾಡುವುದರಿಂದ ಕೇವಲ ಪಾಪರಾಶಿ ಸಂಪಾದನೆಯಾಗುವುದೆಂದು ತಿಳಿ; ನಿಜವಾಗಿ ನನ್ನ ಶಿವಲಿಂಗವೊಂದಕ್ಕೇ ಭಸ್ಮ ರುದ್ರಾಕ್ಷಗಳನ್ನಲಂಕರಿಸಿ ಶೈವನು ಕೋಮಲವಾದ ಬಿಲ್ವದಳ ಮತ್ತು ಹೂಗಳಿಂದ ಅನವರತವೂ ಪೂಜಿಸಿ ಮುಕ್ತನಾಗುವನು. ಆದ್ದರಿಂದ ಶಿವಲಿಂಗದ ಜೊತೆಯಲ್ಲಿ ಮತ್ತಾವ ದೇವತೆಗಳ ಬಿಂಬಗಳನ್ನಾಗಲಿ ಇಟ್ಟು ಪೂಜಿಸಬಾರದು. ॥೩೪॥

ಭಸ್ಮತ್ರಿಪುಂಡ್ರಗಳನ್ನು ಧರಿಸದೇ ನನ್ನ ಶಿವಲಿಂಗಪೂಜೆಮಾಡಿದರೂ ಅವನು ಘೋರನರಕವನ್ನೈದುವನು. ಯಾವನ ದೇಹವು ರುದ್ರಾಕ್ಷ ಮತ್ತು ಭಸ್ಮಧಾರಣೆಯಿಂದ ಅಲಂಕೃತವಾಗಿರುವುದಿಲ್ಲವೋ, ಅಂತಹವನು ಪೂರ್ಣ ಅವಯುವವುಳ್ಳವನಾದರೂ, ಅವನು ಮಾಡುವ ಪೂಜೆಯು ಎಂದಿಗೂ ನನಗೆ ಹಿತವಾಗಲಾರದು. ಆದ್ದರಿಂದ ಶಿವಾರಾಧನೆಯಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ಭಸ್ಮರುದ್ರಾಕ್ಷಿಗಳಿಗೆ ಹೆಚ್ಚಾದ ಪ್ರಾಶಸ್ತ್ಯವನ್ನು ಕೊಡಬೇಕು. ॥೩೫॥

ಯಾವನು ಊರ್ಧ್ವಪುಂಡ್ರಾಲಂಕೃತವಾದ ತನ್ನ ಅಪವಿತ್ರವಾದ ಹಣೆಯಿಂದ ಕೂಡಿ ನನ್ನ ಶ್ರೇಷ್ಠವಾದ ಶಿವಲಿಂಗವನ್ನು ಪೂಜೆಮಾಡುವನೋ ಅವನು ಕೂಡಲೇ

ಯಜ್ಞಾದಿದೀಕ್ಷಾನಿಯಮೇಷು ಲಿಂಗಂ-
ಸಂಪೂಜನಂ ಪೂರ್ವತ ಏವ ಕಾರ್ಯಂ ।
ಯಾವಚ್ಚ ತತ್ಕಾಲಸಮಾಪ್ತಿಮಾನಂ
ಚಾಕೃಷ್ಯ ಪೂಜಾಂ ರಚಯೇತ ಲಿಂಗೇ ॥೩೭॥

ಸತ್ರೇಷು ಲಿಂಗಂ ಚ ಸದೈವ ಪೂಜಯೇ-
ದುದ್ಧೂಲ್ಯ ದೇಹಂ ಭಸಿತತ್ರಿಪುಂಡ್ರೈಃ ।
ರುದ್ರಾಕ್ಷವಕ್ಷೋಽಪಿ ಭವೇತ ನಿತ್ಯಂ
ತ್ರ್ಯಕ್ಷಾರ್ಚನಾಧುಕ್ಷಿತಪಾತಕೌಘಃ ॥೩೮॥

ನಷ್ಟೇ ಭಿನ್ನೇ ಶ್ಲಥೇವಾ ಮಮ ಜನಿಮವರಂ ಸಾಜ್ಯದಗ್ಧಂ ತಥಾಪ್ಸು
ತಸ್ಯೈವಾಕೃತಿಮಾದದೀತ ನಿಯತಂ ಸಂಧೀತ ಚೇತ್ಸಂಧಿಕೃತ್ ।
ಲಿಂಗಂ ಪ್ರೋಕ್ಷಣಸಂಸ್ಕೃತಂ ಪುನರುಮೇ ಕುರ್ವೀತ ಸಂಪೂಜಯೇತ್ ॥೩೯॥

---

ಗಾಢಾಂಧಕಾರಮಯವಾದ ನರಕವನ್ನೈದುವನು. ಅವನು ಎಷ್ಟು ಚೆನ್ನಾಗಿ ವಿಧಿವತ್ತಾಗಿ ಪೂಜಿಸಿದರೂ ಆದು ವ್ಯರ್ಥವಾದಂತೆಯೇ ಸರಿ. ॥೩೬॥

ಯಜ್ಞಯಾಗಾದಿ ದೀಕ್ಷಾನಿಯಮಗಳಲ್ಲಿ ಶಿವಲಿಂಗಾರ್ಚನೆಯನ್ನು ಎಲ್ಲಕ್ಕೂ ಮುಂದಾಗಿಯೇ ಮಾಡಬೇಕು. ಆ ದೀಕ್ಷಾಕಾಲವು ಮುಗಿಯುವವರೆಗೂ ಎಷ್ಟು ದಿನಗಳಾಗುವುವೋ ಅಷ್ಟನ್ನು ಆಕರ್ಷಣೆಮಾಡಿಕೊಂಡು ಮೊದಲೇ ಶಿವಲಿಂಗಾರ್ಚನೆಮಾಡಬೇಕು. ॥೩೭॥

ಭಸ್ಮವನ್ನು ದೇಹಕ್ಕೆಲ್ಲಾ ಉದ್ಧೂಳನಮಾಡಿಕೊಂಡು ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಾಲಂಕೃತ ವಕ್ಷಸ್ಸುಳ್ಳವನಾಗಿ ನಿತ್ಯವೂ ಶಿವಾರ್ಚನೆಯಿಂದ ನಾಶವಾದ ಪಾಪರಾಶಿಯುಳ್ಳ ಯಜಮಾನನು ಯಾಗಗಳಲ್ಲಿ ಯಾವಾಗಲೂ ಶಿವಲಿಂಗವನ್ನು ಪೂಜೆಮಾಡಲೇಬೇಕು. ಇದೂ ಒಂದು ಆ ಯಾಗದ ಅಂಗವೆಂದೇ ಆತನು ಭಾವಿಸಿರಬೇಕು. ॥೩೮॥

ಉಮೆ! ನನ್ನ ಜನ್ಮಭೂಮಿಯೆನಿಸಿದ ಶಿವಲಿಂಗವು, ನಾಶವಾಗಿ, ಭಿನ್ನವಾಗಿ, ಅಥವಾ ಶಿಥಿಲವಾಗಿದ್ದರೆ ಅಥವಾ ಬಿರಿದು ಹೋಗಿದ್ದರೆ, ಅದನ್ನು ಬಿಸಿಯಾದ ತುಪ್ಪದ ಸಹಾಯದಿಂದಲೋ ಅಥವಾ ನೀರಿನ ಸಹಾಯದಿಂದಲೋ ಅದನ್ನೇ ತೆಗೆದುಕೊಂಡು ಪುನಃ ಸಂಧಾನಮಾಡಿ, ಪ್ರೋಕ್ಷಣಾದಿ ಸಂಸ್ಕಾರಗಳನ್ನೆಸಗಿ ಪುನಃ

ಶೂದ್ರಪ್ರತಿಷ್ಠಿತಶಿಲಾಶಿವಲಿಂಗಮೀಶೇ
ದೃಷ್ಟಂ ಯದಿ ಕ್ಷಿತಿಸುರೈಃ ಕೃತಪುಣ್ಯನಾಶಃ ।
ತದ್ಬಾಣಲಿಂಗಸಹಿತಂ ಯದಿ ಶೂದ್ರಲಿಂಗಂ
ಸ್ಯಾದೇವ ಪುಣ್ಯಫಲದಂ ಶಿವದರ್ಶನೇನ ॥೪೦॥

ಪಾಷಂಡಶೂದ್ರಪತಿತಾಧಮನೀಚದುಷ್ಟ
ಚಂಡಾಲಪುಲ್ಕಸಜನೈರ್ಯದಿ ಸ್ಪೃಷ್ಟಲಿಂಗಂ ।
ದೈವಂ ತಥಾರ್ಷಮನುಜೈಶ್ಚ ಸ್ವಯಂಭುಲಿಂಗಂ
ಸಂಪ್ರೋಕ್ಷಿತಂ ಭವತಿ ವೈಸ್ಥಿರಜಂ ಚರಂ ವಾ ॥೪೧॥

ಪತ್ರಂ ತ್ರಿನೇತ್ರಪ್ರಿಯಮೇವ ಬಿಲ್ವ-
ಮಪಾತ್ರಮಪ್ಯದ್ರಿಸುತೇ ಸುಪಾತ್ರಂ ।
ಕರೋತಿ ಮೇ ಲಿಂಗಸಮರ್ಚನಾಸು
ಶುಷ್ಕಂ ತಥಾ ಪರ್ಯುಷಿತಂ ಪವಿತ್ರಂ ॥೪೨॥

---

ಅದನ್ನೇ ಪೂಜೆಮಾಡಬಹುದು. ಅಲ್ಪಸ್ವಲ್ಪವಿಕಾರವಾದ ಶಿವಲಿಂಗವು ಎಂದಿಗೂ ಪೂಜಾದುಷ್ಟವೆನಿಸಲಾರದು. ॥೩೯॥

ಭೂಮಿಯಲ್ಲಿ ಶೂದ್ರನಿಂದ ಪ್ರತಿಷ್ಠಿತವಾದ ಶಿಲಾಪ್ರತಿಮೆ ಅಥವಾ ಶಿವಲಿಂಗವನ್ನು ಬ್ರಾಹ್ಮಣರು ದರ್ಶನಮಾಡಿದ್ದಾದರೆ, ಅವರುಮಾಡಿದ ಪುಣ್ಯವೆಲ್ಲಾನಾಶವಾಗುವುದು. ಆದೇ ಶೂದ್ರಲಿಂಗವು ಬಾಣಲಿಂಗಚಿಹ್ನಿತವಾಗಿದ್ದರೆ ಅಂತಹ ಶಿವದರ್ಶನದಿಂದ ವಿಪ್ರನಿಗೆ ವಿಶೇಷ ಪುಣ್ಯಫಲವುಂಟಾಗುತ್ತದೆ. ಆದ್ದರಿಂದ ಬಾಣಲಿಂಗಕ್ಕೆಮಾತ್ರ ಎಂದಿಗೂ ಜಾತಿವ್ಯವಸ್ಥೆಯಿರುವುದಿಲ್ಲ. ಅದು ಸರ್ವದಾ ಪವಿತ್ರವಾದದ್ದೇ. ॥೪೦॥

ಪಾಷಂಡರು, ಶೂದ್ರರು, ಪತಿತರು, ಅಧಮರು, ನೀಚರು, ದುಷ್ಟರಾದ ಚಂಡಾಲರು, ಪುಲ್ಕಸರು (ಚಂಡಾಲಭೇದ) ಇವರೇ ಮೊದಲಾದವರಿಂದ ಶಿವಲಿಂಗವು ಸ್ಪರ್ಶಮಾಡಲ್ಪಟ್ಟದ್ದಾದರೆ, ಅದು ದೈವ, ಋಷಿ ಮತ್ತು ಮನುಜರಿಂದ ನಿರ್ಮಿತವಾದ ಅಥವಾ ಸ್ವಯಮುದ್ಭವವಾದ ಲಿಂಗವೇ ಆಗಿ ಸ್ಥಾವರವಾಗಲೀ ಜಂಗಮವಾಗಲೀ ಅದಕ್ಕೆ ಸಂಪ್ರೋಕ್ಷಣ ಸಂಸ್ಕಾರವನ್ನು ಮಾಡಿ ಶುದ್ಧಿಗೊಳಿಸಬೇಕು. ॥೪೧॥

ಗಿರಿರಾಜಕುಮಾರಿಯೇ, ಮುಕ್ಕಣ್ಣನಾದ ಶಿವನಿಗೆ ಪ್ರಿಯವಾದ ಬಿಲ್ವಪತ್ರೆಯು ಲಿಂಗಾರ್ಚನೆಯ ಕಾಲದಲ್ಲಿ ಅದು ಒಣಗಿರಲಿ ಅಥವಾ ಬಾಡಿರಲಿ, ಪವಿತ್ರವೆನಿಸಿದ

ನೈತತ್ತ್ಯಾಜ್ಯಮುಮೇ ವದಂತಿ ನಿಗಮಾಃ ಸ್ಯಾಚ್ಛೂದ್ರಕೇಣಾಹೃತಂ
ವಿಧ್ಯಾಪ್ಯವಿಧಾನತೋಽಹೃತಮುಮೇ.ಶ್ರೀಪತ್ರಮೇವಂ ಪ್ರಿಯಂ ।
ಶುಷ್ಕಂ ಪರ್ಯುಷಿತಂ ಚ ಕೀಟಸಹಿತಂ ನ ತ್ಯಾಜ್ಯಮೇವಂ ಶಿವೇ
ತತ್ರಾಲಬ್ಧಮಹೋ ತಥಾನ್ಯಕುಸುಮಂ ಬಿಲ್ವಾಖ್ಯಯಾ ಖ್ಯಾಪಯೇತ್ ॥೪೩॥

ರತ್ನಸ್ವರ್ಣವಿನಿರ್ಮಿತೋರುಕುಸುಮಂ ಯಾದೃಕ್ಷ್ವ ಸಂಕ್ಷಾಳಿತಂ
ಪೂರ್ವೇದ್ಯುಃ ಪ್ರತಿಪಾದಿತಂ ಗಿರಿಸುತೇ ಸಮ್ಯಕ್ಪುನಃ ಪೂಜಯೇತ್ ।
ತದ್ವತ್ಕ್ಷಾಳಿತಮೇವ ಬಿಲ್ವಮಗಜೇ ಸಂಕ್ಷಾಳಿತಂ ಪೂಜಯೇ-
ತ್ತತ್ರಾಲಾಭವಿಧೌ ಶಿವಾರ್ಚಕಜನೈರ್ನಿರ್ಮಾಲ್ಯತಾ ನೋಚಿತಾ ॥೪೪॥

ಉತ್ತುಂಗಂ ಶಾಂಗಲಿಂಗಂ ಯದಿ ಸಿತಭಸಿತೋದ್ಧೂಳಿತಾಂಗಾಕ್ಷಸಂಗಂ
ಪಾಪಾಸಾರಮಹೋತ್ತಮಾಂಗಸುಮಹಾಭಂಗಾಯ ತತ್ಪಾರ್ವತಿ ।

---

ಅದನ್ನು ಪೂಜೆಮಾಡುವವನನ್ನು ಅವನು ಅಪಾತ್ರನಾದರೂ ಅದು ಯೋಗ್ಯನನ್ನಾಗಿ ಮಾಡುವುದು. ಶಿವಲಿಂಗಪೂಜೆಗೆ ಬಿಲ್ವಾರ್ಚನೆಯು ಅಷ್ಟುಮುಖ್ಯವಾದದ್ದು. ॥೪೨॥

ಎಲೌ ಉಮೆಯೇ! 'ಶೂದ್ರನಿಂದ ತರಲ್ಪಟ್ಟ ಬಿಲ್ವದಳಗಳನ್ನು ತ್ಯಜಿಸಬಾರದೆಂದು ವೇದಗಳು ಹೇಳುತ್ತಿರುವುವು. ವಿಧಿಪೂರ್ವಕವಾಗಿತಂದ ಬಿಲ್ವದಳವು ನಿಜವಾಗಿಯೂ ಶಿವನಿಗೆ ಪ್ರಿಯಕರವೆಂದು ತಿಳಿ; ಆದರೆ ಅದು ಒಣಗಿರಲಿ, ಬಳಲಿರಲಿ, ಕೀಟಯುಕ್ತವಾಗಿರಲಿ ಅದನ್ನು ಎಂದಿಗೂ ತಿರಸ್ಕರಿಸಬಾರದು. ಒಂದುವೇಳೆ ಶಿವಾರಾಧನೆಗೆ ಅದು ದೊರೆಯದಿದ್ದಲ್ಲಿ ದೊರೆತ ಹೂಗಳನ್ನೇ ಬಿಲ್ವಸಂಜ್ಞೆಯಿಂದ ಭಾವಿಸಿ ಪೂಜೆಮಾಡಬೇಕು. ॥೪೩॥

ಪಾರ್ವತಿಯೇ ಕೇಳು, ಹಿಂದಿನ ದಿನ ಧರಿಸಿದ್ದ ರತ್ನ, ಅಥವಾ ಚಿನ್ನ, ಇವುಗಳಿಂದ ನಿರ್ಮಿತವಾಗಿರುವ ಪುಷ್ಪಗಳನ್ನು ಹೇಗೆ ತೊಳೆದು ಪುನಃ ಅದನ್ನೇ ಧರಿಸುವರೋ ಅದರಂತೆಯೇ ಬಿಲ್ವವನ್ನೂ ಪುನಃ ಪುನಃ ಚೆನ್ನಾಗಿ ತೊಳೆದು ಮತ್ತೆ ಮತ್ತೆ ಪೂಜೆ ಮಾಡಬಹುದು. ಒಂದುವೇಳೆ ಹೊಸಬಿಲ್ವವು ದೊರೆಯದೆ ಇದ್ದರೆ ಶಿವಪೂಜಕ ಜನಗಳಿಗೆ ಹಳೆಯಬಿಲ್ವಪತ್ರೆಯು ಮಾತ್ರ ಎಂದಿಗೂ ನಿರ್ಮಾಲ್ಯವೆನಿಸಲಾರದು. ॥೪೪॥

ಒಂದು ಎತ್ತರವಾದ ಶಿವಲಿಂಗವನ್ನು ಶುಭ್ರವಾದ ಭಸ್ಮಭೂಷಿತವನ್ನಾಗಿಯೂ ರುದ್ರಾಕ್ಷಮಾಲಾಲಂಕೃತವನ್ನಾಗಿಯೂ ಮಾಡಿ ಯಾವ ಮನುಜನು ಭಕ್ತಿಯಿಂದ ನೋಡುತ್ತಾನೆಯೋ, ಅವನು ಅಪಾರವಾದ ಮಹಾಪಾತಕಗಳನ್ನು

ವೀತೇ ದೋಷಪ್ರದೋಷೇ ಪ್ರಥಿತಜನುರ್ಜರಾನಾಥಸಂಸ್ಥಾಸು ಶಶ್ವ-
ತ್ಸಂವೀಕ್ಷ್ಯ ನಿಯಮೇನ ಶಾಂಭವವರೋ ಭೂಯಾದ್ಗಣೇಶೋ ಮಮ ॥೪೫॥

ಪ್ರದೋಷಕಾಲೇ ಶಶಿಖಂಡಚೂಡ
ಲಿಂಗಂ ವಿಲೋಕ್ಯ ವೃಷಗೇ ಸುವಿಷಾಣಯೋಗೇ ।
ತದಂಡವಿಸ್ಪೃಷ್ಟಕರೋ ನತೋ ವರಃ
ಸ ಸರ್ವತೀರ್ಥಾಪ್ಲುತವಿಗ್ರಹೋ ಭವೇತ್ ॥೪೬॥

ಹರಿಂ ನ ವೀಕ್ಷೇತ ಕದಾಚಿದೀಶೇ
ಪ್ರದೋಷಕಾಲೇ ಯದಿ ದರ್ಶಕಶ್ಚೇತ್ ।
ಪ್ರಜ್ಞಾಯುರೂಪಾದ್ವಿರಹೀ ಭವೇತ
ಪುಣ್ಯಸ್ಯ ನಾಶಃ ಪ್ರಭವೇತ ತಸ್ಯ ॥೪೭॥

---

ಕ್ಷಣಕಾಲದಲ್ಲಿ ನಾಶಮಾಡಿಕೊಳ್ಳುವನು ಮತ್ತು ಆತನು ಪುಣ್ಯಾತ್ಮನೂ ಎನಿಸುವನು. ಸಕಲ ದೋಷಗಳೂ ತೊಲಗಿರುವ ಪ್ರದೋಷಸಮಯಗಳಲ್ಲಿ ಪ್ರಖ್ಯಾತವಾದ ಜನನ ಮರಣ ರೂಪ ಅವಸ್ಥೆಗಳುಳ್ಳ ಸಂಸಾರಮಾರ್ಗದಲ್ಲಿ ಪದೇ ಪದೇ ಬಳಲುತ್ತಿರುವ ಶಾಂಭವವರ್ಯನು ನಿಯಮದಿಂದ ನನ್ನ ಲಿಂಗವನ್ನು ಸಂದರ್ಶನಮಾಡಿದರೆ ಅವನು ನನ್ನ ಗಣಗಳಿಗೆ ಒಡೆಯನಾಗುವನು. ॥೪೫॥

ಶಿವಲಿಂಗದ ಮುಂದಿರುವ ವೃಷಭದ ದಿವ್ಯವಾದ ಕೊಂಬುಗಳ ಮಧ್ಯದಲ್ಲಿ ಶಿವಲಿಂಗವನ್ನು ನೋಡುತ್ತಾ, ವೃಷಭದ ಅಂಡಪ್ರದೇಶವನ್ನು ಸ್ಪರ್ಶಮಾಡುತ್ತಾ ಪ್ರದೋಷ ವೇಳೆಯಲ್ಲಿ, ಚಂದ್ರಖಂಡಸನ್ನು ಶಿರಸ್ಸಿನಲ್ಲಿ ಧರಿಸಿದ ಶಿವಲಿಂಗವನ್ನು ಭಕ್ತಿಯಿಂದ ದರ್ಶನಮಾಡಬೇಕು. ಶಿವದರ್ಶನ ಕಾಲದಲ್ಲಿ ವೃಷಭದ ಅಂಡವನ್ನೂ ವಿಶಾಣಪ್ರದೇಶವನ್ನೂ ಸ್ಪರ್ಶಮಾಡಿದ ಕೈಯುಳ್ಳ ಮಾನವನು ಲೋಕದಲ್ಲಿ ಶ್ರೇಷ್ಠನೆನಿಸುವನು. ಅವನು ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪವಿತ್ರ ದೇಹವುಳ್ಳವನಂತಾಗುವನು. ಇದರಲ್ಲಿ ಸಂಶಯವಿಲ್ಲ. ॥೪೬॥

ಈಶ್ವರಿಯೇ, ಪ್ರದೋಷಕಾಲಗಳಲ್ಲಿ ಯಾವಾಗಲೂ ಶಿವದರ್ಶನಮಾಡ ಬೇಕೇ ಹೊರತು ವಿಷ್ಣುವನ್ನು ನೋಡಬಾರದು. ಹಾಗೆ ಪ್ರಮಾದದಿಂದ ವಿಷ್ಣು ದರ್ಶನ ಮಾಡುವನಾದರೆ ಅವನು ಪ್ರಜ್ಞೆ, ಆಯುಸ್ಸು ಮತ್ತು ಸೌಂದರ್ಯಗಳಿಂದ ಹೀನನಾಗುವನಲ್ಲದೇ ಅವನು ಸಂಪಾದಿಸಿದ ಪುಣ್ಯವೂ ನಾಶವಾಗುವುದು. ॥೪೭॥

ಮಂದಪ್ರದೋಷೇಷು ವಿಶೇಷದರ್ಶಿನೋ
ವಿಭೂತಿಭೂಷಾ ಸಹ ಯೋಷವರ್ಗಾಃ ।
ಸಾನಂದಮಿಂದುಶಕಲಾಭರಣೋತ್ತಮಾಂಗ-
ಲಿಂಗಾರ್ಚನೇ ನರಸುರಾಶ್ಚ ನಯಂತಿ ಕಾಲಂ ॥೪೮॥

ಋಣತ್ರಯಾಪಾಕರಣಾಯ ಶಸ್ತಂ
ಪ್ರದೋಷಕಾಲೀನಶಿವಾರ್ಚನಂ ಮೇ ।
ತದ್ದುಃಖದಾರಿದ್ರ್ಯವಿನಾಶಕಂ ಶಿವೇ
ನಿತ್ಯಂ ಚ ನೈಮಿತ್ತಿಕಕಾಮದಂ ಚ ॥೪೯॥

ವಾರವ್ರತೇ ದ್ವಿಜಗಣೇಷು ನಿಷಿದ್ಧಿತೇಽಪಿ
ನ ತ್ಯಾಜ್ಯಮೇತದಗಜೇ ಕಿಲ ಸೋಮವಾರಃ
ಸರ್ವೇಷು ಮಾಸಗಣನೇಷು ವಿಶಿಷ್ಟಮಾಸೌ
ಯಚ್ಛ್ರಾವಣೋರ್ಜಪರಮೌ ಹಿ ಸುಪುಣ್ಯಭಾಕ್ಸ್ಯಾತ್ ॥೫೦॥

---

ಶನಿಪ್ರದೋಷದ ದಿನಗಳಲ್ಲಿ ವಿಭೂತ್ಯಾಭರಣಾಲಂಕೃತರಾದ ಸ್ತ್ರೀಸಮೂಹವು ಶಿವಲಿಂಗವನ್ನು ವಿಶೇಷವಾಗಿ ಭಕ್ತಿಯಿಂದ ನೋಡಬೇಕು. ಆನಂದ ಪೂರ್ವಕವಾಗಿ ಚಂದ್ರಶಕಲಾಭರಣಭೂಷಿತವಾದ ಶಿವಲಿಂಗಾರ್ಚನೆಯಲ್ಲಿ ಯೋಗ್ಯರಾದ ಮನುಜರೂ ಮತ್ತು ದೇವತೆಗಳೂ ಯಾವಾಗಲೂ ಸಂತೋಷದಿಂದ ಕಾಲಕಳೆಯುವರು. ॥೪೮॥

ಪಾರ್ವತಿಯೇ, ಪ್ರದೋಷಕಾಲದಲ್ಲಿ ಮಾಡುವ ಶಿವನೆನಿಸಿದ ನನ್ನ ಪೂಜೆಯು ದೇವಋಣ, ಋಷಿಋಣ ಮತ್ತು ಪಿತೃಋಣಗಳೆಂಬ ಮೂರು ಋಣಗಳನ್ನೂ ಕಳೆದುಕೊಳ್ಳುವುದಕ್ಕೆ ಮೂಲಕಾರಣವಾಗುವುದು. ಅಲ್ಲದೇ ಆ ಪೂಜೆಯು ದುಃಖ ಮತ್ತು ಬಡತನಗಳನ್ನು ಹೋಗಲಾಡಿಸಿ ನಿತ್ಯ ಮತ್ತು ನೈಮಿತ್ತಿಕವಾದ ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ಇದರಲ್ಲಿ ಸಂಶಯವಿಲ್ಲ. ॥೪೯॥

ಬ್ರಾಹ್ಮಣಸಮಾಜದಲ್ಲಿ ವಾರವ್ರತಗಳು ನಿಷಿದ್ಧವಾಗಿದ್ದರೂ, ಎಲೌ ಪಾರ್ವತಿಯೇ, ಸೋಮವಾರ ವ್ರತವನ್ನು ಮಾತ್ರ ಬಿಡಬಾರದು. ಅದರಂತೆ ಮಾಸ ಸಂಬಂಧವಾದ ವ್ರತಗಳನ್ನು ಸರಿಯಾಗಿ ವಿಮರ್ಶೆಮಾಡುವುದಾದರೆ ಶ್ರಾವಣ ಮತ್ತು ಕಾರ್ತಿಕಮಾಸವ್ರತಗಳು ವಿಶೇಷ ಪುಣ್ಯಪ್ರದಗಳಾಗಿರುವುವು. ॥೫೦॥

ಸೋಮಾಮಾಸ್ಯಪಿನಕ್ತಭೋಜನರತೋ ಭಕ್ತೋಽಥ ಮುಕ್ತೋ ಭವೇ-
ದ್ಯುಕ್ತೋ ವಾಪ್ಯಘಸಂಚಯೇನ ಗಿರಿಜೇ ಸುವ್ಯಕ್ತಮೇವೋಚ್ಯತೇ ।
ಶಕ್ತಶ್ಚೇದುಪವಾಸಕರ್ಮಣಿ ಸದಾ ನೋ ಚೇದ್ದಿವಾಂತ್ಯಕ್ಷಣೇ
ಕ್ಷೀಣಾಘಃ ಕಿಲ ಶಂಕರಾರ್ಚನರತೋ ಭೂತ್ವೈವ ಮುಕ್ತೋ ಭವೇತ್ ॥೫೧॥

ಕಾಲಾಷ್ಟಮ್ಯಾಂ ನಿಶೀಥೇ ಶತಪಥಗದಿತೇ ಯಾಮಿನೀನಾಥಚೂಡ-
ಧ್ಯಾನಾನಂದೇನ ಲಿಂಗಾರ್ಚನವಿಧಿಧುರೋ ಮೂಢ ಏವ ಧ್ರುವಂ ಸಃ ।
ತಸ್ಯಾಂ ಪಂಚಾಸ್ಯಲಿಂಗೇ ಹೃದಿ ಭುವಿ ವಿಹಿತಂ ಪೂಜ್ಯ ಬಿಲ್ವೈಸ್ತಥಾಜ್ಯೈಃ
ಹುತ್ವಾ ಮಾಮಗಕನ್ಯಕೇ ಶಿಖಿಮುಖೇ ಸಾಯುಜ್ಯಮಾಪ್ನೋತಿ ಮೇ ॥೫೨॥

ಚತುರ್ದಶ್ಯಾಮೀಶೇ ಶಶಿರಹಿತಪಕ್ಷಾಂತ್ಯದಿವಸೇ
ನಿಶೀಥವ್ಯಾಪಿನ್ಯಾಂ ಯದಿ ಯಜತಿ ಲಿಂಗಂ ಮಮ ಪರಂ ।

---

ಪಾರ್ವತಿಯೇ, ಸೋಮವಾರ ಅಮಾವಾಸ್ಯೆಯ ದಿನ ನಕ್ತವ್ರತದಿಂದ ರಾತ್ರಿ ಭೋಜನಮಾಡುವ ನನ್ನ ಭಕ್ತನು, ಅನೇಕ ಪಾಪಸಮೂಹಗಳಿಂದ ಯುಕ್ತನಾಗಿದ್ದರೂ ಶಾಶ್ವತವಾದ ಮುಕ್ತಿಪಡೆಯುವನೆಂದು ಸ್ಪಷ್ಟವಾಗಿ ಹೇಳಬಹುದು. ಶಂಕರಪೂಜಾನಿರತನಾದವನು ಶಕ್ತಿಯಿದ್ದರೆ ಉಪವಾಸಮಾಡಬೇಕು. ಇಲ್ಲದಿದ್ದಲ್ಲಿ ಹಗಲಿನ ಕೊನೆಯಭಾಗದಲ್ಲಿ ಉಪಹಾರಮಾಡಬಹುದು. ಹೀಗೆ ಮಾಡುವವನು ಪಾಪರಾಶಿಗಳಿಂದ ಮುಕ್ತನಾಗಿ ಇಹದಲ್ಲಿ ಸಕಲಭೋಗಗಳನ್ನೂ ಪಡೆದು ಪರದಲ್ಲಿ ಶಾಶ್ವತವಾದ ಮುಕ್ತಿಯನ್ನು ಪಡೆಯುವನು. ॥೫೧॥

ಇದೇರೀತಿ ಶತರುದ್ರೀಯಪ್ರೋಕ್ತವಾದ ಮಂತ್ರಗಳಿಂದ ಕೃಷ್ಣಾಷ್ಟಮಿಯ ಅರ್ಧರಾತ್ರಿಯಲ್ಲಿ ಚಂದ್ರಚೂಡನ ಧ್ಯಾನವನ್ನು ಮಾತ್ರ ಆನಂದದಿಂದ ಮಾಡುತ್ತಾ ಲಿಂಗಪೂಜಾನಿರತನಾಗಿರುವವನು ನಿಜವಾಗಿ ಮೂಢನೇ ಎನಿಸುವನು. ಏಕೆಂದರೆ ಪಂಚಮುಖಲಿಂಗವನ್ನು ಹೃದಯದಲ್ಲಿ ಧ್ಯಾನಮಾಡುತ್ತಾ ಸರ್ವವ್ಯಾಪಕನಾಗಿ ಸರ್ವತ್ರನೆಲೆಸಿದ ಆ ಶಿವನನ್ನು ಬಿಲ್ವದಳಗಳಿಂದ ಪೂಜಿಸಿ, ಅನಂತರ ತುಪ್ಪದಿಂದ ಅಗ್ನಿಯಲ್ಲಿ ಹೋಮಮಾಡುವವನು ನಿಜವಾಗಿ ನನ್ನ ಸಾಯುಜ್ಯವನ್ನು ಪಡೆಯುವನು. ॥೫೨॥

ಕೃಷ್ಣಪಕ್ಷದ ಚತುರ್ದಶಿಯ ದಿವಸ ಅಥವಾ (ಚಂದ್ರನಿಲ್ಲದ ಪಕ್ಷದಕೊನೆಯಲ್ಲಿ) ಅಂದರೆ ಅಮಾವಾಸ್ಯೆಯ ಅರ್ಧರಾತ್ರಿಯಸಮಯದಲ್ಲಿ ನನ್ನ ಶ್ರೇಷ್ಠವಾದ

ಪ್ರಶಸ್ತಂ ಹಸ್ತಾಭ್ಯಾಂ ಪರಿದಳಿತಬಿಲ್ವಚ್ಛದವರೈ-
ರಪಾಮಾರ್ಗೈರ್ಮಾರ್ಗಂ ಸಕಲಯತಿ ಮುಕ್ತ್ಯರ್ಚನಪರಃ ॥೫೩॥

ಕ್ಷೀರೇಣೈವ ಶತಾಪರಾಧಮಗಜೇ ದಧ್ನಾ ಸಹಸ್ರಂ ಘೃತೈಃ
ಸಾಹಸ್ರಂ ದಶಕಂ ತಥೈವಮಧುನಾ ತಚ್ಚಾಯುತಂ ವಾಸಿತೈಃ ।
ದತ್ವಾ ಮಲ್ಲಿಂಗಮೌಳೌ ಫಲಕುಲಜರಸೈಃ ಸರ್ವಮೀಶೇ ಸಹೇಯಂ
ತಸ್ಮೈ ತದ್ವಿತರಾಮಿ ಭಕ್ತಿಪರಮಾನಂದಂ ಮುಹುಃ ಶಾಂಭವಂ ॥೫೪॥

ಶಸ್ತಂ ಪ್ರಾಙ್ಮುಖಲಿಂಗತೋಽಪಿ ಗಿರಿಜೇ ಪಶ್ಚಾನ್ಮುಖಂ ಮೋಕ್ಷದಂ
ವಾಯವ್ಯಾಂ ಕಿಲ ಚಂದ್ರಭಾಗಕಲಿತಂ ತಂ ಪ್ರಾಙ್ಮುಖಾಗ್ನೇಯಕೇ ।
ತಸ್ಯಾರ್ಚಾಂ ರಚಯೇತ ಪ್ರಾಙ್ಮುಖಗತೇ ಪಶ್ಚಾನ್ಮುಖೇ ವಾ ಶಿವೇ
ತತ್ಪಾನ್ಮುಖ್ಯಮುಪಾಸ್ಯ ಘೋರವದನಂ ನೈವಾರ್ಚಯೇದ್ವೈಗೃಹೀ ॥೫೫॥

---

ಶಿವಲಿಂಗಕ್ಕೆ ತನ್ನ ಕೈಯ್ಯಿಂದಲೇ ಕೊಯ್ಯಲ್ಪಟ್ಟ ಉತ್ತಮವಾದ ಬಿಲ್ವದಳ ಮತ್ತು ಉತ್ತರಣೆಯಪತ್ರಗಳಿಂದ ಪೂಜೆಮಾಡುವವನು ಸಂಸಾರಿಗಳಿಗೆ ದೊರಕುವ ಅಪಾ ಮಾರ್ಗವನ್ನು ದೂರಮಾಡಿ ಶಾಶ್ವತವಾದ ಮುಕ್ತಿಮಾರ್ಗವನ್ನು ಪಡೆಯುವನು. ॥೫೩॥

ಪರ್ವತರಾಜಕುಮಾರಿಯೇ, ನನ್ನ ಶಿವಲಿಂಗಮೌಳಿಯಲ್ಲಿ ಹಾಲಿನಿಂದ ಅಭಿಷೇಕಮಾಡುವವನ ನೂರು ತಪ್ಪುಗಳನ್ನು ನಾನು ಕ್ಷಮಿಸುವೆನು. ಮೊಸರಿನಿಂದ ಅಭಿಷೇಕಮಾಡುವವನ ಸಾವಿರ ಅಪರಾಧಗಳನ್ನೂ, ತುಪ್ಪದಿಂದ ಅಭಿಷೇಕಮಾಡು ವವನ ಹತ್ತುಸಾವಿರ ಅಪರಾಧಗಳನ್ನೂ, ಜೇನುತುಪ್ಪದಿಂದ ಅಭಿಷೇಕಮಾಡುವವನ ಲಕ್ಷಾಪರಾಧಗಳನ್ನೂ, ಸಕ್ಕರೆಯಿಂದ ಅಭಿಷೇಕಮಾಡುವವನ ಹತ್ತುಲಕ್ಷ ತಪ್ಪು ಗಳನ್ನೂ, ಶ್ರೇಷ್ಠವಾದ ಹಣ್ಣಿನರಸದಿಂದ ಅಭಿಷೇಕಮಾಡುವವನ ಸಕಲ ತಪ್ಪು ಗಳನ್ನೂ ನಾನು ಸಹಿಸಿಕೊಂಡು ಅವನನ್ನು ಕ್ಷಮಿಸುವೆನು. ದೇವಿ! ಅಲ್ಲದೇ ಅವನಿಗೆ ಪರಮಾನಂದದಾಯಕವಾದ ಭಕ್ತಿಯನ್ನೂ, ಶಿವಪದವಿಯನ್ನೂ ಶೀಘ್ರ ವಾಗಿ ಕರುಣಿಸುವೆನು. ॥೫೪॥

ಪಾರ್ವತಿಯೇ, ಪೂರ್ವಾಭಿಮುಖವಾದ ಶಿವಲಿಂಗಕ್ಕಿಂತಲೂ ಪಶ್ಚಿಮಾಭಿ ಮುಖವಾಗಿ ಪ್ರತಿಷ್ಠಿತವಾಗಿರುವ ಶಿವಲಿಂಗವು ಶ್ರೇಷ್ಠವೂ ಮೋಕ್ಷಪ್ರದವೂ ಆಗಿರು ವುದು; ಈ ಪಶ್ಚಿಮಮುಖದ ಶಿವಲಿಂಗದಲ್ಲಿ ವಾಯುವ್ಯ ದಿಕ್ಕಿಗೆ ಚಂದ್ರಕಲೆ

ಪ್ರದಕ್ಷಿಣಪದಂ ಯದಿ ಕ್ಷಿಪತಿ ಪಾಪಸಂಕ್ಷೇಪಕೃ-
ನ್ನಮನ್ಮಯಿ ಸದಾಕ್ರಮೇದ್ವಿಮಲಮುಕ್ತಿಮಾರ್ಗಂ ಶಿವೇ ।
ಲುಠನ್ಯದಿ ಪಠನ್ಮನುಂ ಶಿವಧನುಂ ವಿಮುಕ್ತಾಖ್ಯಕೇ
ಸ ಏವ ಕಿಲ ಲುಂಠಕೋ ಭವತಿ ನೀಲಕಂಠಾಲಯೇ ॥೫೬॥

ಸವ್ಯಾಸವ್ಯಪ್ರಕ್ರಮೋ ವರ್ಣಿನಾಂ ವೈ
ಕರ್ಮಂದಿನಾಮುಭಯಮಾರ್ಗಮಿದಂ ಪ್ರಶಸ್ತಂ ।
ಸಾಷ್ಟಾಂಗಾ ವೈ ಪ್ರಣತಿಃ ಸಾ ಪ್ರಶಸ್ತಾ
ಶಂಭೋರೇಷಾ ಪ್ರಕ್ರಿಯಾ ವೈ ಮನೂಕ್ತಾ ॥೫೭॥

---

ಬಂದಂತಾಗುವುದು. ಪ್ರಾಙ್ಮುಖವಾದ ಶಿವಲಿಂಗಕ್ಕೆ ಆಗ್ನೇಯದಿಕ್ಕಿನಲ್ಲಿ ಚಂದ್ರ ಖಂಡವು ಯುಕ್ತವಾಗಿರುವುದು. ಪೂರ್ವ ಅಥವಾ ಪಶ್ಚಿಮಾಭಿಮುಖವಾದ ಶಿವಲಿಂಗ ಗಳಿಗೆ ಚಂದ್ರಖಂಡಯುಕ್ತವಾದ ದಿಕ್ಕುಗಳಲ್ಲಿಯೇ ಪೂಜೆಮಾಡಬೇಕು. ಪ್ರಸನ್ನ ಮುಖವಾದ ಇವುಗಳನ್ನು ಬಿಟ್ಟು ಭಯಂಕರವಾದ ಮುಖಗಳುಳ್ಳ ಶಿವಲಿಂಗಗಳನ್ನೂ ಗೃಹಸ್ಥನು ಪೂಜೆಮಾಡಬಾರದು. ॥೫೫॥

ಅವಿಮುಕ್ತಕ್ಷೇತ್ರದಲ್ಲಿ ಶಿವಾಲಯವನ್ನು ಪ್ರದಕ್ಷಿಣೆಮಾಡಲು ಹೆಜ್ಜೆಯಿಡು ವವನು ತನ್ನ ಪಾಪವನ್ನು ಕಡಿಮೆಮಾಡಿಕೊಳ್ಳುವನು. ಅಲ್ಲಿ ನನಗೆ ಭಕ್ತಿಯಿಂದ ನಮಸ್ಕಾರ ಮಾಡುವವನು ಯಾವಾಗಲೂ ಪವಿತ್ರಮಾರ್ಗವನ್ನು ಆಕ್ರಮಿಸುವನು. ಶಿವಮಂತ್ರಗಳನ್ನುಚ್ಚರಿಸುತ್ತಾ ಅಲ್ಲಿ ದಿಂಡುರುಳು ಉರುಳುವವನು ಮೋಕ್ಷಸುಖ ದಲ್ಲಿಯೂ ಹೊರಳುವನು. ಅಂತಹವನೇ ಕೊನೆಯಲ್ಲಿ ನೀಲಕಂಠನೆನಿಸಿದ ಮಹೇಶನ (ನನ್ನ) ಕೈಲಾಸದಲ್ಲಿ ಸಂತೋಷದಿಂದ ವಿಹರಿಸುವವನು. ॥೫೬॥

ಬ್ರಹ್ಮಚಾರಿಗಳಿಗೆ ಮಾತ್ರ ಎಡಬಲರೂಪವಾದ ಪ್ರದಕ್ಷಿಣವಿಧಿಯು ಪ್ರಶಸ್ತವು. ಸಂನ್ಯಾಸಿಗಳಿಗೆ ಈ ಎರಡು ಮಾರ್ಗವೂ ಪ್ರಶಸ್ತವೇ ಆಗಿದೆ ಆದರೆ ಸರ್ವರಿಗೂ ಸಾಷ್ಟಾಂಗ ನಮಸ್ಕಾರವು ವಿಶೇಷ ಪ್ರಶಸ್ತವೆನಿಸಿರುವುದು. ಶಂಭುವಿಗೆ ಯಾವಾಗಲೂ ಮಂತ್ರಪೂರ್ವಕವಾಗಿ ನಡೆಸುವ ಸಾಷ್ಟಾಂಗ ನಮಸ್ಕಾರವೇ ಶ್ರೇಷ್ಠ ವೆಂದು ಹೇಳಲ್ಪಟ್ಟಿದೆ. ॥೫೭॥

ಗೃಹಸ್ಥೋ ವಾ ವನಸ್ಥೋ ವಾ ಪ್ರಕೃತಿವರದಾಕ್ಷಿಣ್ಯಮಗಜೇ
ವೃಷಂ ಚಂಡಂ ಸೂತ್ರಂ ಪುನರಪಿವೃಷಾದ್ಯಂ ಪ್ರಭವತಿ ।
ನ ಶಸ್ತಂ ತತ್ತ್ವೈಕಂ ಶತಮವರಸಾಹಸ್ರಪರಮಂ
ತ್ರಯಂ ವಾ ನತ್ವೈಕಂ ಯದಿ ಝುಟಿತಿ ನಿತ್ಯೋಂಜಲಿಪರಃ ॥೫೮॥

ಯದಿ ಶಿವವೃಷಭಾಂತರಾಭಿಗಚ್ಛೇ
ದ್ಗುರುಮೀಶೇಪ್ರಣತೋ ಹಿ ಚಂಡಿಕೇಶಂ ।
ಬಲಮಾಯುಃ ಪಶವಃ ಸ್ತ್ರಿಯಶ್ಚ ಪುತ್ರಾ
ವಿನಶೇಯುಸ್ತ್ವರಯಾ ಶಿವೇಽಹಿತಸ್ಯ ॥೫೯॥

---

ಪಾರ್ವತಿಯೇ ಕೇಳು, ಶಿವದರ್ಶನಕಾಲದಲ್ಲಿ ಗೃಹಸ್ಥನಾಗಲಿ, ವಾನಪ್ರಸ್ಥ ನಾಗಲಿ ಒಂದು ನಿಯಮವನ್ನು ಅನುಸರಿಸಿ ಶಿವಲಿಂಗವನ್ನು ದರ್ಶನಮಾಡಬೇಕು. ಎಲ್ಲಕ್ಕೂ ಮೊದಲು ವೃಷಭ, ಅನಂತರ ಚಂಡೀಶ್ವರ, ಆಮೇಲೆ ಸೋಮಸೂತ್ರ ಇವುಗಳನ್ನು ದರ್ಶನಮಾಡಿದ ಮೇಲೆ ಶಿವಲಿಂಗವನ್ನು ನೋಡಬೇಕು. ಹೀಗೆ ಶಿವದರ್ಶನಾನಂತರ ಪುನಃ ವೃಷಶೃಂಗಾಂತರ್ಗತವಾಗಿ ಕಾಣುವ ಶಿವಲಿಂಗ, ವೃಷಭ, ಚಂಡೀಶ್ವರ, ಸೋಮಸೂತ್ರ ಇವುಗಳನ್ನು ದರ್ಶನಮಾಡಿದರೆ ಶಿವದರ್ಶನವು ಸಾಂಗವಾದಂತಾಗುವುದು. ಇವುಗಳಲ್ಲಿ ಯಾವುದಾದರೊಂದನ್ನು ಮಾತ್ರ ನೋಡಿ ಉಳಿದವುಗಳನ್ನು ದರ್ಶನಮಾಡದಿರುವುದು ಪ್ರಶಸ್ತವಾದುದಲ್ಲ. ವೃಷಭ, ಚಂಡೀಶ್ವರ, ಸೋಮಸೂತ್ರ ಈ ಮೂರು ದೇವತಾದರ್ಶವದಿಂದಲೇ ಶಿವದರ್ಶನಕ್ಕೆ ಸಾರ್ಥಕತೆಯು ದೊರೆಯಬೇಕು. ॥೫೮॥

ಶಿವನನ್ನು ವೃಷಭನ ಕೊಂಬುಗಳ ಮಧ್ಯದಿಂದ ನೋಡಿ ನಮಸ್ಕರಿಸುವಾಗ ಅಥವಾ ಚಂಡೀಶ್ವರ, ದಕ್ಷಿಣಾಮೂರ್ತಿ ಈ ದೇವತೆಗಳ ದರ್ಶನಕಾಲದಲ್ಲಿಯೂ, ಯಾವಕಾರಣದಿಂದಲೂ ಶಿವಲಿಂಗ ಮತ್ತು ವೃಷಭ ಇವುಗಳ ಮಧ್ಯೆ ಹಾದು ಹೋಗ ಕೂಡದು. ಹಾಗೆ ತಿಳಿದೋ ತಿಳಿಯದೆಯೋ ಹೋಗುವುದಾದರೆ ಅತನ, ಬಲ, ಆಯುಸ್ಸು, ಪಶುಗಳು, ಸ್ತ್ರೀಯರು, ಪುತ್ರರೂ ಇವರೆಲ್ಲರೂ ಶೀಘ್ರವಾಗಿ ನಾಶ ವಾಗುವರು ಮತ್ತು ಶಿವದ್ರೋಹವೆಸಗಿದಂತಾಗುವುದು. ॥೫೯॥

ಪಂಚಬ್ರಹ್ಮೈರ್ಗೃಹಸ್ಥೋ ಮನು ಜನಿಮುವರಂ ತ್ರ್ಯಂಬಕೈರ್ಬ್ರಹ್ಮಚಾರೀ
ವನ್ಯೋ ಧನ್ಯಂ ಚ ರುದ್ರಂ ಜಪತಿ ಮನುವರಂ ಪೂಜಯನ್ಲಿಂಗಮೈಶಂ ।
ಕ್ಷತ್ರೋಽಪೀಶ್ವರಲಿಂಗಪೂಜನವಿಧೌ ನೀಲಾದಿರುದ್ರಂ ಜಪೇ-
ದ್ವೈಶ್ಯಃ ಪಾವನಪಾವಮಾನಮನುಭಿಃ ಪಂಚಾಕ್ಷರೈಃ ಪೂಜಯೇತ್ ॥೬೦॥

ಸಂನ್ಯಾಸೀ ಪ್ರಣವೇನ ಲಿಂಗಮಗಜೇ ಸಂಪೂಜಯೇತ್ಪಾವನೈಃ
ಪತ್ರೈರ್ಭೂಮಿನಿಪಾತಿತೈಸ್ತರುವರಾಚ್ಛ್ರೀರುದ್ರಪಂಚಾಕ್ಷರೈಃ ।
ತಂತ್ರೈಸ್ತ್ರ್ಯಂಬಕಮಂತ್ರಿತೈಃ ಸುಭಸಿತೈಃ ಸಂಪೂಜಯೇನ್ಮುಕ್ತಿಭಾ-
ಗ್ಭಸ್ಮಾಕ್ಷಾದಿವಿಧಾರಿತಾಂ ಸಹಿತನುರ್ಜ್ಞಾನಂ ಮಮ ಪ್ರಾಪ್ನುಯಾತ್ ॥೬೧॥

---

ಗೃಹಸ್ಥನಾದವನು, 'ಸದ್ಯೋಜಾತಾದಿ' ಪಂಚಬ್ರಹ್ಮಮಂತ್ರಗಳಿಂದ ಶಿವಲಿಂಗವನ್ನು ಪೂಜಿಸಬೇಕು. ಬ್ರಹ್ಮಚಾರಿಯು 'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಪೂಜಿಸಬೇಕು. ವಾನಪ್ರಸ್ಥಾಶ್ರಮಿಯು ಶಿವಲಿಂಗಪೂಜೆ ಮಾಡುವಾಗ ಅತ್ಯಂತ ಶ್ರೇಷ್ಠವೆನಿಸಿ ಶ್ರೀರುದ್ರಮಂತ್ರವನ್ನು ಜಪಿಸಬೇಕು. ಕ್ಷತ್ರಿಯನೂ ಸಹ ಈಶ್ವರನ ಲಿಂಗಪೂಜಾವಿಧಿಯಲ್ಲಿ "ನೀಲಗ್ರೀವಾಃ ಶಿತಿಕಂಠಾಃ" ಎಂಬ ಮಂತ್ರವನ್ನು ಜಪಮಾಡಬೇಕು. ವೈಶ್ಯನು ಪವಿತ್ರಗಳಾದ ಪಂಚಾಕ್ಷರಮಂತ್ರಗಳಿಂದಲೂ ಪವಮಾನ ಮಂತ್ರಗಳಿಂದಲೂ ಪೂಜೆಮಾಡಬಹುದು. ॥೬೦॥

ಸಂನ್ಯಾಸಿಯು ಪಾವನವಾದ ಪ್ರಣವಮಂತ್ರದಿಂದ ಶಿವಲಿಂಗವನ್ನು ಪೂಜೆ ಮಾಡಬೇಕು. ಮತ್ತು ಅದೇ ಶಿವಲಿಂಗಕ್ಕೆ ನೆಲದ ಮೇಲೆ ಬೀಳಿಸಿರುವ ಉತ್ತಮವಾದ ಬಿಲ್ವವೃಕ್ಷದ ಪತ್ರೆಗಳಿಂದ ಶ್ರೀರುದ್ರಮಂತ್ರ ಮತ್ತು ಪಂಚಾಕ್ಷರಗಳನ್ನು ಜಪಿಸುತ್ತಾ ಪೂಜಿಸಬೇಕು. ತಂತ್ರವಿಧಿಗಳಿಂದಲೂ ತ್ರ್ಯಂಬಕ ಮಂತ್ರದಿಂದ ಪರಿಶುದ್ಧವಾದ ಒಳ್ಳೆಯ ಭಸ್ಮಗಳಿಂದಲೂ ಶಿವಲಿಂಗಪೂಜೆ ಮಾಡುವವನು ನಿಜವಾಗಿ ಮುಕ್ತಿಭಾಗಿಯಾಗುವನು. ಹೀಗೆ ಅರ್ಚನೆಮಾಡುವವನು ಭಸ್ಮರುದ್ರಾಕ್ಷಾದಿಗಳಿಂದಲಂಕೃತನಾದ ನನ್ನ ದಿವ್ಯಜ್ಞಾನವನ್ನೂ ತನ್ಮೂಲಕ ಶಿವಸಾಯುಜ್ಯವನ್ನೂ ಪಡೆಯುವನು. ॥೬೧॥

ನದ್ಯಾಂ ಗೋಷ್ಠೇ ಗೃಹೇ ವಾ ಶಿಖರಶಿಖರಿಣೇ ಮಂತ್ರಿತೇ ಶುಭ್ರಪೂತೇ
ಪುಣ್ಯೇ ದೇಶೇ ವನೇ ವಾ (ಬಿಲ್ವಸ್ಯಾಧೋ ಶಿವಾಗ್ರೇ)ಮಮಯದಿ ವಿಮಲಂ
ಲಿಂಗಮರ್ಚನ್ ಪ್ರಶಸ್ತಃ ॥೬೨॥

ತತ್ರೈಕಾಧಿಕಮುತ್ತರೋತ್ತರಗುಣಂ ಪ್ರಾಹುಃ ಶಿವಾಚಾರ್ಯವಿಧೌ
ಗಂಗಾಯಾಂ ಯದಿ ಲಿಂಗಪೂಜನವಿಧಿಃ ಸ್ಯಾತ್ಕೋಟಿಗುಣ್ಯಃ ಶಿವೇ ।
ಧಾತುಭ್ಯೋ ರತ್ನಲಿಂಗಂ ಕಿಲ ವಿಮಲಮಹೋ ಪೂಜಯೇದ್ಬಾಣಲಿಂಗೇ
ತಸ್ಮಾದಪ್ಯಗಜೇ ರಸೇಂದ್ರಕೃತೇ ಸ್ಯಾತ್ಕೋಟಿಲಿಂಗಾರ್ಚನಂ ॥೬೩॥

ಪುಣ್ಯಂ ಚಾಪಿ ದಿಶೇತ ಮುಕ್ತಿಮಪಿ ವೈ ನಾತೋಽಧಿಕಂ ಕೀರ್ತ್ಯತೇ
ಶುದ್ಧಂ ಚೇದ್ಯದಿ ಮುಕ್ತಿದಾಯಕಮತೋ ನೋಚೇತ್ಸುಖಾಯುಃ ಪದಂ
॥೬೪॥

---

ನದಿ, ಕೊಟ್ಟಿಗೆ, ಮನೆ, ಬೆಟ್ಟದ ಶಿಖರದ ತುದಿ, ಮಂತ್ರದಿಂದ ಪರಿಪೂತ ವಾದ ಪ್ರದೇಶ, ಕಾಡು, ಬಿಲ್ವವೃಕ್ಷದ ಬುಡ ಮತ್ತು ಶಿವನ ಮುಂದೆ, ನನ್ನ ಪವಿತ್ರ ವಾದ ಶಿವಲಿಂಗವನ್ನು ಮಂತ್ರಪೂರ್ವಕವಾದ ಭಸ್ಮದಿಂದ ಪೂಜಿಸುವವನು ಶ್ರೇಷ್ಠನಾಗುವನು. ॥೬೨॥

ಪಾರ್ವತಿಯೇ ಕೇಳು, ಶಿವಪೂಜಾವಿಧಿಯಲ್ಲಿ ಉತ್ತರೋತ್ತರವಾಗಿ ಒಂದೊಂದು ರೀತಿಯ ಪೂಜೆಯಲ್ಲಿ ಸ್ಥಾನ, ಕ್ರಮ ಮುಂತಾದುವುಗಳಿಂದ ಗುಣವು ಅಧಿಕವಾಗುವು ದೆಂದು ಹೇಳುವರು. ಗಂಗಾನದಿಯ ತೀರದಲ್ಲಿ ಶಿವಪೂಜೆ ಮಾಡಿದರೆ ಕೋಟಿಪಾಲು ಗುಣವು ಮಿಗಿಲಾಗುವುದು. ಲೋಹಲಿಂಗಕ್ಕಿಂತಲೂ ರತ್ನಲಿಂಗವು ವಿಶೇಷ ಫಲಪ್ರದ ವಾದುದು. ಅಂತಹ ರತ್ನದ ಲಿಂಗಕ್ಕಿಂತಲೂ ಬಾಣಲಿಂಗವು ಮತ್ತೂ ವಿಶೇಷ ಫಲಪ್ರದವಾದುದು. ಅದಕ್ಕಿಂತಲೂ ಪಾದರಸದ ಲಿಂಗದಲ್ಲಿನ ಶಿವಪೂಜೆಯು ಕೋಟಿಲಿಂಗಪೂಜಾಫಲವನ್ನು ಏಕಕಾಲದಲ್ಲಿ ಕೊಡುವುದು. ॥೬೩॥

ಇಂತಹ ಪರಮಪವಿತ್ರವಾದ ಈ ಪಾದರಸಲಿಂಗಾರ್ಚನೆಯು ಕೇವಲ ಸುಕೃತವನ್ನುಂಟುಮಾಡುವುದಲ್ಲದೇ ಶಾಶ್ವತವಾದ ಮುಕ್ತಿಯನ್ನೂ ದೊರಕಿಸುವುದು. ಇದಕ್ಕಿಂತ ಇದರ ಪ್ರಭಾವವನ್ನು ಮತ್ತೇನು ಹೇಳಲಿ ? ಶಿವಲಿಂಗವು ಪರಿಶುದ್ಧವಾಗಿ ವಿಧಿವತ್ತಾಗಿದ್ದರೆ ಅದರ ಪೂಜೆಯು ಮೋಕ್ಷವನ್ನೇ ಕೊಡುವುದರಿಂದ ಇತರ ಸುಖ, ಆಯುಸ್ಸು ಇವುಗಳನ್ನುಂಟುಮಾಡುವುದೆಂದು ಪುನಃ ಹೇಳಲೇಬೇಕಾಗಿಲ್ಲ. ॥೬೪॥

ಸಂತಪ್ತಾಧಮಚಕ್ರಚಿಹ್ನಿತತನುಂ ನೇಕ್ಷೇತ ಪೂಜಾವಿಧೌ
ಶ್ವಾನಂ ವಾಂತ್ಯಜಸೂತಕಂ ಮಲವತೀಂ ದೃಷ್ಟ್ವಾತ್ತನುತಿಷ್ಠೇಚ್ಛಿವೇ ।
ಸ್ನಾತ್ವಾ ಚೇಲಯುತಂ ಪುನಶ್ಚ ಭಸಿತೈರುದ್ಧೂಳ್ಯ ಗಾತ್ರಂ ತದಾ
ದ್ವಿತ್ರಂ ವಾ ಶತರುದ್ರಜಾಪನಶುಚಿರ್ದೇವಂ ಯಜೇದ್ವೈ ತತಃ ॥೬೫॥

ತದ್ದೃಷ್ಟಿದುಷ್ಟಂ ನ ವಿಶಿಷ್ಟಮೀಶೇ
ನೈವೇದ್ಯಮಾಹುಃ ಫಲಪುಷ್ಪದಾನಂ ।
ಕನಿಷ್ಠಜನ್ಮಾಪಿ ಭವೇತ ತೇನ
ದತ್ತೈರ್ವ ಕುಷ್ಠೀ ಪ್ರಭವೇತ ಕಷ್ಟೀ ॥೬೬॥

ನಿರ್ಮಾಲ್ಯಲಂಘನಮುಮೇ ಬಲಪುಷ್ಟಿಹಾನಿ-
ಸ್ತೀರ್ಥಂ ಶಿವಸ್ಯ ನ ಯಥೇಷ್ಟನಿಯೋಜಕಂ ಸ್ಯಾತ್ ।
ದಾನಂ ಚ ಶಸ್ತಮುಗಜೇ ಕಿಲ ಶಾಂಭವೇಷು
ನಾನ್ಯೈರಶೈವಜನುಭಿರ್ವಿನಿಯೋಜ್ಯಮಾಹುಃ ॥೬೭॥

---

ಶಿವಲಿಂಗಾರ್ಚನೆ ಮಾಡುವಾಗ ಚೆನ್ನಾಗಿ ಕಾದ ಚಕ್ರದಿಂದ ಚಿಹ್ನಿತವಾದ ದೇಹವುಳ್ಳ ಮನುಷ್ಯನನ್ನೂ ನಾಯಿ, ಅಂತ್ಯಜ (ಚಂಡಾಲ) ಸೂತಕವುಳ್ಳವರು, ಬಹಿಷ್ಠೆಯಾದ ಸ್ತ್ರೀ ಇವರನ್ನೂ ನೋಡಬಾರದು. ಒಂದುವೇಳೆ ಅಕಸ್ಮಾತ್ತಾಗಿ ದರ್ಶನವಾದರೆ ಆಗ ಸಚೇಲಸ್ನಾನಮಾಡಿ ಪುನಃ ಭಸ್ಮದಿಂದ ದೇಹವನ್ನೆಲ್ಲಾ ಲೇಪನಮಾಡಿಕೊಂಡು, ಎರಡುಮೂರುಬಾರಿ ರುದ್ರಜಪಮಾಡಿ ತರುವಾಯ ಶುಚಿಯಾಗಿ ಪುನಃ ಮಹಾದೇವನನ್ನು ಪೂಜೆಮಾಡಬೇಕು. ॥೬೫॥

ಅಂತಹ ಚಕ್ರಾಂಕಿತರೇ ಮೊದಲಾದವರ ದೃಷ್ಟಿಯಿಂದ ದೋಷಭೂಯಿಷ್ಠವಾದ ನೈವೇದ್ಯವನ್ನೂ ಅಥವಾ ಫಲಪುಷ್ಪಾದಿಗಳನ್ನೂ ಶಿವಲಿಂಗಕ್ಕೆ ಸಮರ್ಪಿಸಬಾರದು. ಹಾಗೆ ಅರಿಯದೆ ಅವರಿಂದ ಕೊಡಲ್ಪಟ್ಟ ನೈವೇದ್ಯವೇ ಮೊದಲಾದವುಗಳನ್ನು ಶಿವಪೂಜೆಗೆ ಉಪಯೋಗಿಸುವವನು ನೀಚಜನ್ಮವನ್ನುಪಡೆದು ಕುಷ್ಠರೋಗ ಹೊಂದಿ ವಿಶೇಷ ಕಷ್ಟಕ್ಕೆಗುರಿಯಾಗುವನು. ॥೬೬॥

ಉಮೆಯೆ, ಶಿವನ ನಿರ್ಮಾಲ್ಯವನ್ನು ಸ್ವೀಕರಿಸದೇ ಬಿಟ್ಟವನಿಗೆ ಬಲ ಮತ್ತು ಪುಷ್ಟಿಯು ನಷ್ಟವಾಗುವುದು. ಶಿವನ ತೀರ್ಥವನ್ನು ತನ್ನ ಇಚ್ಛೆಬಂದಂತೆ ಉಪಯೋಗಿಸಬಾರದು. ಶೈವರಿಗೆ ಕೊಡುವ ಶಿವತೀರ್ಥ ಮತ್ತು ದಾನವೇ ಶ್ರೇಷ್ಠ

ಶಿವಾಭಿಷೇಕಾಂಬು ಪಿಬೇದಘಘ್ನಂ
ಬಿಂದುತ್ರಯಂ ವೈ ಶಿವಪೂಜನಾಂತೇ ।
ನಾತೋಽಧಿಕಂ ಗ್ರಾಹ್ಯಮುಮೇ ಮಲೋದರೇ
ಸ್ಯಾನ್ಮೂತ್ರರೂಪಂ ಯದಿ ಪಾಪಕೃದ್ಭವೇತ್ ॥೬೮॥

ವಂಧ್ಯಂ ಕುರ್ಯಾನ್ನ ದಿವಸಮುಮೇ ವಿಂಧ್ಯಗರ್ವಾಪಹಂತೃ-
ಧ್ಯೇಯಂ ಯತ್ತತ್ಪದವರಮಹೋ ಪೂಜ್ಯ ಸಂಪೂರ್ಣಕಾಮಃ ।
ಲೋಕಾನೀಪ್ಸೇ ಸ ಶಿವಭಜನಾದ್ಭಾಜನಂ ಮುಕ್ತಯೇಽಸೌ
ಸರ್ವೇಷಾಂ ವೈ ವಿಧಿರಯಮುಮೇ ಗೋಪನೀಯೋ ಮಯೋಕ್ತಃ ॥೬೯॥

ಮುಕ್ತಂ ಯುದ್ಭಸಿತತ್ರಿಪುಂಡ್ರಕಲಿತಂ ವಿಶ್ವೇಶ್ವರೇ ಯನ್ನತಂ
ಹಸ್ತೌ ತೌ ಶಿವಲಿಂಗಪೂಜನರತೌ ಶಸ್ತೌ ಚ ಬಿಲ್ವಾರ್ಚಕೌ ।

---

ವೆನಿಸುವುದು. ಇತರ ಅಶೈವರಿಗೆ ಶಿವತೀರ್ಥವನ್ನಾಗಲಿ ಇತರ ಯಾವ ದಾನವನ್ನಾಗಲಿ ಕೊಡಬಾರದೆಂದು ಹೇಳುವರು. ॥೬೭॥

ಶಿವನಿಗೆ ಅಭಿಷೇಕಮಾಡಿದ ಮತ್ತು ಪಾಪನಾಶಕವಾದ ತೀರ್ಥವನ್ನು ಶಿವಪೂಜಾನಂತರ ಮೂರು ಬಿಂದುಗಳಷ್ಟು ಮಾತ್ರ ಕುಡಿಯಬೇಕು. ಅದಕ್ಕಿಂತಲೂ ಹೆಚ್ಚು ತೀರ್ಥವನ್ನು ತೆಗೆದುಕೊಳ್ಳಬಾರದು. ಹೆಚ್ಚುಕುಡಿದು ಮಲಬದ್ಧವಾದ ಈ ಉದರದಲ್ಲಿ ನಿಂತು ಅದು ಮಲಮೂತ್ರರೂಪವಾಗಿ ಪರಿಣಮಿಸಿದರೆ ಅದರಿಂದ ವಿಶೇಷಪಾಪವು ಸಂಭವಿಸುತ್ತದೆ. ॥೬೮॥

ಶಿವಪೂಜಾಧ್ಯಾನಗಳಿಲ್ಲದೇ ದಿವಸವನ್ನು ವ್ಯರ್ಥಮಾಡಬಾರದು; ವಿಂಧ್ಯಾಚಲದ ಗರ್ವವನ್ನು ಹೋಗಲಾಡಿಸಿದ ಅಗಸ್ತ್ಯಮುನಿಯ ಮುಖ್ಯಧ್ಯೇಯ ವಸ್ತುವಾಗಿರುವ ಶಿವನ ಪಾದಗಳೆರಡನ್ನೂ ಪೂಜಿಸಿದವನು ಸಂಪೂರ್ಣ ಮನೋರಥನಾಗುವನು. ಶಿವಭಜನೆಯಿಂದ ಬೇಕಾದ ಲೋಕಗಳನ್ನೂ ಹೊಂದಬಲ್ಲನು. ಅಲ್ಲದೆ ಅವನು ಮೋಕ್ಷಕ್ಕೂ ಭಾಗಿಯಾಗುವನು; ಪಾರ್ವತಿಯೇ, ಈ ಮಾತು ಎಲ್ಲರಿಗೂ ಅನ್ವಯಿಸುವುದು. ಒಟ್ಟಿನಲ್ಲಿ ನನ್ನಿಂದ ಹೇಳಲ್ಪಟ್ಟ ಈ ವಿಧಿಯು ತುಂಬಾ ರಹಸ್ಯವಾದುದೆಂದು ತಿಳಿ. ॥೬೯॥

ಭಸ್ಮತ್ರಿಪುಂಡ್ರಭೂಷಿತವಾಗಿ ಸಮಸ್ತ ಲೋಕರಕ್ಷಕನಾದ ವಿಶ್ವೇಶ್ವರನಿಗೆ ಬಗ್ಗಿ ನಮಸ್ಕಾರಮಾಡಿದ ಆ ತಲೆಯು ಶ್ರೇಷ್ಠವೆನಿಸುವುದು. ಶಿವಲಿಂಗಾರ್ಚನಾ

ನ್ಯಸ್ತಂ ಯಚ್ಛಿವಪಾದಪಂಕಜಲಸತ್ಪುಷ್ಪಾಂಬುಜಾಘ್ರೇಯಕಂ
ತನ್ನೇತ್ರೇ ಸಫಲೇ ತ್ರಿನೇತ್ರವಿಲಸಲ್ಲಿಂಗಾವಲೋಕೇನ ತೌ ॥೨೦॥

ತತ್ಪಾದೌ ಶಿವಲಿಂಗಧಾಮಗತಿದೌ ತತ್ಪ್ರಕ್ರಮೇಷೂದ್ಯತೌ
ಚಿತ್ತಂ ತಚ್ಛಿವಮೂರ್ತಿಚಿಂತನರತಂ ವಾಣೀ ಶಿವಾಖ್ಯಾಸ್ತುತೌ ।
ಶಸ್ತಂ ತಸ್ಯ ಸಮಸ್ತಭಾಗ್ಯಮಗಜೇ ಪಾಪಂ ವಿಶಸ್ತಂ ಭವೇತ್ ॥೨೧॥

ಧನ್ಯಾಸ್ತ ಏವ ಸಿತಭಸ್ಮಲಸತ್ತ್ರಿಪುಂಡ್ರಾಃ
ಮಾನ್ಯಾಸ್ತ ಏವ ಶಿವಲಿಂಗಸಮರ್ಚಕಾ ಮೇ ।
ಅನ್ಯೇ ಪುನರ್ಭುವಿ ಭರಾಯ ಭವಂತಿ ಜನ್ಯಾಃ
ವನ್ಯಾವನೀಪ್ರಭವಲೋಕಖರಾದಿಕಾನ್ಯಾಃ ॥೨೨॥

---

ಸಕ್ತವಾಗಿ ಬಿಲ್ವದಳಗಳಿಂದ ಶಿವನನ್ನು ಅರ್ಚಿಸುವ ಕೈಗಳೆರಡೂ ಪ್ರಶಸ್ತವೆನಿಸುವುವು. ಶಿವನ ಪಾದಕಮಲಗಳಲ್ಲಿ ಶೋಭಿಸುತ್ತಿರುವ ತಾವರೆಯೇ ಮೊದಲಾದ ಹೂವುಗಳ ಗಂಧವನ್ನು ವಾಸನೆ ನೋಡುವ ಮೂಗೇ ಶ್ರೇಷ್ಠವಾದುದು. ಮುಕ್ಕಣ್ಣನ ಉಜ್ವಲವಾದ ಶಿವಲಿಂಗವನ್ನು ದರ್ಶನಮಾಡುವುದರಿಂದಲೇ ನಿಜವಾಗಿಯೂ ಮಾನವನ ಎರಡು ಕಣ್ಣುಗಳೂ ಸಾರ್ಥಕವಾಗುವುವು. ॥೨೦॥

ಭಕ್ತಿಯಿಂದ ಶಿವಲಿಂಗಸ್ಥಾನವನ್ನು ಸೇರಿಸಿದ ಅಥವಾ ಅಲ್ಲಿಗೆ ಪ್ರಯಾಣ ಹೊರಟ ಮಾನವನ ಎರಡು ಕಾಲ್ಗಳೂ, ಶಿವಮೂರ್ತಿಯ ಧ್ಯಾನನಿರತವಾದ ಅವನ ಮನವೂ, ಶಿವನ ಮಹಿಮೆಯನ್ನು ಸ್ತುತಿಸುವುದರಲ್ಲಿ ಆಸಕ್ತವಾದ ಮಾತೂ ನಿಜವಾಗಿಯೂ ಪ್ರಶಸ್ತಗಳೆಂದು ತಿಳಿ. ದೇವಿ, (ನನ್ನಲ್ಲಿ) ಶಿವನಲ್ಲಿಟ್ಟ ಮನವುಳ್ಳವನ ಭಾಗ್ಯವೇ ಒಟ್ಟಿನಲ್ಲಿ ಪ್ರಶಸ್ತವಾದುದು. ಅಂತಹವನ ಪಾಪರಾಶಿಯೆಲ್ಲವೂ ಕ್ಷಣಕಾಲದಲ್ಲಿ ಕತ್ತರಿಸಿಹೋಗುವುದೆಂದು ತಿಳಿ. ಒಟ್ಟಿನಲ್ಲಿ ಶಿವಪೂಜಾಸಮಾರಂಭದಲ್ಲಿ ಭಾಗವಹಿಸಿದ ಮಾನವನ ಸಕಲ ಅವಯವಗಳೂ ಪವಿತ್ರಗಳೆನಿಸುವುವು. ॥೨೧॥

ಶುಭ್ರವಾದ ಭಸ್ಮತ್ರಿಪುಂಡ್ರಾಂಕಿತಲಲಾಟವುಳ್ಳವರೇ ಧನ್ಯರು ; ಶಿವಲಿಂಗಪೂಜಕರೇ ಮಾನ್ಯರು. ಶಿವಪೂಜಾವಿಮುಖರಾದ ಇತರರು ಕೇವಲ ಭೂಭಾರಕ್ಕೆ ಮಾತ್ರ ಕಾರಣರಾಗಿರುವರೆಂದು ತಿಳಿ. ಕಾಡುಭೂಮಿಯಲ್ಲಿ ಹುಟ್ಟಿದ ಜನಗಳೂ, ಕತ್ತೆಗಳೂ ಹೇಗೆ ಸಮಾಜದಲ್ಲಿ ಗಣನೆಗೆ ಬರುವುದಿಲ್ಲವೋ, ಅದರಂತೆ ಅವರೂ ಹಾಗೆಯೇ ಪ್ರಾಣಿವರ್ಗದಲ್ಲಿ ನಿಷ್ಪ್ರಯೋಜಕರೆಂದೇ ತಿಳಿಯಬೇಕು. ॥೨೨॥

ಯೋನ್ಯುಜ್ಝಿತಾ ಹಿ ಗಿರಿಜೇ ಪ್ರಭವಂತಿ ಶೂನ್ಯಾಃ ॥೭೩॥

ವಿಹಾಯ ಶಿವಪೂಜನಂ ಕಿಮಿತಿ ಕಾಯದುಃಖಾದಿಕೆ
ಶ್ರಮಾಶ್ರಮನಿಷೇವಣೈರ್ನಿಯಮಯೋಗಸಂಸೇವನೈಃ ।
ಅಪಾಯದಮಿದಂ ಶಿವೇ ವಿಮಲಮುಕ್ತಿಸಂದರ್ಶನೇ
ಉಪಾಯಮಿದಮೇವ ಯಚ್ಛಿವಕಥಾಸು ಸಕ್ತಂ ಮನಃ ॥೭೪॥

ಸುಗಮೋಽಯಂ ವಿಧಿರೇವ ಕೇವಲೋ
ನಿಗಮಾಂತೇಷು ನಿತಾಂತಶೋಽಪ್ಯಥೋಕ್ತಃ ।
(?)ಆಗಮಾದಧಿಕಪಾಪವರ್ಗಹರ್ತಾ
ಭಗನೇತ್ರಘ್ನಮುದೇ ಭವೇತ ಕರ್ತಾ
ಯದಾ ಯೋನಿವಕ್ತ್ರೋಜ್ಝಿತೋ ಜೀವಸಂಘ
ಸ್ತದೈವಾಶು ಕಾಲಾಸ್ಯಕೇ ಸಂಪತೇತ ।
ತದೇತಸ್ಯ ಸಂಮೋಚನೇ ಚೈಕಥನ್ಯಂ
ಮದನ್ಯಂ ನ ಮನ್ಯೇ ಧರಾಧೀಶಕನ್ಯೇ ॥೭೫॥

---

ಕೇವಲ ಯೋನಿಜನ್ಯರಾದ ಜನರು ಶೂನ್ಯಫಲರಾಗುತ್ತಾರೆ. ಶಿವಪೂಜೆಯನ್ನು ತ್ಯಜಿಸಿ, ಅತ್ಯಂತ ಶಾರೀರಕದುಃಖ ಮತ್ತು ದೇಹಶ್ರಮಾದಿಗಳನ್ನು ಕೊಡುವ ಇತರ ನಿಯಮಯೋಗಾದಿಗಳನ್ನು ಏತಕ್ಕಾಗಿ ಆಶ್ರಯಿಸಬೇಕು ? ಈ ಯೋಗನಿಯಮಾದಿಗಳೆಲ್ಲವೂ ಶರೀರಕ್ಕೆ ಅಪಾಯಕರವಾದದ್ದೆಂದು ತಿಳಿ. ನಿಜವಾದ ಸ್ಥಿರಮುಕ್ತಿಯನ್ನು ಗಳಿಸಬೇಕಾದರೆ ಶಿವಕಥಾಲಾಪಗಳಲ್ಲಿ ಮನಸ್ಸುಗೊಡುವುದೊಂದೇ ಮುಖ್ಯ ಉಪಾಯವೆಂಬುದಾಗಿ ತಿಳಿದುಕೊ. ॥೭೩-೭೪॥

ಸುಲಭವಾದ ಈ ವಿಧಿಯೇನೇ ವೇದಾಂತಗಳಲ್ಲಿ ವಿಶೇಷ ನಿಯಮಬದ್ಧವಾಗಿ ವಿಸ್ತೃತವಾಗಿ ಹೇಳಲ್ಪಟ್ಟಿರುವುದು. ವೈದಿಕಕರ್ಮಗಳೆಲ್ಲಕ್ಕಿಂತಲೂ ಹೆಚ್ಚಿನ ಪಾಪರಾಶಿಗಳನ್ನು ಹೋಗಲಾಡಿಸುವ ಈ ವಿಧಿಯನ್ನು ನಡೆಸುವವನು ಶಿವನ ಪ್ರೀತಿಗೆ ಪಾತ್ರನಾಗುತ್ತಾನೆ. ॥೭೫॥

ಪ್ರಪಂಚದಲ್ಲಿ ಜೀವರಾಶಿಗಳು ಯೋನಿಯಿಂದ ಹೊರಬಿದ್ದ ಮರುಕ್ಷಣದಲ್ಲಿಯೇ ಯಮನ ಬಾಯಿಗೆ ಬೀಳಲು ಸಿದ್ಧವಾಗುವುವು. ಹಾಗೆ ಜನ್ಮಾರಭ್ಯ ಸಂಭವಿಸುವ

ಆಯುರ್ವಾಯುಭಿಘಟ್ಟಿತಾಂಬುದಪತದ್ವಾಯುರ್ಯೂಕ್ಷವೃಕ್ಷಾಗ್ರಗ
ನ್ಯಾಲೋಲಾಧರವಕ್ತ್ರಪಲ್ಲವಗಲಲ್ಲಂಬಾಂಬುವದ್ಭಂಗುರಂ ।
ತಸ್ಮಿನ್ನಾಯುಷಿ ಶಾಂಗಲಿಂಗಭಜನಂ ಸ್ಯಾಚ್ಚೇತ್ತದಾಯುಃ ಶಿವೇ
ಸಾರ್ಥಕ್ಯಂ ಸಮುಪೈತಿ ತದ್ವಿರಹಿತಂ ವ್ಯರ್ಥಂ ಭವೇತ್ಕಷ್ಟಕೃತ್ ॥೭೭॥

ಯಮಭಟನಿಕಟಾರ್ಭಟೀರವಂ
ನಿಕಟೇ ಭೂಯತ ಏವ ತದ್ವಹಾನಾಂ ।
ವರಘೋಟಾರಿವಿಷಾಣ ಕೋಟಿಘೃಷ್ಟಾಃ
ಪರಿದೃಶ್ಯಂತ ಇಮೇ ಕೃತಾಂತವೃಕ್ಷಾಃ ॥೭೮॥

---

ಕಾಲಪಾಶದಿಂದ ಬಿಡುಗಡೆ ಹೊಂದುವುದರಲ್ಲಿ ನನ್ನ ಪೂಜೆಯನ್ನು ಬಿಟ್ಟರೆ ಇತರ ಯಾವುದೂ ಸಹಾಯಕವಾಗದೆಂದು ಧೈರ್ಯವಾಗಿ ಹೇಳುವೆನು. ॥೭೬॥

ಮಾನವನ ಆಯುಸ್ಸೆಂಬುದು, ವಾಯುವಿನಿಂದ ಅಂತರಿಕ್ಷದಲ್ಲಿ ಚಲಿತವಾಗುವ ಮೋಡದಿಂದ ಕೆಳಕ್ಕೆ ಬಿದ್ದ ಜಲಬಿಂದುವು ಬೆಳೆದ ಮರದ ಕೊನೆಯಲ್ಲಿರುವ ಚಿಗುರಿನ ಮೇಲೆ ನಿಂತರೆ, ಮತ್ತೆ ಅದು ಎಷ್ಟು ಹೊತ್ತು ಕೆಳಗೆ ಬೀಳದೆ ನಿಂತಿರಬಲ್ಲುದೋ, ಅಷ್ಟುಕಾಲಪರಿಮಾಣವುಳ್ಳುದು. ಅಂದರೆ ಅಷ್ಟು ಕ್ಷಣಿಕವಾದುದು. ಅಂತಹ ಮಾನವನ ಆಯುಸ್ಸಿನಲ್ಲಿ ಶಿವಲಿಂಗಭಜನೆಯು ನಿರ್ವಿಘ್ನವಾಗಿ ನಡೆದರೆ ಆಗ ಆ ಜೀವಿಯ ಆಯುಸ್ಸು ಸಾರ್ಥಕವೆನಿಸುವುದು; ಅವನ ಜೀವಿತಕಾಲದಲ್ಲಿ ಅದಿಲ್ಲದೇ ಹೋದರೆ ಆ ಬಾಳು ಕೇವಲ ವ್ಯರ್ಥವೂ ಕಷ್ಟತಮವೂ ಎನಿಸುವುದು. ॥೭೭॥

ಶಿವಪೂಜಾದಿ ಸತ್ಕರ್ಮಾಚರಣೆಯಿಲ್ಲದೆ ವ್ಯರ್ಥವಾದ ಆಯುಸ್ಸನ್ನು ಹೊಂದಿದವರಿಗೆ ಯಮದೂತರ ಕರಾಳವಾದ ಭಯಂಕರ ಶಬ್ದವು ಸರ್ವದಾ ಸಮೀಪದಲ್ಲಿಯೇ ಕೇಳುತ್ತಿರುವುದು. ಅದೂ ಅಲ್ಲದೆ ಶಿವಪೂಜಾದಿಗಳನ್ನಾಚರಿಸದಿರುವ ಪಾಪಿಷ್ಠರಿಗೆ ಮಹಿಷವಾಹನನಾದ ಯಮನೆಂಬ ವೃಕ್ಷವು ಮಹಿಷಗಳ ವಿಷಾಣದ ಗುರುತಿನಿಂದ ಕೂಡಿ ಸದಾ ದೃಗ್ಗೋಚರವಾಗುತ್ತಿರುವುದು. ॥೭೮॥

ಬಾಧಾಗಾಧಭವಹ್ರದಾಂತರಗತಾ
ಸ್ತಾಪತ್ರಯಾರ್ಕಾಂಶುಭಿಃ ।
ಸಂತಪ್ತಾ ಜನುನಾಶಸಂಸ್ಥಿತಿಮಹಾ
ದುಃಖಾಭಿಘಾತೋದ್ಯತಾಃ ॥೭೯॥

ವಿಷಯಾಮಿಷಭೋಜನೋ ಮನುಷ್ಯಾ
ಝುಷಜಾಲಾ ಇವ ಕಾಲಜಾಲಿಕಾಹೃತಾಂತೇ ॥೮೦॥

ಕಾಲವ್ಯಾಲೋರುದಂಷ್ಟ್ರಾನಲಕುಲಕುಲನಾಹೀನದುಃಖಾರ್ದಿತಾಂಗಾ
ಸ್ತೇಽಮೀ ಮಾನವಭೇಕವನ್ಮೌಢ್ಯಗತಯೋ ಸ್ವಾಸ್ಯಾಂತರಾಲಾಗತಂ ।
ಕೀಟಂ ಜೀವಿತುಮೇವ ಭಕ್ಷಯತಿ ಸಸ್ತದ್ವದ್ಧಿ ಮೂಢಾ ನರಾಃ
ಕಾಲಂ ಚಾಪ್ಯಸಮೀಕ್ಷ್ಯ ಭೋಗನಿರತಾಸ್ತೇ ಸ್ಥಾವರತ್ವಭ್ರಮ್ಯೈಃ ॥೮೧॥

ನಿತ್ಯಾನಿತ್ಯವಿವೇಕಶೂನ್ಯಮತಯೋ ತಿಷ್ಠಂತಿ ವಿಷ್ಠಾಶನಾಃ ॥೮೨॥

---

ತಾಪತ್ರಯ ಪೀಡೆಗಳೆಂಬ ಅಗಾಧವಾದ ಸಂಸಾರಸಾಗರದಲ್ಲಿ ಬಿದ್ದಿರುವವರು ಆಧ್ಯಾತ್ಮಿಕ, ಆದಿದೈವಿಕ, ಮತ್ತು ಆದಿಭೌತಿಕರೂಪವಾದ ತಾಪತ್ರಯಗಳೆಂಬ ಸೂರ್ಯನ ಕಿರಣಗಳಿಂದ ಕಾದು ಜನನ, ಮರಣ, ನಾಶ, ಸ್ಥಿತಿರೂಪಗಳಾದ ಮಹಾ ದುಃಖಗಳಿಂದ ಹೊಡೆಯಲ್ಪಟ್ಟು ಸದಾ ನರಳುವರು. ಸ್ರಕ್ಚಂದನ ವನಿತಾವಿಷಯಕ ರೂಪವಾದ ಮಾಂಸವನ್ನು ಉಪಭೋಗಿಸಲು ತೊಡಗುವ ಮಾನವರು ಯಮನೆಂಬ ಬೆಸ್ತನ ಗಾಳಕ್ಕೆ ಸಿಕ್ಕುವ ಮೀನುಗಳ ಗುಂಪಿನಂತೆ ತೊಂದರೆಗೀಡಾಗುವರು. ||೭೯-೮೦||

ಘೋರಸರ್ಪದ ದೊಡ್ಡ ದವಡೆಗಳ ವಿಷಜ್ವಾಲೆಯ ಮಧ್ಯದಲ್ಲಿರುವ ಕಪ್ಪೆಯು ತಾನಿರುವ ಸ್ಥಳವನ್ನು ತಿಳಿಯದೆ, ತಾನು ಬಹುಕಾಲ ಸುಖವಾಗಿರಬೇಕೆಂಬ ಬುದ್ಧಿ ಯಿಂದ ತನ್ನೆದುರಿಗೆ ಬರುವ ಸಣ್ಣಕ್ರಿಮಿಯನ್ನು ತಿನ್ನಲು ಪ್ರಯತ್ನಿಸುವುದು. ಅದರಂತೆ ಯಮನ ಹಿಡಿತದಲ್ಲಿ ಸಿಕ್ಕಿರುವ ಜನರು ತಾವು ಸ್ಥಿರವಾಗಿರುತ್ತೇವೆಂಬ ಬುದ್ಧಿಯಿಂದ ಕೇವಲ ಸ್ರಕ್‌ಚಂದನವನಿತಾದಿ ಭೋಗದ್ರವ್ಯಗಳನ್ನು ಅಪೇಕ್ಷಿಸುತ್ತಾ ಶಿವಧ್ಯಾನವಿಮುಖರಾಗುವರು. ಇಂತಹವರು ಶಾಶ್ವತ ಮತ್ತು ಅಶಾಶ್ವತರೂಪವಾದ ಪ್ರಪಂಚದ ವಿವೇಕವಿಲ್ಲದೇ ಕೊನೆಗೆ ನರಕದಲ್ಲಿ ಬಿದ್ದು ಅಮೇಧ್ಯಭಕ್ಷಕರಾಗು ತ್ತಾರೆ. ||೮೧-೮೨||

ಆಯುಃ ಪ್ರಯಾತಿ ಗಿರಿಜೇ ತಟಿನೀರಯಾಂಬು
ಪ್ರಾಗ್ಭಾಗಸಂಗತಮಿವ ಪ್ರಸರಂ ನ ಪಶ್ಚಾತ್ ।
ವ್ಯಾಘ್ರಾದಿಭಿಶ್ಚ ನಿಯತಂ ನರಕಾ ನರಾಣಾಂ
ತಸ್ಮಾಂತರಾ ಯದಿ ಶಿವೋರ್ಚಿತ ಏವ ಸಾಧುಃ ॥೮೩॥

ಭವೋರುವಿಪಿನಾವನೀ ಪ್ರಭವಮೃತ್ಯುಸಂಸ್ಥಾಹ್ರದಃ
ತಟಾಂತವಿಷಯಾವಟಪ್ರಸೃತಕಾಮುಷಟ್ಕಂಟಕಂ ।
ಗದಾಶ್ಚ ಮೃಗಸಪ್ರಭಾಃ ಪರಿಚರಂತಿ ತಸ್ಮಿಂಭಿವೇ
ಜರಾವೃಕತೃಷಾಶಿವಾವೃತಮಪಾರದುಃಖದ್ರುಮೈಃ ॥೮೪॥

ವಿಧಿಸೃಷ್ಟಗಿರೀಂದ್ರಜಾತಧಾರಾ
ಪ್ರಭವಾ ಸಾ ತಟನೀ ಭವೋರುನೀರಾ ।
ಜನಿಮೃತ್ಯುವಿವರ್ತಿತಾರ್ತಿಫೇನಂ
ಜಗದೇತನ್ನಯತಿ ಯಮಾಂಬುರಾಶಿಂ ॥೮೫॥

---

ಪಾರ್ವತಿಯೇ! ಆಯುಸ್ಸು ನದಿಯ ಪ್ರವಾಹದ ಮುಂದಿನ ನೀರಿನ ಗುಳ್ಳೆಯಂತೆ ಬಹಳ ಜಾಗ್ರತೆಯಾಗಿ ಕಳೆದುಹೋಗುವುದು. ಹಿಂದೆ ಬರಲಾರದು. ವ್ಯಾಘ್ರರೂಪವಾದ ಮನೋವ್ಯಥೆಗಳಿಂದ ನಿಶ್ಚಯವಾಗಿಯೂ ಮಾನವರಿಗೆ ಈ ಜನ್ಮವು ನರಕವೇ ಸರಿ; ಈ ಚಂಚಲವಾದ ಆಯುಃಪ್ರಮಾಣದಲ್ಲಿ ಶಿವನನ್ನು ಪೂಜಿಸಿದವನೇ ನಿಜವಾಗಿಯೂ ಸಾಧುವೆನಿಸುವನು. ॥೮೩॥

ಸಂಸಾರವೆಂಬ ದೊಡ್ಡ ಅರಣ್ಯಭೂಮಿಯಲ್ಲಿ ಮೃತ್ಯುಸ್ಥಾನಗಳೆಂಬ ಅನೇಕ ಮಡುಗಳಿರುವುವು. ಅದರ ದಡದ ಕೊನೆಯಲ್ಲಿ ವಿಷಯಗಳೆಂಬ ಹಳ್ಳವಿರುವುದು. ಆ ವಿಷಯಾವಟದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಆರು ಮುಳ್ಳುಗಳಿರುವುವು. ರೋಗಗಳು ಜಿಂಕೆ (ಪ್ರಾಣಿ) ಗಳಂತೆ ಅಲ್ಲಲ್ಲಿ ಆ ಅರಣ್ಯದಲ್ಲಿ ಅಲೆಯುತ್ತಿರುವುವು. ಪಾರ್ವತಿಯೇ ! ಮುಪ್ಪೆಂಬ ತೋಳಗಳೂ ಹಸಿವೆಂಬ ನರಿಗಳೂ, ಅಪಾರವಾದ ದುಃಖಗಳೆಂಬ ಮರಗಳೂ ಆ ಅರಣ್ಯದಲ್ಲಿ ದಟ್ಟವಾಗಿರುವುವು. ॥೮೪॥

ಬ್ರಹ್ಮಸೃಷ್ಟವಾದ ಪರ್ವತದಿಂದ ಹೊರಟ ಜಲಧಾರೆಯಿಂದ ಸಂಸಾರವೆಂಬ ಅಗಾಧನೀರುಳ್ಳ ನದಿಯು ಹುಟ್ಟಿತು. ಇದು ಜನನ ಮರಣರೂಪವಾದ ಸುಳಿ

॥ ಶ್ರೀಸ್ಕಂದ ಉವಾಚ ॥

ತದೇವಂ ವಿಧಿಮಾಕರ್ಣ್ಯ ಶಿವವಕ್ತ್ರಾದ್ಗಿರೀಂದ್ರಜಾ ।
ತುಷ್ಟಾವ ದೇವಂ ಹೃಷ್ಟಾಂತಃಕರಣೇನ ಮಹೇಶ್ವರೀ ॥೮೭॥

॥ ಶ್ರೀ ದೇವ್ಯುವಾಚ ॥

ವಸುಧಾಧರಹಾಸವಾಸ ಶಂಭೋ
ವಸುಧಾರಾಧಿಪಪೂಜ್ಯಪಾದ ದೇವ ।
ಸುಸುಧಾಧರಶೇಖರತ್ವಮೀಶೋಽಸ್ಯ
ಸುನಾಥೋಽಸ್ಯ ಧರಾಶ್ರಿತಾರ್ಧದೇಹಃ ॥೮೭॥

ತಾರಾಕಾರಸುಹೀರಹಾರಕ ಭವತ್ಕಾಕೋದರಾಕಾರಧೃಕ್
ಕರ್ಪೂರಾಭಕಲೇವರಾದಿವಿಲಸನ್ಮಾರಾಂಗಭಸ್ಮಾಕ್ತಧೃಕ್ ।
ಪಾರಾವಾರಭವೋರುಸಾಗರ ಮಹಾನ್ವೈಶ್ವಾನರಾಯೊದ್ಯತೇ
ಸಾರಾಸಾರವಿಚಾರಕಾರಣವಿಭೋ ಪಾದೌ ಭಜಾಮ್ಯೇವ ತೇ ॥೮೮॥

---

ಗಳನ್ನು ಸೇರಿಸುವ ನೊರೆಯುಳ್ಳದಾಗಿರುವುದು. ಇಂತಹ ನೊರೆಯು ಈ ಪ್ರಪಂಚ ವನ್ನು ತನ್ನ ಸುಳಿಯಲ್ಲಿ ಸಿಕ್ಕಿಸಿಕೊಂಡು ಯಮನೆಂಬ ಸಮುದ್ರಕ್ಕೆ ಒಯ್ಯುತ್ತದೆ. ॥೮೫॥

ಈರೀತಿಯಾಗಿ ಪಾರ್ವತಿಯು ಶಿವನಮುಖದಿಂದಲೇ ಶಿವಲಿಂಗಪೂಜಾವಿಧಿ ಯನ್ನು ಕೇಳಿ, ಸಂತುಷ್ಟಾಂತಃ ಕರಣಳಾಗಿ ಅತ್ಯಂತಸಂತೋಷದಿಂದ ಮಹಾ ದೇವನನ್ನು ಇಂತು ಸ್ತೋತ್ರಮಾಡಿದಳೆಂದು ಜೈಗೀಷವ್ಯನಿಗೆ ಸ್ಕಂದದೇವನು ನುಡಿದನು. ॥೮೬॥

“ ಕೈಲಾಸಪರ್ವತದಲ್ಲಿ ಬಹು ಸಂತೋಷದಿಂದ ಆನಂದಮೂರ್ತಿಯಾಗಿರುವ ಶಂಭುವೇ! ವಿಷ್ಣುವಿನಿಂದ ಪೂಜಿಸಲ್ಪಟ್ಟ ಪಾದವುಳ್ಳ ದೇವದೇವನೇ! ಪೂರ್ಣ ಚಂದ್ರಶೇಖರನಾದ ಸ್ವಾಮಿಯೇ! ದೇವಿಯಿಂದಲಂಕೃತವಾದ ಅರ್ಧದೇಹವುಳ್ಳ ನೀನು ಈ ಜಗತ್ತಿಗೆಲ್ಲಾ ಪ್ರಾಣನಾಥನಾಗಿರುವೆ. ॥೮೭॥

ನಕ್ಷತ್ರಾಕೃತಿಯುಳ್ಳ ಉತ್ತಮವಾದ ಹೀರರತ್ನಹಾರವುಳ್ಳವನೇ! ನೀನು ಸರ್ಪಾಭರಣನು, ಕರ್ಪೂರದ ಬಣ್ಣದ ದೇಹಾದಿಗಳಿಂದ ಶೋಭಿಸುತ್ತಿರುವವನು.

ಭವ ಭವ ಶಂಕರ ಹರ ಮೃಡ ಗರಧರ
ಕುರು ಕುರು ಕರುಣಾಂ ಶಶಿಮೌಳೀ ।
ಶಿವ ತವ ವದನಾಂಬುಜರಸಮಧುನಾ
ಮಧುವಿಧುಸುರಸಂವಿಧುನೋತಿ ॥೮೯॥

॥ ಶ್ರೀ ಸ್ಕಂದ ಉವಾಚ ॥

ಉಮಾಪರಿವೃಢಂ ದೃಢಂ ನ ಹಿ ಭಜಂತಿ ಮೂಢಾ ಜನಾಃ
ವಿಮೂಢಮತಯೋ ಭೃಶಂ ಪರಿವಿಶಂತಿ ಗಾಢಂ ತಮಃ ।
ಅಸಾರಭವಸಾಗರೇ ಸುಚಿರಮೇವ ಪಾಪಾದರಾ
ಶ್ಚರಂತಿ ವಿಷಯಾತುರಾಃ ಶಿವಪದಾರ್ಚನಾವರ್ಜಿತಾಃ ॥೯೦॥

---

ಮನ್ಮಥನ ದೇಹವನ್ನು ಹಣೆಗಣ್ಣಿನಿಂದ ಭಸ್ಮಮಾಡಿದವನು. ಈ ಸಂಸಾರವೆಂಬ ಕೊನೆಮೊದಲಿಲ್ಲದ ದೊಡ್ಡ ಸಾಗರವನ್ನು ಉಕ್ಕಿಸುವುದರಲ್ಲಿ ನೀನು ಬಡಬಾಗ್ನಿಯಂತಿರುವೆ. ಸಾರಾಸಾರ ವಿಚಾರಮಾಡುವುದರಲ್ಲಿ ಕಾರಣಭೂತನಾದ ಪ್ರಭುವೆ! ನಿನ್ನ ಪಾದಗಳನ್ನು ತಪ್ಪದೆ ನಾನು ಭಜನೆಮಾಡುವೆನು. ॥೮೮॥

ಜಗದುದ್ಭವ ಕಾರಣನಾದ ಶಂಕರನೇ! ಪ್ರಪಂಚವನ್ನು ಪ್ರಳಯಕಾಲದಲ್ಲಿ ಸಂಹರಿಸುವವನೂ, ನಿತ್ಯಸುಖವನ್ನುಂಟುಮಾಡುವವನೂ, ವಿಷಕಂಠನೂ, ಚಂದ್ರಮೌಳಿಯೂ ಆದ ಶಿವನೇ! ನನ್ನಲ್ಲಿ ದಯೆತೋರಿಸು. ಶಿವನೆ! ನಿನ್ನ ಮುಖಕಮಲರಸಜನ್ಯವಾದ ಈ ಶಿವರಹಸ್ಯವೆಂಬ ಮಧುವು ನಿಜವಾಗಿ ಚಂದ್ರನ ಅಮೃತವನ್ನು ಈಗ ತಿರಸ್ಕರಿಸುತ್ತಿದೆ'' ಎಂದು ದೇವಿಯು ಪತಿಯನ್ನು ಸ್ತೋತ್ರಮಾಡಿದಳು. ॥೮೯॥

ಮೂಢಜನರು ಉಮಾಸಹಚರನಾದ ಮಹೇಶನನ್ನು ದೃಢವಾಗಿ ಭಜನೆಮಾಡದೇ ಬುದ್ಧಿಹೀನರಾಗಿ ಕೊನೆಗೆ ಪಾಪಿಷ್ಠರೆನಿಸಿ ಗಾಢವಾದ ಅಂಧಕಾರವನ್ನು ಪ್ರವೇಶಿಸುವರು. ನಿಸ್ಸಾರವಾದ ಈ ಸಂಸಾರಸಾಗರದಲ್ಲಿ ಬಿದ್ದು ಬಹಳಕಾಲ ಕೇವಲ ಪಾಪಕಾರ್ಯಗಳಲ್ಲಿ ಆದರವುಳ್ಳವರಾಗಿ ವಿಷಯಲಂಪಟರೆನಿಸಿ ಶಿವನ ಪಾದಕಮಲಪೂಜೆಯನ್ನು ತ್ಯಜಿಸುವರು. ॥೯೦॥

ಅಂಶೋಽಯಂ ದಶಮಃ ಸದಾ ಶಮಧನೈಃ ಸೇವ್ಯೋಽಯಮೀಶಾರ್ಚಕೈಃ
ಆಶಾಪಾಶವಿಹೀನಚಾರುಮತಿಭಿಃ ಸಂಸೇವನೀಯೋ ವಿಧಿಃ ।
ಘೋರಾಪಾರವಿಕಾರಸಾಗರತರಿಃ ಸಮ್ಯಕ್ಪ್ರತೋಽಯಂ ಭವೇ
ಚ್ಚಂದ್ರೋತ್ಕ್ತಂ ಸಕಿರೀಟಪಾದಭಜನೇ ಚಿತ್ತಂ ಪ್ರವೃತ್ತಂ ಭವೇತ್
ಹೃತ್ತಾಪಾದ್ವಿರಹೀ ಭವೇತ ನಿಯತಂ ಪಾಪೈರ್ವಿಮುಕ್ತೋಭವೇತ್ ॥೯೧॥

ಗೋಭೂಹಿರಣ್ಯಕಲಧೌತನಗಪ್ರಭೋರು
ದಾನೈರನೇಕಜನುಭಿರ್ಯದಿ ಪುಣ್ಯಭಾಕ್ಸ್ಯಾತ್ ।
ತಸ್ಯಾಯಮೀಕ್ಷಣಪಥೇ ಭವತಿ ಪ್ರಕಾಮ
ಮಸ್ಯಾಂಶಲೇಶಮಹಿಮಾ ಗದಿತಸ್ತವಾದ್ಯ ॥೯೨॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಈಶ್ವರಾಖ್ಯೇ ಪೂರ್ವಾರ್ಧೇ
ಶಿವಗೌರೀಸಂವಾದೇ ಪಂಚಾಶೋಽಧ್ಯಾಯಃ

## ಪೂರ್ವಾರ್ಧಃ ಸಮಾಪ್ತಃ

ಶ್ರೀ ಕಾಶೀವಿಶ್ವೇಶ್ವರಾರ್ಪಣಮಸ್ತು

---

ಆಶೆಯೆಂಬ ಬಂಧನಕ್ಕೊಳಗಾಗದೆ ಸನ್ಮಾರ್ಗಗಾಮಿಯಾದ ಬುದ್ಧಿಯುಳ್ಳವರೆನಿಸಿ ಶಾಂತಿಧನವೆನಿಸಿದ ಶೈವವರ್ಯರು ಈ ಹತ್ತನೆಯ ಅಂಶವನ್ನು ಯಾವಾಗಲೂ ವಿಶೇಷಪ್ರೀತಿಯಿಂದ ಓದಬೇಕು. ಇದರಲ್ಲಿ ಹೇಳಿರುವ ಶಿವಪೂಜಾವಿಧಿಯನ್ನು ಪೂರ್ಣವಾಗಿ ಅನುಸರಿಸಬೇಕು. ಇದನ್ನು ಚೆನ್ನಾಗಿ ತಿಳಿದುಕೊಂಡರೆ ಭಯಂಕರವಾದ ಅನೇಕ ವಿಕಾರಗಳಿಂದ ಕೂಡಿದ ಸಂಸಾರಸಾಗರವನ್ನು ಸುಲಭವಾಗಿ ದಾಟಲು ದೋಣಿಯಂತಾಗುವುದು. ಅಲ್ಲದೇ ಚಂದ್ರಶಿರೋಭೂಷಣನಾದ ಶಂಕರನ ಪಾದಭಜನೆಯಲ್ಲಿ ಮನಸ್ಸು ನಿರರ್ಗಳವಾಗಿ ಪ್ರವರ್ತಿಸುವುದು. ॥೯೧॥

ಈ ಅಂಶವನ್ನು ಓದಿ ಇದರಲ್ಲಿರುವ ಎಲ್ಲ ವಿಷಯುವನ್ನರಿಯುವುದರಿಂದ ಮಾನವರ ಹೃದಯದುಃಖವು ಕಳೆದು ನಿಜವಾಗಿಯೂ ಅವರು ಸಕಲ ಪಾಪಗಳಿಂದಲೂ ಮುಕ್ತರಾಗುವರು. ಗೋವುಗಳು, ಭೂಮಿ, ಚಿನ್ನ, ಬೆಳ್ಳಿ, ಆಭರಣ, ಮುಂತಾದ ಅನೇಕ ಮಹಾದಾನಗಳನ್ನು ಮಾಡಿ, ಬಹಳ ಜನ್ಮಗಳಿಂದ ಪುಣ್ಯಗಳಿಸಿದ್ದರೆ

ಅವನಿಗೆ ಮಾತ್ರ ಈ ಹತ್ತನೆಯ ಅಂಶದ ಕಥೆಯು ದೃಷ್ಟಿಗೋಚರವಾಗುವುದೆಂದು ತಿಳಿ. ಅಯ್ಯ ಜೈಗೀಷವ್ಯನೇ ! ಈ ಹತ್ತನೆಯ ಅಂಶದ ಮಹಿಮೆಯಲ್ಲಿ ಎಲ್ಲೋ ಸ್ವಲ್ಪ ಭಾಗವನ್ನು ಮಾತ್ರ ಈಗ ನಾನು ನಿನಗೆ ಹೇಳಿರುವೆನು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಪಾರ್ವತೀಪರಮೇಶ್ವರರ ಸಂಭಾಷಣರೂಪವಾದ ಕಥೆಯನ್ನರುಹಿದನು. ॥೯೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಹತ್ತನೆಯ ಅಂಶದಲ್ಲಿ 'ಈಶ್ವರಸಂಜ್ಞಕವಾದ ಪೂರ್ವಾರ್ಧದಲ್ಲಿ ಶಿವ ಮತ್ತು ಗೌರೀ ಇವರಿಬ್ಬರ ಸಂವಾದರೂಪವಾದ ಐವತ್ತನೆಯ ಅಧ್ಯಾಯವು ಮುಗಿದುದು.

ಇಲ್ಲಿಗೆ ಹತ್ತನೆಯ ಅಂಶದ ಪೂರ್ವಾರ್ಧವು ಮುಗಿಯಿತು.

॥ ಶ್ರೀಕಾಶೀವಿಶ್ವೇಶ್ವರನಿಗೆ ಅರ್ಪಿತವಾಗಲಿ ॥